# ಕಾಲರಂಗ

ಕೃಷ್ಣಾನಂದ ಕಾಮತ



# ಕಾಲರಂಗ

## ಚಿತ್ರಗಳ ಪರಿವಿಡಿ

ಅಧ್ಯಾಯ ೧

1) ಗೊಂಡ ಮುದಿಯ
2) ಸಾಲಂಕೃತ ಗೊಂಡತಿಯರು

ಅಧ್ಯಾಯ ೨

1 ಕೋಳಿಗಳೊಂದಿಗೆ ಗೊಂಡತಿಯರು.
2) ಆದಿವಾಸಿ ಡೋಲು - ವಾದ್ಯವೃಂದ

ಅಧ್ಯಾಯ ೩ (ತಾಯಿಯ ಸಂತೆ)

1) 'ಗಂಡಮಾಳ'ದ ಗೊಂಡತಿ
2) ಬಿಲ್ಲುಬಾಣದ ಗೊಂಡರು

ಅಧ್ಯಾಯ ೪ ವಿದ್ಯಾವಂತರು

ಅಧ್ಯಾಯ ೫

ಆದಿವಾಸಿಗಳು

1) ಮುರಿಯ ಸುಂದರಿ
2) ಕೊರ್ಕು ಕೂಲಿ
3) ಮಾರಿಯಾ ಸ್ತ್ರೀಗಳು

# ಕಾಲರಂಗ

[ ಪ್ರವಾಸ ಕಥನ ]



ಕೃಷ್ಣಾನಂದ ಕಾಮತ



೧೯೮೨



ಮನೋಹರ ಗ್ರಂಥಮಾಲಾ
ಲಕ್ಷ್ಮೀಭವನ, ಸುಭಾಸರಸ್ತೆ
ಧಾರವಾಡ-೫೮೦ ೦೦೧

KALARANGA : (Kannada) A Travellogue by Krishnanand Kamat
Published by Manohara Grantha Mala, Dharwad - 580 001
Printed at Grantha Mudrana, Dharwad - 1 (Karnatak State)
First Edition : August 1982 Copies : 2500 Pages : 192
Price: Rs. 16-00 Ordinary Rs. 25-00 Calico



ಸಂಪಾದಕ-ಪ್ರಕಾಶಕ : ಜಿ. ಬಿ. ಜೋಶಿ

ಸಾಹಿತ್ಯ-ಸಲಹೆಗಾರರು : ಕೆ. ಡಿ. ಕುರ್ತಕೋಟಿ

ವ್ಯವಸ್ಥಾಪಕ : ರಮಾಕಾಂತ ಜೋಶಿ

ವಾರ್ಷಿಕ ಚಂದಾ :

ಸಾದಾ ಪ್ರತಿ : ೩೫-೦೦ + (ರೂ. ೫-೦೦ ಅಂಚೆವೆಚ್ಚ ಪ್ರತ್ಯೇಕ)

ಕ್ಯಾಲಿಕೊ ಪ್ರತಿ: ೫೦-೦೦ + (ರೂ. ೫-೦೦ ,, ,, )

ಬೆಲೆ :

ಸಾದಾ ೧೬-೦೦; ಕ್ಯಾಲಿಕೋ ೨೫-೦೦

ಪ್ರಕಾಶನ : ಮನೋಹರ ಗ್ರಂಥಮಾಲಾ, ಧಾರವಾಡ-೧

ಮುದ್ರಣ : ಗ್ರಂಥಮುದ್ರಣ, ಧಾರವಾಡ-೧

# ಮೊದಲ ಮಾತು

ತಂದೆ-ತಾಯಿಗಳು ಪೂರೈಸುವ ಗುಟುಕನ್ನು ಸ್ವಾಗತಿಸುತ್ತ ಅವರೇ ನಿರ್ಮಿಸಿದ ಬೆಚ್ಚಗಿನ ಗೂಡಿನಲ್ಲಿ ಹಾಯಾಗಿ ಇರಬಯಸುವ ಭಾರತೀಯರಿಗೆಲ್ಲ ಸಾಹಸವೆಂಬುದು ಬೇರೆಯವರ ಸೊತ್ತು. ಸಾಹಸದ ಕತೆಗಳನೆಲ್ಲ ಪುಸ್ತಕಗಳಲ್ಲಿ ಓದಿಯೋ, ಚಲಚ್ಚಿತ್ರಗಳಲ್ಲಿ ನೋಡಿಯೋ ಆನಂದಿಸುವದಕ್ಕಿಂತ ಮುಂದೆ ಹೋಗುವ ಸಾಹಸ, ಹೆಚ್ಚಿನವರಿಂದ ಆಗದು; ಅಂತೆಯೇ ನದಿಗಳಲ್ಲಿ ಈಜುವದು, ಕಾಡಿನಲ್ಲಿ ಅಲೆದಾಡುವದು, ಗುಡ್ಡ-ಬೆಟ್ಟಗಳನ್ನು ಹತ್ತುವದು ಅವರಿಗೆ ಒಗ್ಗದು. ಕೆಲ ದಿನಗಳಿಗಾಗಿ ಪರವೂರಿಗೆ ಹೋದರೂ ಅಲ್ಲಿ ಒಳ್ಳೆಯ ಫಿಲ್ಟರ್ ಕಾಫಿ, ಸಾರು, ಹುಳಿ, ಸ್ನಾನ, ನಿದ್ರೆ ಸರಿಯಾಗಲಿಲ್ಲವೆಂದು ಗೊಣಗುತ್ತಲೇ ಹಿಂದಿರುಗುತ್ತಾರೆ. ಪ್ರವಾಸದ ಪ್ರಯಾಸದಲ್ಲಿ ಹೆಮ್ಮೆ, ಆನಂದ, ಸುಖಪಡುವವರಂತೂ ತೀರ ವಿರಳ.

ಅಮೇರಿಕೆಯ "ನ್ಯಾಶನಲ್ ಜಿಯೊಗ್ರಾಫಿಕ್" ಮಾಸಿಕದಲ್ಲಿ ಪ್ರಕಟವಾದ ಸುಂದರ ಛಾಯಾಚಿತ್ರಗಳನ್ನು ನೋಡಿದಾಗ, ಅದರ ಪತ್ರಿಕಾಕರ್ತರಂತೆ ಅಲೆಮಾರಿಯಾಗಿ ಅಲೆಯಬೇಕು ಎಂದು ಅನಿಸದಿರದು. ಪಾಶ್ಚಾತ್ಯರು ತಮ್ಮ ಸಾಹಸಕ್ಕಾಗಿ ಎಂಥ ಬೆಲೆಯನ್ನು ಕೊಡಲೂ ಹಿಂದೆಮುಂದೆ ನೋಡುವದಿಲ್ಲ. ಹಿಮಖಂಡ, ಉತ್ತುಂಗ-ಶಿಖರ, ಸೀಮಾತೀತ ಗಗನ, ರಣಗುಡುವ ಮರುಭೂಮಿ, ಹಿಂಸ್ರಪಶುಗಳಿದ್ದ ದಟ್ಟಕಾಡುಗಳನ್ನು ಹೆಚ್ಚಿನ ಧೈರ್ಯದಿಂದ ಎದುರಿಸುತ್ತಾರೆ. ಆಸ್ಟ್ರೇಲಿಯಾಖಂಡದ ಆದಿವಾಸಿಗಳ ಕಲೆ ಅಭ್ಯಸಿಸಲು ಹೊರಟ ಗವರ್ನರ್ ರಾಕ್‌ಫೆಲರ್‌ನ ಪುತ್ರನು ಹೇಳಹೆಸರಿಲ್ಲದೇ ಮಾಯವಾಗಿ

ಹೋದ. ಇಂಥ ಸಾಹಸ ಸುಲಭಸಾಧ್ಯವಲ್ಲದಿದ್ದರೂ ದೇಶದ ಉದ್ದಕ್ಕೂ ಓಡಾಡಬೇಕೆಂಬ ಕನಸು ಬಲು ಕಾಲದಿಂದಲೂ ಕಾಣಿಸಿಕೊಂಡಿತ್ತು. ಒಮ್ಮೆ ಸಹೋದ್ಯೋಗಿಯೊಡನೆ ಮೋಟಾರ್‌ಸಾಯಕಲ್ ಮೇಲೆ ಕಲಕತ್ತೆಯಿಂದ ಕನ್ಯಾಕುಮಾರಿ, ಕರಾಚಿ, ಕಾಶ್ಮೀರದ ತನಕ ಹೋಗಿಬರಬೇಕೆಂದು ಯೋಜಿಸಿದರೂ, ಕಾರ್ಯಗತಮಾಡುವದರಲ್ಲಿ ಹಲವಾರು ಅಡಚಣೆಗಳು ಬಂದಿದ್ದರಿಂದ ಕೈಬಿಡಬೇಕಾಯಿತು. ಆದರೆ ಕರ್ನಾಟಕ ರಾಜ್ಯ-ಸಾಹಿತ್ಯ-ಅಕಾಡೆಮಿಯುವರು ಶಿಷ್ಯವೇತನ ಕೊಟ್ಟು ಬೇರೊಂದು ರಾಜ್ಯದ ಬಗ್ಗೆ ಗ್ರಂಥರಚನೆ ಮಾಡಲೆಂದೇ ಒಂದು ವರ್ಷ ಅಲೆಮಾರಿಯಾಗಲು ಅವಕಾಶ ಮಾಡಿಕೊಟ್ಟಾಗ ಬಿಡುವದು ಉಂಟೇ?

ಪಶ್ಚಿಮ-ಕರಾವಳಿಯ ಹಾಲಕ್ಕಿ ಗೌಡರು, ನೀಲಗಿರಿ ಬೆಟ್ಟದ ತೋಡರು, ರಾಜಸ್ಥಾನದ ನಡಿಯಾ-ಲೋಹಾರರು, ಬಂಗಾಲದ ಸಂತಾಲರನ್ನು ಹತ್ತಿರದಿಂದ ಕಾಣುವಂತಾದ್ದರಿಂದ ಆದಿವಾಸಿಗಳಲ್ಲಿ ನನ್ನ ಕುತೂಹಲ ಕೆರಳಿತ್ತು. ವೆರಿಯರ್ ಎಲ್ವಿನ್‌ರು ಮಧ್ಯಭಾರತದ ಆದಿವಾಸಿಗಳ ಜೀವನದ ಬಗ್ಗೆ ರಂಜಕವಾಗಿ ಬರೆದಿದ್ದರಿಂದ ವಿವರವಾದ ಅಭ್ಯಾಸಕ್ಕೆ ಮಧ್ಯಪ್ರದೇಶಕ್ಕಿಂತ ಬೇರೆ ಯಾವ ರಾಜ್ಯವೂ ಆಕರ್ಷಣೀಯವಾಗಿ ತೋರಲಿಲ್ಲ. ಆದರೆ ಹುಲಿ,ಕರಡಿ, ಕಾಡುಹಂದಿಗಳೊಡನೆ ಕಾಡುಗಳಲ್ಲಿ ಬಾಳಿ, ಬದುಕುವ ಆದಿವಾಸಿಗಳ ಅಭ್ಯಸನ ತೀರ ಕಷ್ಟದಾಯಕವಾಗಿ ಪರಿಣಮಿಸಿತು. ಪ್ರಾರಂಭಿಸಿದ ಕೆಲಸ ಮುಗಿಸಲೇಬೇಕೆಂಬ ಹಟವಿರದಿದ್ದರೆ ಹೋದ ಒಂದೇ ವಾರದಲ್ಲಿ ಹಿಂದಿರಗಿಬರುವಂತೆ ಆಗುತ್ತಿತ್ತೋ ಏನೋ! ಅಶುದ್ಧ ನೀರಿನ ಸೇವನೆಯಿಂದ ಉಂಟಾದ ಅನಾರೋಗ್ಯದಿಂದ ಬಳಲಿದರೂ ದಿನ ಒಂದಕ್ಕೆ ೩೦-೪೦ ಕಿಲೋಮೀಟರ್ ನಡೆಯಬೇಕಾಗಿ ಬಂದರೂ ಬೇರಾವ ವಾಹನ ಸಿಗದಿದ್ದಾಗ, ಚಕ್ಕಡಿ-ನಾವೆಗಳಲ್ಲಿ ಪ್ರಯಾಣಮಾಡಬೇಕಾಗಿ ಬಂದರೂ, ಪ್ರವಾಸ ಮುಗಿಸುವ ಛಲ ಬಲವಾಗಿತ್ತು. ಎಲ್ಲ ಅನುಭವಗಳನ್ನು ಬರವಣಿಗೆಯಲ್ಲಿ ಅಳವಡಿಸಿಕೊಳ್ಳುವದು ಅಷ್ಟು ಸುಲಭಸಾಧ್ಯವಲ್ಲ. ವರ್ಷದ ಅಭ್ಯಾಸದ ಆಧಾರದ ಮೇಲೆ ಹಲವಾರು ಗ್ರಂಥಗಳನ್ನು ರಚಿಸಬಹುದು. ಆದ್ದರಿಂದ ಈ ಗ್ರಂಥ ಕೇವಲ ಮುನ್ನಡಿ ಎಂದರೆ ಅತಿಶಯೋಕ್ತಿಯಾಗದು.

ವಿಂಧ್ಯ-ಸಾತಪುಡಾ ಪರ್ವತಾವಳಿಗಳು, ನರ್ಮದಾ, ತಾಪಿ, ಮಹಾ

ನದಿಗಳು, ಗುಡ್ಡ-ಬೆಟ್ಟಗಳು, ಗಿರಿ-ಕಂದರಗಳು, ಕಾಡು-ಮೇಡುಗಳು, ಗೊಂಡ-ಮಹಾರಿಯಾ-ಮುರಿಯರಂತಹ ಆದಿವಾಸಿಗಳು, ಅವರ ನೃತ್ಯ-ಸಂಗೀತ, ಕಲೆ, ಹಬ್ಬ-ಹುಣ್ಣಿವೆಗಳನ್ನು ನೆನೆಸಿಕೊಂಡಾಗೆಲ್ಲ ಅದೊಂದು ಕನಸಿನ ಪ್ರಪಂಚದಂತೆ ಭಾಸವಾಗುತ್ತದೆ. ಮಧ್ಯಪ್ರದೇಶದ ಬಸ್ತರ-ಜಿಲ್ಲೆಯೊಂದೇ ಕೇರಳರಾಜ್ಯಕ್ಕಿಂತ ವಿಸ್ತಾರವಾಗಿರುವದರಿಂದ ಆ ರಾಜ್ಯದ ವಿಶಾಲತೆಯ ಕಲ್ಪನೆ ಬರುವಂತಿದೆ. ಅಶೋಕ, ವಿಕ್ರಮಾದಿತ್ಯ, ಭೋಜರಾಜ, ಚಂದೇಲ ಅರಸರು ಆ ರಾಜ್ಯವನ್ನು ವೈಭವದ ಶಿಖರಕ್ಕೇರಿಸಿದ ಶಿಖಾಮಣಿಗಳು. ವರಕವಿ ಕಾಲಿದಾಸ, ಆ ಭೂಮಿಯನ್ನು ಅಮರವಾಗಿಸಿದ. ಸಂಗೀತ ಸಮ್ರಾಟ್ ತಾನಸೇನ ಗ್ವಾಲೇರದಲ್ಲಿ ತನ್ನ ಶಾಶ್ವತವಾದ ಕುರುಹು ಬಿಟ್ಟುಹೋದ. ಮಾಂಡುವಿನ ಬಾಝ್ ಬಹಾದ್ದೂರ್-ರೂಪಮತಿಯರು ಆದರ್ಶಪ್ರೇಮದ ಮೂರ್ತಿಮತ್ತಾದರು. ಖಜುರಾಹೋ, ತನ್ನ ಅಪೂರ್ವ ಶಿಲ್ಪಗಳಿಂದಾಗಿ ವಿಶ್ವಖ್ಯಾತಿ ಪಡೆದಿದೆ. ಇವೆಲ್ಲವುಗಳಿಗಿಂತ ಆಕರ್ಷಕವಾಗಿರುವ ಆದರೆ ಭರದಿಂದ ಕಣ್ಮರೆಯಾಗುತ್ತಿರುವ ಮೂಲ ಬಂಡಕಟ್ಟಿನವರ ಅಪರೂಪದ ಸರಳ, ಸಭ್ಯಜೀವನ, ಇಂದಿಗೂ ಹೊರ ಜಗತ್ತಿಗೆ ಅಜ್ಞಾತವಾಗಿಯೇ ಉಳಿದಿದೆ. ಇದರಂತೆ ಆ ರಾಜ್ಯದಲ್ಲಿ ವಿಪುಲವಾಗಿರುವ ಆದಿಮಾನವ ಗುಹಾ-ಕಲೆ, ಜಗತ್ತಿನ ಕಣ್ಣಿಗೆ ಮರೆಯಾಗಿಯೇ ಉಳಿದಿದೆ. ಇವುಗಳನ್ನೆಲ್ಲ ಆಳವಾಗಿ ಅಭ್ಯಾಸಮಾಡಿ, ತಜ್ಞರು ತಿಳಿಹೇಳಿದಾಗಲೇ ನಮ್ಮ ಅಜ್ಞಾನ ತೊಲಗಬೇಕು. ಅಲ್ಲಿಯ ತನಕ ಈ ರಾಜ್ಯ, ಐವತ್ತುಸಾವಿರ ವರ್ಷಗಳಿಂದ ಮಾನವಜನಾಂಗ ಹಲ ಅಂಕಗಳಲ್ಲಿ ಆಡಿದ ಜೀವನನಾಟಕದ **'ಕಾಲರಂಗ'**ವಾಗಿದೆ ಎಂದಿಷ್ಟೇ ಅರಿತರೆ ಸಾಕು.

ಮಧ್ಯಪ್ರದೇಶದ ವಾಸದಲ್ಲಿ ಎದುರಿಸಬೇಕಾದ ತೊಂದರೆಯ ದ್ಯೋತಕವಾಗಿಯೋ ಏನೋ ಈ ಕೃತಿಪ್ರಕಾಶನಕ್ಕೆ ಬಂದ ಅಡಚಣೆಗಳೂ ಹೇರಳ. ಐದು ವರ್ಷ ಹಿಂದೆಯೇ ಬೆಳಕುಕಾಣಬೇಕಾದದ್ದು ಈಗ ಹೊರಬರುತ್ತಿದೆ. ಪ್ರಕಾಶನಕ್ಷೇತ್ರದಲ್ಲಿ ಶ್ರೀ ಜಿ. ಬಿ. ಜೋಶಿಯವರು ಸಾಹಸ ತೋರಿಸದಿದ್ದರೆ, ಈ ಕೃತಿ ಈಗಲೂ ಪ್ರಕಟಗೊಳ್ಳುತ್ತಿತ್ತೋ ಇಲ್ಲವೋ! ಅಂದವಾಗಿ ಗ್ರಂಥ ಹೊರತಂದ ಅವರಿಗೆ ಚಿರಋಣಿ; ಶಿಷ್ಯವೇತನ ಪೂರೈಸಿ ಈ ಅಭ್ಯಾಸ ಕೈಕೊಳ್ಳುವಂತೆ ಅನುವುಮಾಡಿಕೊಟ್ಟದ್ದಕ್ಕಾಗಿ ಕರ್ನಾಟಕ-ರಾಜ್ಯ-ಸಾಹಿತ್ಯ

ಅಕಾಡೆಮಿಗೆ ಕೃತಜ್ಞತೆಗಳು. ಮಧ್ಯಪ್ರದೇಶದಲ್ಲಿ ಎಲ್ಲಿಯೇ ಹೋಗಲಿ, ಏನೇ ಸಹಾಯ ಕೇಳಲಿ, ನಗುಮುಖದಿಂದ ಪೂರೈಸಿದವರಿಗೆಲ್ಲ ವಿಶೇಷ ಕೃತಜ್ಞತೆಗಳು.

೧೧೦, ಶಶಿಕಿರಣ ೧೮ನೇ ಕ್ರಾಸ್
ಮಲ್ಲೇಶ್ವರಮ್
ಬೆಂಗಳೂರು - ೫೬೦ ೦೫೫

– ಕೃಷ್ಣಾನಂದ ಕಾಮತ
ಸಂಕ್ರಾಂತಿ
೧೪-೧-೧೯೮೩

# ಅರಿಕೆ :

'ಕಾಲರಂಗ' ಇದು ಶ್ರೀ. ಕೃಷ್ಣಾನಂದ ಕಾಮತರ ಮೂರನೆಯ ಪ್ರವಾಸ ಕಥನ-ಗ್ರಂಥ ಮನೋಹರ ಗ್ರಂಥಮಾಲೆಯಲ್ಲಿ ಪ್ರಕಟವಾಗುತ್ತಿರುವದು. ಇದಕ್ಕೂ ಮೊದಲು ಬಂದ "ನಾನೂ ಅಮೇರಿಕೆಗೆ ಹೋಗಿದ್ದೆ", "ವಂಗದರ್ಶನ", ಇವು ಇನ್ನೂ ಓದುಗರ ಮನಸ್ಸಿನಿಂದ ಮರೆಯಾಗಿರಲಿಕ್ಕಿಲ್ಲ ಆಗಲೇ ಈ 'ಕಾಲರಂಗ' ಬರುತ್ತಿರುವದು ಅವರ ಸಾಹಸಪ್ರವೃತ್ತಿಯ ದ್ಯೋತಕವಾಗಿದೆ, ಅವರ ಪ್ರವಾಸ ಪ್ರೀತಿಯನ್ನು ಎತ್ತಿ ತೋರಿಸುತ್ತದೆ.

ಅವರ ಬರವಣಿಗೆ ವಿವರಗಳಿದ್ದೂ ವಿವೇಚನಾತ್ಮಕವಾಗಿದೆ, ಸೂಕ್ಷ್ಮ ವಿಶ್ಲೇಷಣೆಯನ್ನೂ ಪಡೆದಿರುತ್ತದೆ. ಶ್ರೀ.ವಿ.ಕೃ. ಗೋಕಾಕ ಅವರ "ಸಮುದ್ರ ದಾಚೆಯಿಂದ", ದಿನಕರ ದೇಸಾಯಿಯವರ "ನಾಕಂಡ ಪಡುವಣ", ಶ್ರೀಮತಿ ಸುಧಾ ಮೂರ್ತಿಯವರ "ಅಟ್ಲಾಂಟಿಕದಾಚೆಗೆ" ಶ್ರೀ. ಟಿ.ಯನ್. ಕೃಷ್ಣರಾಜು ಅವರ ಪಶ್ಚಿಮಾಯಣ"– ಇವನ್ನು ಓದಿದ ನಮ್ಮ ವಾಚಕರಿಗೆ ಇದರ ವಿಶಿಷ್ಟತೆ ಗೊತ್ತಾಗಬಹುದು.

ಗ್ರಂಥಮಾಲೆ ಸುವರ್ಣೋತ್ಸವವನ್ನು ಯೋಜಿಸುತ್ತಿರುವ ಈ ವರ್ಷ

ದಲ್ಲೇ ಕೃಷ್ಣಾನಂದರ ಈ "ಕಾಲರಂಗ" ಪ್ರಕಟವಾದದ್ದು ಒಂದು ಶುಭಯೋಗವೆಂದು ಭಾವಿಸುತ್ತೇವೆ.

ಕೃಷ್ಣಾನಂದರು ಮಾಲೆಯಲ್ಲಿ ಪ್ರಕಟಿಸಲು ಈ ಗ್ರಂಥ ಕೊಟ್ಟಿದ್ದಕ್ಕಾಗಿ ಅವರಿಗೆ ಅತ್ಯಂತ ಕೃತಜ್ಞರಾಗಿದ್ದೇವೆ.

– ಸಂಪಾದಕ

# ಪರಿವಿಡಿ

# ೧. ಗೊಂಡವನ

ಮಧ್ಯಪ್ರದೇಶದ ಗೊಂಡವನ ಮತ್ತು ಅದರ ಖ್ಯಾತಿವೆತ್ತ ರಾಣಿ ದುರ್ಗಾವತಿಯ ಬಗ್ಗೆ ಇತಿಹಾಸವು ರೋಚಕವಾದ ವಿಷಯವನ್ನು ಪೂರೈಸುವದರಿಂದ, ಇಂದು ಆ ಪ್ರದೇಶ ಹೇಗಿದೆ ಎಂದು ಕುತೂಹಲ ಕೆರಳುವದು ಸ್ವಾಭಾವಿಕ. ಗೊಂಡರು (ಸ್ಥಾನೀಯರು ಅವರನ್ನು "ಗೂಂಡ" ಎಂದು ಸಂಬೋಧಿಸುತ್ತಾರೆ) ಬಹುಸಂಖ್ಯೆಯಲ್ಲಿ ಇರುವ ಛಿಂದವಾಡಾದಲ್ಲಿ ಕಾಲಿಡುತ್ತಿದ್ದಂತೆ ಬೇರೆಯೇ ಲೋಕದಲ್ಲಿ ಬಂದಿಳಿದ ಅನುಭವವಾಯಿತು. ದಾರಿಯಲ್ಲಿ ಹೊರಟ ಆದಿವಾಸಿಗಳೆಲ್ಲರು ಜೊತೆಯಾಗಿಯೇ 'ಜೈರಾಮಜಿಕೀ' ಎಂದು ನಮಿಸಿದರು. ಶಾಲೆಯ ಮೆಟ್ಟಿಲು ಹತ್ತಿದ ಒಬ್ಬಿಬ್ಬರು 'ನಮಸ್ತೆಜೀ' ಎಂದು ಸ್ವಾಗತಿಸಿದರು.

ಊರು ಸೇರಿದ ನಾಲ್ಕಾರು ದಿನ ಸತತವಾಗಿ ಮಳೆ ಸುರಿದು ಬಿಡುವು ಕೊಟ್ಟಿತು ಕೊನೆಗೊಮ್ಮೆ. ಹುರುಪಿನಿಂದ ಊರ ಹೊರಗೆ ಹೊರಟಾಗ ಗೋವುಗಳನ್ನು ಮೇಯಿಸುತ್ತಿದ್ದ ಅಹೀರ(ಗೊಲ್ಲ)ನೊಬ್ಬ ವಂದಿಸಿ, 'ಹೊಲದತ್ತ ಹೊರಟಿರಾ?' ಎಂದು ವಿಚಾರಿಸಿದ. ಕೆಸರಿನಲ್ಲಿ ಹೆಚ್ಚು ದೂರ ನಡೆಯಲಾಗದೇ ಕಲ್ಲುಬಂಡೆಯ ಮೇಲೆ ವಿಶ್ರಮಿಸುತ್ತಿದ್ದಾಗ ದೂರದಿಂದ ರಿಪ್‌ವ್ಯಾನ್ ವಿಂಕಲ್‌ನನ್ನು ರೂಪದಲ್ಲಿ ಹೋಲುತ್ತಿದ್ದ ಗೊಂಡ ವೃದ್ಧನೊಬ್ಬನು ತತ್ತರವೆತ್ತರ ಕಾಲುಹಾಕುತ್ತ ಆ ಕಾಡುದಾರಿಯಲ್ಲಿ ಅತಿ ವೇಗದಿಂದ ನಡೆಯುತ್ತಬರುವದು ಕಾಣಿಸಿತು. ಒಂದು ಕೈಯಲ್ಲಿ ದೊಣ್ಣೆ, ಇನ್ನೊಂದರಲ್ಲಿ ಚೀಲ, ತಲೆಗೊಂದು ಮಾಸಿದ ಕೆಂಪು ರುಮಾಲು, ತುಟಿಯ ಮೇಲ್ಗಡೆಗೆ ಗೋವಿಂದ ವಲ್ಲಭ ಪಂತರ "ಕಡಲು-ಸಿಂಹದ ಮೀಸೆ". ಧರಿಸಿದ್ದು, ಹತ್ತಾರು ಕಳ್ಳಕಿಸೆಗಳುಳ್ಳ ಕಸೆಯ ಬಗಲ-ಬಂಡಿ ಅಂಗಿ. ವೀರಗಚ್ಚೆಹಾಕಿ ಸೊಂಟಕ್ಕೆ ಅಂಗವಸ್ತ್ರ ಬಿಗಿದಿದ್ದ.

ಸುರೂಪಿಯಾದ ಮುದುಕ ಸೂರ್ಯನ ತಾಪಕ್ಕೆ ಬೆಂದು ಸುವರ್ಣದ ಬಣ್ಣ ಪಡೆದಿದ್ದ. ಒಮ್ಮೆ ನೋಡಿದರೆ ಇನ್ನೊಮ್ಮೆ ನೋಡಬೇಕೆನ್ನುವ ವ್ಯಕ್ತಿತ್ವ ಅವನದು. ಸಂಗಡ ಕ್ಯಾಮರಾ ತಾರದ್ದಕ್ಕೆ ಮರುಗಿ ಕೈಹಿಸುಕಿಕೊಳ್ಳುತ್ತಿದ್ದಾಗ, ಎದುರಿಗೇ ಬರುತ್ತಿದ್ದ ಮುದಿಯನು, ಜೈರಾಮಜಿಕಿ ಎಂದು ಗೌರವ ತೋರಿ ಮುಂದೆ ಹಾದುಹೋಗುತ್ತಿದ್ದವನು ಏನೋ ನೆನಪಾದವನಂತೆ ತಿರುಗಿ ಬಂದು ಇನ್ನೊಂದು ಬಂಡೆಯ ಮೇಲೆ ಆರೂಢನಾದ. ಕೈಚೀಲದಿಂದ ಚಂಚಿಯೆಳೆದು ಕೊಂಡು ಮಾತಿಗಾರಂಭಿಸಿದ:

"ಒಂದು ವಾರದಿಂದ ಗಗನದ ಆಣೆಕಟ್ಟು ಒಡೆದಂತೆ ಏಕಪ್ರಕಾರವಾಗಿ ಮಳೆ ಸುರಿದ ನಂತರ ಇಂದು ತುಂತುರವಾಗಿದೆ. ಈ ಮಳೆಯೋ ಬೆಳೆಯುವ ಸಸಿಗಳಿಗೆ ಪಾಸಿ. ಇನ್ನೊಂದು ವಾರವಾದರೂ ಭಾರೀ ಮಳೆ ಬಾರದಿದ್ದರೆ ನಾವು ಗೆದ್ದಂತೆ. ಗಿಡಗಳು ಸ್ವಲ್ಪ ಪುಷ್ಟವಾದ ನಂತರ ಮಳೆರಾಯನು ಬೇಕಾದಷ್ಟು ಪ್ರಕೋಪವನ್ನು ತೋರಿಸಲಿ, ಯಾರು ಹೆದರುತ್ತಾರೆ?" ಬಾಯಿ ಮಾತನಾಡು ತ್ತಿದ್ದಂತೆ ಕೈಗಳು ಯಾಂತ್ರಿಕವಾಗಿ ಮಣ್ಣಿನ ಚಿಲುಮೆಯನ್ನು ಹೊರಗೆಳೆದು, ಜೊತೆಗೆ ಕಿರುಕೊರಡು, ಡಬ್ಬಿಯನ್ನೂ (ಚುಂಟಿ) ತೆಗೆದು, ತಂಬಾಕನ್ನು ಎಡ ಗೈಗೆ ಸುರುವಿಕೊಂಡು, ಬಲಹೆಬ್ಬೆರಳಿನಿಂದ ತೀಡಿ, ಊದಿ, ಹುಡಿಯನ್ನು ಬೇರ್ಪಡಿಸಿ ಚಿಲುಮೆಗೆ ಸೇರಿಸಿದ. ಚಂಚಿಯ ಇನ್ನೊಂದು ಕಿಸೆಯಲ್ಲಿ ಹುಡುಕಾಡಿ ಒಂದು ಬೆಣಚುಗಲ್ಲು, ಉಕ್ಕಿನ ತುಂಡು, ಲೋಹದ ಕರಡಿ ತೆಗೆದು ಅದರಿಂದ ಸ್ವಲ್ಪ ಹತ್ತಿ ಎತ್ತಿಕೊಂಡು ಕಲ್ಲಿನ ಜೊತೆಗೆ ಹಿಡಿದು ಬಲಗೈಯಲ್ಲಿದ್ದ ಉಕ್ಕಿ ನಿಂದ ಕಿಡಿಗಳನ್ನು ಹೊರಡಿಸಿ, ಹತ್ತಿ ಹೊತ್ತಿಕೊಂಡಾಗ ಚಿಲುಮೆಗೆ ಸೇರಿಸಿ ಒಂದು ದಮ್ಮು ಎಳೆದ. ಅವನ ಬೆಂಕಿ ಉತ್ಪಾದನೆಯ ಚಾತುರ್ಯಕ್ಕೆ ಮೆಚ್ಚಿಗೆ ಯನ್ನು ವ್ಯಕ್ತಪಡಿಸಿದಾಗ 'ಇದೇನು ಮಹಾ ! ಬಾಬೂಜೀ, ಬಸ್ತರದ ಆದಿ ವಾಸಿಗಳು ಬಿದಿರಿನ ಘರ್ಷಣೆಯಿಂದಲೇ ಅಗ್ನಿದೇವನನ್ನು ಪ್ರತ್ಯಕ್ಷ ಮಾಡುವ ಚಮತ್ಕಾರ ನೋಡಿದರೆ ನೀವೇನು ಅನ್ನುತ್ತಿದ್ದಿರೋ ಏನೋ!" ಎಂದು ಇನ್ನೊಮ್ಮೆ ಚಿಲುಮೆಯನ್ನು ಸೇದಲು ಯತ್ನಿಸಿದ, ಅದು ಆರಿಹೋಗಿತ್ತು. ಒಂದಿಷ್ಟೂ ಬೇಸರವಿಲ್ಲದೇ ಇನ್ನೊಮ್ಮೆ ಹೊತ್ತಿಸಿದ. ಅತ್ಯಾಧುನಿಕ ಸಲಕರಣೆ ಗಳನ್ನು ಉಪಯೋಗಿಸುವವರು, ಎಂದಾದರೊಮ್ಮೆ ಅವು ಸೊಪ್ಪು ಹೂಡಿದಾಗ ಆಕಾಶವೇ ಕಳಚಿ ಬಿದ್ದಿದೆ ಎಂಬಂತೆ ನಡೆದುಕೊಳ್ಳುವವರು, ಬೆಂಕಿಯನ್ನು

ಹುಟ್ಟಿಸುವ ಈ ರೀತಿಯ ಅವಕಾಶ ಬಂದರೆ ಏನು ಮಾಡುತ್ತಿದ್ದರೋ ಎಂಬ ಕಲ್ಪನೆಯೇ ಮೋಜೆನಿಸಿತು.

ಮುದಿಯ ಮುಂದುವರಿಸಿದ: "ನೀವೆಲ್ಲ ವಿಚಾರವಂತರು. ತಂಬಾಕಿನ ಹಾನಿಯನ್ನು ಅರಿತವರು. ಅಂತೆಯೇ ಬಳಸುವದಿಲ್ಲ. ನನ್ನಂಥವರಿಗೆ ತಂಬಾಕು ತಿನ್ನುವ ಇಲ್ಲವೇ ಸೇದುವ ಚಾಳಿ ಇದ್ದೇ ಇರುತ್ತದೆ. ಆದರೆ ಬೀಡಿ ಹೃದಯಕ್ಕೆ ಅಪಾಯಕಾರಿ. ಅದೇ ಮಣ್ಣಿನ ಚಿಲುಮೆಯಿಂದ ಆಗೊಮ್ಮೆ ಈಗೊಮ್ಮೆ ಸೇದಿದರೆ ಹೆಚ್ಚಿನ ತೊಂದರೆಯಿಲ್ಲ. ನೀವು ಕಲಿತವರು. ನನ್ನಂಥವರಿಂದ ಅರಿಯ ಬೇಕಾದ್ದು ಏನೂ ಇಲ್ಲ. ಆದರೂ ತಂಬಾಕು ಅಸ್ತಿತ್ವದಲ್ಲಿ ಹೇಗೆ ಬಂದಿತು ಎನ್ನುವದಕ್ಕೆ ಒಂದು ಕುತೂಹಲಕಾರಿ ಕಥೆ ಹೇಳುತ್ತೇನೆ – ಕೇಳಿ. ಒಮ್ಮೆ ಉಮಾಮಹೇಶ್ವರರು ಕಾಡಿನ ಅಂಚಿನಲ್ಲಿ ವಿಹಾರಕ್ಕೆ ಹೋಗುತ್ತಿದ್ದರಂತೆ. ದಿನವಿಡೀ ದುಡಿದರೂ ಎತ್ತುಗಳು ತನ್ನೊಂದಿಗೆ ಸಹಕರಿಸುತ್ತಿಲ್ಲವೆಂದು ಕೃಷಿಕನು ನೀಲಕಂಠನಿಗೆ ಮೊರೆಯಿಟ್ಟನಂತೆ. ಅವನು ಮುಗುಳ್ನಕ್ಕು ತನ್ನ ಜೇಬಿನಿಂದ (ಹುಲಿಚರ್ಮ ತೊಟ್ಟು ಅರೆನಗ್ನವಾಗಿ ತಿರುಗುವ ಭೋಳಾಶಂಕರನಿಗೆ ಜೇಬು ಹೇಗೆ ಬಂದಿತೆಂದು ತಿಳಿಯಲೇ ಇಲ್ಲ!) ಮುಷ್ಟಿ ತುಂಬ ತಂಬಾಕು ಹೊರ ಗೆಳೆದು, ಇನ್ನಷ್ಟು ಸೇದಿದರೆ ನಿನ್ನ ಸಮಸ್ಯೆ ತನ್ನಷ್ಟಕ್ಕೆ ಪರಿಹಾರವಾಗುವ ದೆಂದು ಹೇಳಿ ಅದೃಶ್ಯನಾದನಂತೆ. ತಂಬಾಕನ್ನು ಹದಮಾಡಿ, ಚಿಲುಮೆಗೆ ಸೇರಿಸಿ, ಬೆಂಕಿ ಹೊತ್ತಿಸಿ, ಸೇದುವದರಲ್ಲಿ ಆ ಒಕ್ಕಲಿಗನು ಎರಡು ತಾಸುಗಳನ್ನೇ ಕಳೆದದ್ದ ರಿಂದ ವಿಶ್ರಾಂತಿಪಡೆದ ಎತ್ತುಗಳು ತಿರುಗಿ ದುಡಿಯಲಾರಂಭಿಸಿದವು! ಇದು ಮಹಾಪ್ರಭುವಿನ ಆಶೀರ್ವಾದವೆಂದು ಅಂದಿನಿಂದ ತಾನು ತಂಬಾಕು ಸೇದು ವವರ ಜೊತೆಗೆ ಉಳಿದವರೊಂದಿಗೆ ಪಾಲುಗೊಳ್ಳುತ್ತಲೂ ಬಂದನಂತೆ ಆ ಕೃಷಿಕ." ತಂಬಾಕಿನ ಸೇವನೆಯ ಕಥೆ ಮೋಜೆನಿಸಿತು. ಈ ಜನರಲ್ಲಿ ಇಂಥ ಕಥೆ ಗಳು ಎಷ್ಟಿವೆಯೋ! ಅವನ್ನೆಲ್ಲ ಸಂಗ್ರಹಿಸಿ ಬರೆದರೆ, ಒಂದು ಮಹಾಗ್ರಂಥವೇ ಆದೀತೆಂದು ಅನಿಸದೇ ಇರಲಿಲ್ಲ.

ತನ್ನ ಬಾಲ್ಯವನ್ನು ನೆನೆಸಿಕೊಳ್ಳುತ್ತ ವೃದ್ಧನೆಂದ: "ಆ ಕಾಲದಲ್ಲಿ ಇದನ್ನು (ತಂಬಾಕು) ಕೇಳುವವರು ಯಾರೂ ಇರಲಿಲ್ಲ. ಒಂದು ಕಾಸಿಗೆ ಬೊಗಸೆ ತುಂಬ ಕೊಡುವವರು ಇದ್ದರು. ಇಂದು ಒಂದು ರೂಪಾಯಿ ಕೊಟ್ಟರೂ ಒಂದು ಹಿಡಿ ಬರುವದಿಲ್ಲ. ಬೀಡಿ ಕಟ್ಟುವವರೂ ತೀರ ಅಧೋಗತಿಗೆ ಇಳಿ

ದಿದ್ದಾರೆ. ಅಂದಿನ ಒಂದು ಬೀಡಿ ಪೂರ್ತಿಯಾಗಿ ಸೇದಿದೆನೆಂದರೆ ತಲೆ ಸುತ್ತ ಲಾರಂಭಿಸಿ ವಿಶ್ರಾಂತಿಪಡೆಯಬೇಕಾಗುತ್ತಿತ್ತು. ಅದೇ ಈಗ, ಒಂದು ಕಟ್ಟು ಸೇದಿದರೂ ಕೆಮ್ಮೂ ಇಲ್ಲ, ದಮ್ಮೂ ಇಲ್ಲ. ಇವರೆಲ್ಲ ಮೂರು ರೀತಿಯಿಂದ ಲಾಭಪಡೆಯುತ್ತಾರೆ. ಹಾಕಲು ಕೊಟ್ಟ ಅರ್ಧ ತಂಬಾಕು ಜೇಬಿಗೆ ಸೇರಿಸು ತ್ತಾರೆ. ಬೀಡಿಗಳನ್ನು ಕದಿಯುತ್ತಾರೆ. ಮಜೂರಿ ಬೇರೆ... ಈಗ ಕಾಲವಂತು ಬದಲಾಗಿದೆ. ಹಿಂದೆ ಬೇಕಾದವರು ಬೇಕಾದಾಗ, ಎಲ್ಲಿಯೂ ಯಾರ ಹೆದರಿಕೆಯೂ ಇಲ್ಲದೇ ತಿರುಗಬಹುದಾಗಿತ್ತು. ಅದೇ ಇಂದು ನನ್ನಂತಹ ಮುದಿಯನ ಎಲ್ಲ ವನ್ನೂ ದೋಚಿಕೊಂಡು ಹೋಗಲು ಕಳ್ಳರು-ಕಾಕರು ಯಾರ ಹೆದರಿಕೆಯೂ ಇಲ್ಲದೇ ತಿರುಗುತ್ತಾರೆ. ಕೊಲೆ-ಸುಲಿಗೆ ಮಾಡಿದವರು ಹೆದರಬೇಕೆಂದಿಲ್ಲ. ಹೆಣವನ್ನು ಹಳ್ಳಿಯಿಂದ ಆಸ್ಪತ್ರೆಗೆ ಸಾಗಿಸುವದರೊಳಗೆ ಡಾಕ್ಟರರ ಕೈ ಬಿಸಿ ಮಾಡಿದರೆ ಎಲ್ಲವೂ ಸರಿಹೋಗುತ್ತದೆ. ಎಂತಹ ಕಲಿಕಾಲ ಬಂದಿದೆ! ನಾನು ಮಾತನಾಡಿದ್ದಲ್ಲಿ ಏನಾದರೂ ತಪ್ಪಿದ್ದರೆ ಕೆನ್ನೆಗೆ ಎರಡು ಬಾರಿಸಿ. ಸಹಿಸಿಕೊಳ್ಳು ತ್ತೇನೆ. ಆದರೆ ಈ ದುರ್ಜನತೆ ಸಹಿಸುವದು ಕಷ್ಟ" ಎಂದು ಆರಲು ಬಂದ ಚಿಲುಮೆಯಿಂದ ಹೊಗೆಯನ್ನು ಒಳಗೆ ಎಳೆದುಕೊಂಡ.

"ಹತ್ತಿರದಲ್ಲಿ ಇದ್ದ ಹೊಲಗಳು ನಿಮ್ಮವೇ?" ಎಂದು ವಿಚಾರಿಸಿದ. ತನ್ನಂತೆ ಉಳಿದವರೆಲ್ಲರೂ ಹೊಲದ ಮಾಲಿಕರೇ ಎಂದು ಆತ ನಂಬಿದಂತೆ ಇತ್ತು. "ಇತ್ತಕಡೆ ಇನ್ನೂ ಬಿತ್ತುವ ಕೆಲಸ ಪ್ರಾರಂಭಿಸಿಲ್ಲ. ನಾನು ಹಿಂದೆ ಹಾಕಿಬಂದ ಹೊಲದಾಚೆ ಸಸಿಗಳು ಒಂದಡಿ ಬೆಳೆದುನಿಂತಿವೆ. ಈ ದಿನಗಳಲ್ಲಿ ಕಾಡಿನ ಮತ್ತು ಹೊಲದ ದಾರಿ ತುಳಿಯುವದೆಂದರೆ ಕಷ್ಟದ ಕೆಲಸ. ಎರಡು ಬಾರಿ ಜಾರಿ ಬೀಳಲಿದ್ದೆ. ಈ ದೊಣ್ಣೆ ಸಹಾಯಮಾಡಿತು. ಕಳ್ಳ-ಕಾಕರೂ ನನ್ನ ಈ ಸ್ನೇಹಿತನಿಗೆ ಸ್ವಲ್ಪ ಹೆದರಿ ಹಿಂಜರಿಯುತ್ತಾರೆ. ಆರು ತಾಸಿನಿಂದ ಸತತ ವಾಗಿ ನಡೆಯುತ್ತಿದ್ದೇನೆ. ನಿಮ್ಮನ್ನು ಕಂಡೇ ಸ್ವಲ್ಪ ಕುಂಡೆ ಊರಿದ್ದು. ಇನ್ನೂ, ರಾತ್ರಿ ಎಷ್ಟು ಹೊತ್ತಾದರೂ ನಾವು ಸುಖವಾಗಿ ಮನೆ ಸೇರಿಕೊಳ್ಳಬಹುದು. ಇಷ್ಟರಲ್ಲಿ ಮಳೆ ಬರುವಂತೆ ಇದೆ. ನಾನು ಹೊರಟೆ. ನೀವೂ ಹಿಂತಿರುಗಿ. ತೊಂದರೆ ಕೊಟ್ಟಿದ್ದಕ್ಕೆ ಕ್ಷಮಿಸಿ" ಎಂದು ತನ್ನ ಚಿಲುಮೆ ಇತ್ಯಾದಿಗಳನ್ನು ಜಂಚಿಗೆ ಸೇರಿಸಿ, ದೊಣ್ಣೆಯೂರಿ ಹೊರಟೇಬಿಟ್ಟ. ಆತ ಎಲ್ಲಿಂದ ಬಂದನೋ ತಿಳಿಯದು. ಎಲ್ಲಿಗೆ ಹೊರಟಿದ್ದನೋ ಅದೂ ಸಹ ತಿಳಿಯದು. ಆದರೆ ಅವನ

ಆಕೃತಿ, ರೂಪು, ಮಾತುಗಳು ಮನಸ್ಸಿನಲ್ಲಿ ಚೆನ್ನಾಗಿ ನಾಟಿವೆ, ನಾವು ನಮ್ಮ ವಾಸಸ್ಥಳ ಮುಟ್ಟುವದರೊಳಗೆ ಜೋರಾಗಿ ಮಳೆ ಬಂದೇಬಿಟ್ಟಿತು. ಆಗ ಆ ಮುದುಕನನ್ನು ನೆನೆದು ಮನಸ್ಸು ಮರುಕಗೊಂಡಿತು.

ಗೊಂಡರು ಸಣ್ಣಪುಟ್ಟ ಹಳ್ಳಿಗಳಲ್ಲಿ ವಾಸಮಾಡಿ, ನಸುಕಿನಲ್ಲೇ ಎದ್ದು ಹತ್ತಿರದ ಪಟ್ಟಣಕ್ಕೆ ಹೋಗಿ ದಿನವಿಡೀ ಮೈಮುರಿ ದುಡಿದು, ಕತ್ತಲಾಗುತ್ತಿದ್ದಂತೆ ಸಾಮಾನುಗಳನ್ನು ಹೊತ್ತು ಗೃಹಾಭಿಮುಖರಾಗುತ್ತಾರೆ. ಪುರುಷರು ಕೊಂಡ ಸಾಮಾನುಗಳನ್ನು ಧೋತರದಲ್ಲಿ ಪೊಟ್ಟಣ ಕಟ್ಟಿ ಲೆಕ್ಕಾಚಾರ ಮಾಡುತ್ತ ಹಳ್ಳಿಯ ರಾಜಕಾರಣದ ಬಗ್ಗೆ ಮಾತನಾಡುತ್ತ ಹೊರಟಿರುತ್ತಾರೆ. ಹೆಚ್ಚಿನ ಸಾಮಾನು ಸಾಗಿಸುವದಿದ್ದರೆ ಮಹಾಭಾರತ ಕಾಲದ ಚಕ್ಕಡಿಯೂ ಬಂದಿರುತ್ತದೆ. ಅದಕ್ಕೆ ಕಟ್ಟಿದ್ದು ಒಂದು ಮುದಿ ಎತ್ತಾದರೆ, ಇನ್ನೊಂದು ಮರಿ ಎತ್ತು. ಇಂತಹ ಗಾಡಿಯನ್ನು ಕಲ್ಪಿಸಿಕೊಂಡಾಗಲೇ ನಗು ಬರುವಾಗ ಅದನ್ನು ಪ್ರತ್ಯಕ್ಷ ಕಂಡಾಗ ನಗೆ ನಿಯಂತ್ರಿಸಿಕೊಳ್ಳುವದು ಕಷ್ಟ! ಸಾಲದ್ದಕ್ಕೆ ಈ ಹಳ್ಳಿಗರಿಗೆ ದಾರಿಯಲ್ಲಿ ಯಾರೇ ಕಂಡರೂ ಗೌರವಪೂರ್ಣವಾಗಿ 'ಜೈರಾಮಜಿಕೀ' ಹೇಳುವ ಪರಿಪಾಠ ಬೆಳೆದುಬಂದಿದೆ. ಸ್ವಲ್ಪ ಸ್ಥಿತಿಗತಿ ಇರುವವನು ಕುದುರೆ-ಸವಾರಿ ಮಾಡುತ್ತಾನೆ. ಪರಿಚಯದವರು ಆವನ ಎಡಬಲದಲ್ಲಿ ಆವನೊಂದಿಗೆ ಸ್ಪರ್ಧಿಸುತ್ತ ಹೊರಟಿರುತ್ತಾರೆ. ಗೊಂಡರ ಹೆಂಗಳೆಯರ ತಂಡವನ್ನು ದೂರದಿಂದ ನೋಡುವದು ಕಣ್ಣಿಗೊಂದು ಹಬ್ಬ. ಕರೇ ಶಿಲೆಗೆ ಕಂಶಿ ಕೊಡಿಸಿ ನಿರ್ಮಿಸಿದ ಶಿಲಾಬಾಲಿಕೆಯರಂತಹ ಥಳಥಳಿಸುವ ಅಂಗಾಂಗಗಳು, ಶಿಲ್ಪಿಯೊಬ್ಬ ಕಟೆದು ಮಾಡಿದಂತಿವೆ. ಅವರ ಮೈಬಣ್ಣದೊಂದಿಗೆ ಸ್ಪರ್ಧಿಸುವ ಕೆಂಪು, ನೀಲಿ, ಜಾಂಬಳೆ, ಹಸಿರು ಬಣ್ಣದ ಒಂಬತ್ತು ಗಜದ ಸೀರೆಗಳನ್ನು ಕಚ್ಚೆ ಹಾಕಿಕೊಂಡು ಉಡುತ್ತಾರೆ. ಒಂದೂವರೆ ಗಜದ ವಿಶಾಲವಾದ ಕುಪ್ಪಸಗಳು ಅವರ ಪುಟಿವಾದ ವಕ್ಷಗಳನ್ನು ನಿಯಂತ್ರಿಸಲು ಅಸಮರ್ಥವಾದ್ದರಿಂದ ನಡೆಯುವ ವೇಗಕ್ಕೆ ಅನುಗುಣವಾಗಿ ಅವೂ ಥಕಥೈ ಎಂದು ತಾಳ ಹಾಕಿ ಕುಣಿಯುತ್ತವೆ. ತೋಳು, ಕೈಗಳಿಗೆ ತೊಟ್ಟ ಬೆಳ್ಳಿಯ ವಂಕಿ, ಬಳೆಗಳು, ಸೊಂಟಕ್ಕೆ ತಬ್ಬಿಕೊಂಡ ಬೆಳ್ಳಿಯ ಅಗಲವಾದ ಡಾಬು, ಕಾಲುಗಳ ಪುಷ್ಟಮಾಂಸಖಂಡಗಳನ್ನು ಮುಚ್ಚಲು ಅಸಮರ್ಥವಾದ ಸೀರೆಯ ನಿರಿಗೆಗಳು ಮುಂತಾದವನ್ನು ನೋಡಿದಾಗ ನರ್ತಕಿಯ ಗತಿ ನೆನಪಾಗುತ್ತದೆ. ಕಾಲಿಗೆ ಧರಿಸಿದ ಭಾರವಾದ ಕಡಗ, ತಲೆಯ ಮೇಲೆ

ಭಾರವಾದ ಸಾಮಾನು, ತಿಳಿ ಹೃದಯದಿಂದ ಹೊರಹೊಮ್ಮುವ ಕುಲುಕುಲು ನಗು ಇವೆಲ್ಲ ದಾರಿಹೋಕರ ಮೇಲೆ ಮೋಡಿ ಬೀರುತ್ತವೆ.

ಸ್ಥಿತಿವಂತ ಗೊಂಡರು ತಮ್ಮ ಕುಟುಂಬವನ್ನು ಪಟ್ಟಣಕ್ಕೆ ಕರೆತರುವಾಗ ಸವಾರಿಕಟ್ಟಿದ ಚಕ್ಕಡಿ ಬಳಸುತ್ತಾರೆ. ಬಿದಿರುಚಾಪೆಯನ್ನು ಕಲಾತ್ಮಕವಾಗಿ ಕಮಾನಿನಂತೆ ಕಟ್ಟಿ ಅದಕ್ಕೆ ಚಿಗರೆ, ಹುಲಿ, ಸಿಂಹಗಳ ಚಿತ್ರವಿರುವ ಬಟ್ಟೆ ಹೊದಿಸುತ್ತಾರೆ. ಎತ್ತರವಿಲ್ಲದ ಚಕ್ಕಡಿಗೆ ಎತ್ತು ಕಟ್ಟಿದ ಕೂಡಲೇ ಹಿಂಬದಿಗೆ ಇಳಿಜಾರಾಗಿ, 'ಸವಾರಿ'ಗಳು ಜಾರಿಬೀಳುವ ಸಂಭವ ಇರುವದರಿಂದ ಕಟಾಂಜನ ಒಂದನ್ನು ಜೋಡಿಸಿರುತ್ತಾರೆ. ಪ್ರತಿ ಚಕ್ಕಡಿಯು ಸಂಗಡ ಅಂಗರಕ್ಷಕನಾಗಿ ದೊಣ್ಣೆ ಹಿಡಿದ ಗೊಂಡನೊಬ್ಬ ಹೊರಡುವದು ವಾಡಿಕೆ. ದೂರದ ಪ್ರಯಾಣವಾಗಿದ್ದರೆ, ಹಳ್ಳದ ದಂಡೆಯಲ್ಲಿ ನಿಂತು ಎತ್ತುಗಳಿಗೆ ನೀರು ಕುಡಿಸಿ, ಮೇವು ಹಾಕಿ, ಕಟ್ಟಿತಂದ ಬುತ್ತಿಯನ್ನು ತಿಂದು ನೀರು ಕುಡಿದು ವಿಶ್ರಾಂತಿಸಿ ತಿರುಗಿ ಪ್ರಯಾಣಕ್ಕೆ ತೊಡಗುವರು.

ಕುಮಾರಿಯರು, ತಮ್ಮ ತಾಯಂದಿರು ತೊಡುವಂತಹ ಪೋಲಕ ಮತ್ತು ಪುರುಷರು ಒಳಚಡ್ಡಿ ಧರಿಸಿದಾಗ ಕೋಡಂಗಿಗಳಂತೆ ಕಾಣುತ್ತಾರೆ. ಕೆಲವರು ಚಿಕ್ಕ ಬಾಲೆಯರಿಗೂ ಸೀರೆ ಉಡಿಸುವವರಿದ್ದಾರೆ. ಯುವತಿಯರು ಹಿರಿಯರ ಅಂಕಿತಕ್ಕೆ ಒಳಗಾಗದೇ ಸಮವಯಸ್ಕರ ತಂಡ ಕಟ್ಟಿಕೊಂಡು ನಗುತ್ತ, ಕೆಲೆಯುತ್ತ, ಹಾಡುತ್ತ ಹೊರಟರೆಂದರೆ ಜಗತ್ತನ್ನೆ ಮರೆಯುತ್ತಾರೆ. ಅಪರಿಚಿತರು ಯಾರಾದರೂ ಎದುರಿಗೆ ಬಂದರೆಂದರೆ ಬಾಯಿಗೆ ಬೀಗಜಡಿದುಕೊಂಡು ಒಳ್ಳೆ ಸೈನಿಕ-ಶಿಸ್ತಿನಿಂದ ಹೊರಟು ಅವರು ಹಾದುಹೋದ ನಂತರ ನಗೆಗಡಲನ್ನು ಉಕ್ಕಿಸುವರು. ಈ ಪರಿಪಾಠ ಅರಿಯದವನು ತನ್ನ ಧೋತರ ಹರಿದಿದೆಯೋ, ಗುಂಡಿಗಳು ಬಿಚ್ಚಿಕೊಂಡಿವೆಯೋ ಎಂದು ದಿಗಿಲುಬಿದ್ದರೆ ಆಶ್ಚರ್ಯವಿಲ್ಲ.

ಗೊಂಡ ಗಂಡಸರು, ಹೆಂಗಸರು ಕಡಿಮೆ ಕೂಲಿಗೆ ಕೆಲಸಮಾಡಿಕೊಡುವದರಿಂದ ಪಟ್ಟಣಗಳಲ್ಲಿ ಅವರನ್ನೆ ಕೆಲಸಕ್ಕೆ ನೇಮಿಸಿಕೊಳ್ಳುವದು ರೂಢಿ. ಚಹಾಕಪ್ಪು ತೊಳೆಯಲಿ, ಕೈಗಾಡಿ ದೂಡಲಿ, ಕಟ್ಟಿಗೆ ಒಡೆಯಲಿ, ಹೊರೆಯನ್ನೇ ಹೊರಲಿ ನಗುಮುಖದಿಂದಲೇ ಮಾಡಿ ಮುಗಿಸುತ್ತಾರೆ. ಕಪಟ, ಅಪ್ರಾಮಾಣಿಕತೆಗಳನ್ನು ಅರಿಯದ್ದರಿಂದ ಅವರಿಗೆ ಮೇಲ್ವಿಚಾರಣೆ ಬೇಕಾಗಿಲ್ಲ. ಕೆಲವರು ತಮ್ಮದೇ ಕೆಲಸ ರೂಢಿಸಿಕೊಂಡಿರುತ್ತಾರೆ. ಹಳ್ಳಿಗಳಿಂದ ಹುಲ್ಲು ಕೊಯ್ದು ಹೊತ್ತು

ತಂದು, ಹೆಚ್ಚಿನ ಬೆಲೆ ಸಿಗುತ್ತದೋ ಎಂದು ಕಾದು ನೋಡಿ, ಸಂಜೆಗತ್ತಲಾಗುತ್ತ ಬಂದಾಗ ಕೊಟ್ಟ ಬೆಲೆಗೆ ಮಾರಿ ಮನೆಗೆ ಹಿಂದಿರುಗುತ್ತಾರೆ. ಹಳ್ಳಿಯಿಂದ ಬೆಣ್ಣೆಯನ್ನು ಹೊತ್ತು ತಂದು ಪೇಟೆಯವರಿಗೆ ಮಾರುವ ಗೊಂಡತಿ ಮಹಾಭಾರತದ ಗೋಪಿಯರನ್ನು ನೆನಪಿಗೆ ತರುತ್ತಾಳೆ. ಕಾಯಿಪಲ್ಲೆ, ಬಾಳೆಯ ಹಣ್ಣು, ಮಾವಿನಹಣ್ಣು, ಕಿತ್ತಳೆ-ಹಣ್ಣುಗಳ ವ್ಯಾಪಾರದಲ್ಲಿ ಅವರದೇ ಮೇಲುಗೈ. ಕಾಣಲು ಸಂಭಾವಿತರಿದ್ದರೂ ವ್ಯಾಪಾರ ಕುದುರಿಸುವವರಲ್ಲಿ ಬಲು ಜಾಣೆಯರು. ರೂಪಾಯಿಗೆ ಆರು ಎಂದು ಹೇಳಿದ ಹಣ್ಣುಗಳನ್ನು ಗಿರಾಕಿ ಚುರುಕಾಗಿದ್ದರೆ ಮಾತ್ರ ಇಪ್ಪತ್ತು ಗಿಟ್ಟಿಸಬಹುದು. ಇಲ್ಲವಾದರೆ ಎಂಟೋ ಹತ್ತೊ ಕೊಟ್ಟು ಮನೆಗೆ ಕಳಿಸಿಬಿಡುತ್ತಾಳೆ, ನಗುಮುಖದ ಆದಿವಾಸಿ ಮಹಿಳೆ, ಮೊದಲಿಗೆ ರುಚಿ ನೋಡಲು ಉತ್ತಮ ಹಣ್ಣಿನ ಚೂರು ಕೊಟ್ಟು ತಾನು ಕೊಂಡ ದರವೇ ರೂಪಾಯಿಗೆ ಹತ್ತರಂತೆ ಎಂದು ವಾದಿಸುತ್ತಾಳೆ. ಗಿರಾಕಿ ಆರಿಸುವಾಗಲೇ ಕೈಚೀಲದಲ್ಲಿ ಚಿಕ್ಕವು, ಕೊಳೆತವು ಸೇರಿಸಿಬಿಡುತ್ತಾಳೆ. ಮನೆಗೆ ತಂದವುಗಳಲ್ಲಿ ಅರ್ಧವಾದರೂ ಉತ್ತಮವಾಗಿದ್ದರೆ ಒಳ್ಳೆ ವ್ಯಾಪಾರವೆಂದು ತಿಳಿಯಬೇಕು. ಕೇವಲ ನಾಲ್ಕು ಅಥವಾ ಐದು ರೂಪಾಯಿಯ ಹಣ್ಣು-ಹಂಪಲ ಇಲ್ಲವೇ ಕಾಯಿಪಲ್ಲೆಯನ್ನು ಮಾರಲು ಮುಂಜಾವಿನಿಂದ ರಾತ್ರಿಯವರೆಗೆ ಕಾದು ಕೂಡ್ರುವ ಅವಳ ತಾಳ್ಮೆ ಪ್ರಶಂಸನೀಯ. ಅವಳಿಗೆ ಕಾಸು ಸುಲಭವಾಗಿ ಬಾರದು. ಅದನ್ನು ಖರ್ಚುಮಾಡುವಾಗಲೂ ಅಷ್ಟೇ ಜಾಗರೂಕತೆ ವಹಿಸುವದರಿಂದ ಉಳಿದ ವ್ಯಾಪಾರಿಗಳು ಅವಳನ್ನು ಅಲಕ್ಷಿಸುತ್ತಾರೆ. ಪಾಪ! ಬಡಪಾಯಿಗೆ ತನ್ನ ತಪ್ಪು ತಿಳಿಯದೇ ಮಂಕಾಗಿ ನಿಲ್ಲುತ್ತಾಳೆ,

1 [illegible]

2 [illegible] 48 1181 x 1384

3 [illegible] - SB 1194-1774

1) ಸಿಂಧರ ಚಕಡಿ
2) ಹೊಟ್ಟೆ ಪ್ರಶ್ನೆ

# ೨. ಜನಸಾಮಾನ್ಯ

ರಾವಣನ ಲಂಕೆ ಇರುವದು ಮಧ್ಯಪ್ರದೇಶದಲ್ಲಿ ಎಂದು ಸಿದ್ಧಮಾಡುವ ಸಂಶೋಧನಾ ಯತ್ನ ಇತ್ತೀಚಿನದಾದರೂ ರಾಮಾಯಣದಲ್ಲಿ ಹೆಸರಿಸಲ್ಪಡುವ ಹಲವಾರು ಊರು, ಪ್ರದೇಶಗಳು ಇರುವದು ಈ ರಾಜ್ಯದಲ್ಲಿಯೇ. ಬೌದ್ಧರು ಈ ಭೂಮಿಯನ್ನು ನೆಚ್ಚಿಕೊಂಡು ಸಾಂಚಿಯಲ್ಲಿ ಸ್ತೂಪ, ಧರ್ಮಪೀಠಗಳನ್ನು ಸ್ಥಾಪಿಸಿದರು. ಖ್ಯಾತಿವೆತ್ತ ಅರಸು ಶಕಪುರುಷ ವಿಕ್ರಮಾದಿತ್ಯನು ರಾಜ್ಯ ವಾಳಿದ್ದು ಇಲ್ಲಿಯೇ. ಭೂಸುಧಾರಣೆ ಮತ್ತು ವಿದ್ಯೆಯಲ್ಲಿ ಹೆಸರುಗಳಿಸಿದ ಭೋಜರಾಜನು ರಾಜ್ಯವಾಳಿದ ಧಾರ ಇರುವದು ಈ ಪ್ರದೇಶದಲ್ಲಿ. ಪಠಾಣರು, ಖಿಲಜಿಗಳು, ಚಂದೇಲರು, ಭೋಸಲೆಗಳು, ಸಿಂಧಿಯಾರು ಒಳ್ಳೆ ವೈಭವದಿಂದ ಮೆರೆದದ್ದು ಇದೇ ನಾಡಿನಲ್ಲಿ. ಶೌರ್ಯಕ್ಕೆ ಹೆಸರಾದ ಝಾಂಸಿ ಲಕ್ಷ್ಮೀಬಾಯಿ, ಧಾರ್ಮಿಕತೆ, ಪರೋಪಕಾರಗಳಿಗೆ ಹೆಸರುಗಳಿಸಿದ ಅಹಲ್ಯಾಬಾಯಿ ಹೋಳಕರ, ಉಜ್ವಲಪ್ರೇಮದ ಮಾದರಿಯಾಗಿ ಬೆಳಗಿದ ಬಾಝಬಹಾದೂರ ರಾಣಿ ರೂಪಮತಿಯರ ಕರ್ಮಭೂಮಿ ಇದೇ! ಕಾಳಿದಾಸ, ತಾನಸೇನರು ಬದುಕಿ ಬಾಳಿ ಅಜರಾಮರರಾದದ್ದು ಇದೇ ಭೂಮಿಯಲ್ಲಿ. ನರ್ಮದಾ, ತಾಪಿ, ಮಹಾನದಿ, ಇಂದ್ರಾವತಿಗಳಂತಹ ಪುಣ್ಯನದಿಗಳು ಈ ನಾಡಿನಲ್ಲಿಯೇ ಹರಿಯುತ್ತವೆ. ಈ ಪ್ರದೇಶದ ವೈಶಿಷ್ಟ್ಯವನ್ನು ಸಾರಲು ಎತ್ತರವಾಗಿ ನಿಂತ ವಿಂಧ್ಯ, ಸಾತಪುಡಾ ಗಳು ಇಲ್ಲಿವೆ. ಕಲೆಗೆ ಹೆಸರಾದ ಛತ್ತರ್‌ಪುರ, ವಜ್ರದ ಕಣಿಗಳ ಪನ್ನಾ, ವಿರಳ ವಾದ ಬಿಳೇಹುಲಿಗಳ ತಾಯ್ನಾಡಾದ ರೇವಾ, ಮಧ್ಯಪ್ರದೇಶದಲ್ಲಿವೆ. ಹಿಂದೆ ಎಣೆಯಿಲ್ಲದ ವೈಭವದಿಂದ ಮೆರೆದ ಈ ಪ್ರದೇಶ ಇಂದು ಶಾಂತಿಯುತ, ಹಿಂದುಳಿದ ರಾಜ್ಯ ಎನಿಸಿಕೊಂಡಿದೆ. ಇದಕ್ಕೆ ಐತಿಹಾಸಿಕ, ಭೌಗೋಲಿಕ ಕಾರಣ ಗಳಿಗಿಂತ ಹೆಚ್ಚಾಗಿ ಜನರ ಮನೋಭಾವನೆಯೇ ಕಾರಣವೆಂದು ನಮಗೆ ಅನಿಸದೇ ಇರದು.

ಸಾಮಾನ್ಯ ಬಂಗಾಲಿಗಳು ರಾಜಕಾರಣದಲ್ಲಿ ಅತೀ ಆಸಕ್ತಿವಹಿಸಿ ಹಕ್ಕು ಬಾಧ್ಯತೆಗಳಿಗೆ ಹಗಲಿರುಳೂ ಹೋರಾಡಿ ತಮ್ಮ ಕರ್ತವ್ಯವನ್ನೇ ಮರೆತು ಹಿಂದುಳಿದರೆ, ಈ ರಾಜ್ಯದವರು ರಾಮನಿಗೆ ರಾಜ್ಯವಾದರೂ ಅಷ್ಟೇ ರಾವಣನಿಗೆ

ರಾಜ್ಯವಾದರೂ ಅಷ್ಟೇ ತಮಗೆ ರಾಗಿ ಬೀಸುವದು ತಪ್ಪಿದ್ದಲ್ಲ ಎಂಬ ಧೋರಣೆ ಯಿಂದ ಹೆಚ್ಚಿನ ಪ್ರಗತಿ ಸಾಧಿಸಿಲ್ಲ. ದೇಶಕ್ಕೆ ಸ್ವಾತಂತ್ರ್ಯ ದೊರೆತ ಕಾಲದಲ್ಲಿ ಮಧ್ಯಭಾರತದಲ್ಲಿ ಹಲವಾರು ರಾಜ-ಮಹಾರಾಜರು ಆಳುತ್ತಿದ್ದರು. ನಂತರ ಸರದಾರ ಪಟೇಲರು, ಅವರ ಸಂಸ್ಥಾನಗಳನ್ನು ವಿಲೀನಗೊಳಿಸಿದರೂ ಈ ಭಾಗ ವಿವಿಧ ಪ್ರಾಂತಗಳಲ್ಲಿ ಹಂಚಿ ಹೋಳಾಗಿಹೋಗಿತ್ತು. ನಾಗಪುರದ ಆಡಳಿತಕ್ಕೆ ಒಳಗಾದ ದಕ್ಷಿಣಭಾಗ ಮರಾಠರ ವರ್ಚಸ್ಸಿಗೆ ಒಳಗಾದರೆ ಪೂರ್ವದ ಬಸ್ತರ, ಪ್ರಬಲವಾದ ಜಮೀನದಾರರಿಗೆ ಸೇರಿತ್ತು. ಈಗಲೂ ಈ ಪ್ರದೇಶ, ಮಹಾರಾಷ್ಟ್ರ, ಗುಜರಾಥ, ರಾಜಸ್ಥಾನ, ಉತ್ತರ ಪ್ರದೇಶ, ಬಿಹಾರ, ಓರಿಸ್ಸಾ, ಆಂಧ್ರಪ್ರದೇಶಗಳಿಂದ ಸುತ್ತುವರೆದದ್ದರಿಂದ ಆಯಾ ಗಡಿಪ್ರದೇಶಗಳಲ್ಲಿ ಅವುಗಳ ಪ್ರಭಾವ ಎದ್ದುಕಾಣುತ್ತದೆ. ೧೯೫೬ರಲ್ಲಿ ರಾಜ್ಯಗಳ ಪುನರ್ಘಟನೆ ಯಾದ ಮೇಲೂ ಈ ಭಾಗ ಒಂದು ಕಿರಿ ಜಗತ್ತಿನಷ್ಟು ವೈವಿಧ್ಯಪೂರ್ಣವಾಗಿದೆ. ಇಲ್ಲಿಯ ಪ್ರತಿಯೊಂದು ಜಿಲ್ಲೆ ಯುರೋಪಿನ ಚಿಕ್ಕ ರಾಷ್ಟ್ರದಂತೆ ಇವೆಯಾದರೂ ಅವೆಲ್ಲ ಒಂದೇ ಆಡಳಿತಕ್ಕೆ ಒಳಪಟ್ಟಿವೆಯೆಂದರೆ ಆಶ್ಚರ್ಯವಲ್ಲವೇ? ೩೨ ಜಿಲ್ಲೆ ಗಳಿರುವ ಈ ರಾಜ್ಯದ ಬಸ್ತರಜಿಲ್ಲೆಯೊಂದೇ ಕೇರಳರಾಜ್ಯಕ್ಕಿಂತ ದೊಡ್ಡ ದಿದೆ ಎಂದರೆ ಈ ಪ್ರಾಂತದ ಬೃಹದಾಕಾರದ ಕಲ್ಪನೆ ಬರುವಂತಿದೆ. ಇಂದಿಗೂ ರಾಜ್ಯದ ಪ್ರಮುಖ ಭಾಗಗಳಿಗೆ ಬುಂದೇಲಖಂಡ, ಛತ್ತೀಸಗಡ, ಮಹಾಕೋಸಲ ಮೊದಲಾದ ಹಿಂದಿನ ಹೆಸರುಗಳಿಂದಲೇ ಕರೆಯುವದು ವಾಡಿಕೆಯಾಗಿದೆ. ಅವರೆಲ್ಲರ ಭಾಷೆ ಹಿಂದಿಯಾದರೂ ಅವರ ಪ್ರಕಾರಗಳು ತೀರ ಭಿನ್ನವಾಗಿವೆ.

ಸ್ವಾತಂತ್ರ್ಯದ ನಂತರ ರಾಜ್ಯದ ಮುಖ್ಯಮಂತ್ರಿಗಳು ಪಂಡಿತ ರವಿಶಂಕರ ಶುಕ್ಲರಾಗಿದ್ದರು. ೧೯೫೬ರಲ್ಲಿ ಅವರ ನಿಧನದ ನಂತರ ಡಿ. ಪಿ. ಮಿಶ್ರ, ನಂತರ ಪಿ. ಸಿ. ಸೇಠಿ ಮತ್ತು ತುರ್ತಪರಿಸ್ಥಿತಿಯಲ್ಲಿ ಪಂಡಿತ ರವಿಶಂಕರ ಶುಕ್ಲರ ಮಗ ಶಾಮಚರಣ ಶುಕ್ಲರು ಮುಖ್ಯಮಂತ್ರಿಯಾಗಿದ್ದರು. ಕೆಲವು ನಾಯಕರು ರಾಜ್ಯದ ಏಳ್ಗೆಗೆ ಶ್ರಮಿಸಿ ಉದ್ದಿಮೆ, ಉದ್ಯೋಗಗಳನ್ನು ಪ್ರಾರಂಭಿಸಿದರು. ಆದರೆ ಈ ಪ್ರದೇಶದ ಸಮಸ್ಯೆಗಳು ಬೃಹತ್ತಾಗಿವೆ. ಮಾಡಬೇಕಾದದ್ದು ಬೆಟ್ಟದಷ್ಟಿದೆ. ಜನತೆ ಸರಕಾರ ಒಟ್ಟಾಗಿ ದುಡಿದರೆ ಮಾತ್ರ ಸಾಧ್ಯವೆಂದು ಪಂಜಾಬರಾಜ್ಯ ದೇಶಕ್ಕೆ ತೋರಿಸಿಕೊಟ್ಟಿದೆ. ಇದನ್ನು ಅನುಕರಿಸಲು ಇತರ ರಾಜ್ಯಗಳಂತೆ ಮಧ್ಯಪ್ರದೇಶದವರೂ ಮುಂದಾಳ್ತನ ವಹಿಸಿ ದುಡಿಯಬೇಕು.

ಬಂಗಾಲಿ, ಗುಜರಾಥಿ, ಮರಾಠಿ, ಪಂಜಾಬಿ ಜನರನ್ನು ಸುಲಭವಾಗಿ ಗುರುತಿಸಿದಂತೆ ಈತ ಮಧ್ಯಪ್ರದೇಶದವ ಎಂದು ಬಟ್ಟುಮಾಡಿ ತೋರಿಸುವದು ಸಾಧ್ಯವಿಲ್ಲ. ಇದಕ್ಕೆ ಮುಖ್ಯ ಕಾರಣವೆಂದರೆ ದೇಶದ ಬೇರೆಬೇರೆ ಭಾಗಗಳಿಂದ ಬಂದು ಜನ ಇಲ್ಲಿ ಬೀಡುಬಿಟ್ಟಿದ್ದಾರೆ. ವಿದರ್ಭಕ್ಕೆ ಹೊಂದಿಕೊಂಡ ಪ್ರದೇಶದಲ್ಲಿ ಮರಾಠಿಗರು ಹಲವು ತಲೆಮಾರುಗಳಿಂದ ಸ್ಥಾಪಿತರಾಗಿದ್ದಾರೆ. ಡಾಕ್ಟರರು, ವಕೀಲರು, ಶಿಕ್ಷಕರು, ಕೃಷಿಕರೆಂದು ದೊಡ್ಡದೊಡ್ಡ ಬಂಗಲೆಗಳನ್ನು ಕಟ್ಟಿಸಿಕೊಂಡು ಸುಖವಾಗಿದ್ದಾರೆ. ರಾಜ್ಯದಲ್ಲಿ ಇದ್ದ ಅವಕಾಶಗಳನ್ನು ತಮ್ಮವನ್ನಾಗಿ ಮಾಡಿಕೊಳ್ಳಲು, ಅವರ ಮಕ್ಕಳು ಒಂದಿಷ್ಟೂ ಗೊಣಗದೇ ಹಿಂದಿಯನ್ನೇ ಕಲಿಯುತ್ತಾರೆ. ಇಂದೋರ, ಉಜ್ಜಯನಿ, ಗ್ವಾಲ್ಹೇರಗಳಲ್ಲಿಯ ಯುವಜನಾಂಗದವರು ಮರಾಠಿಗಿಂತ ಹೆಚ್ಚಾಗಿ ಹಿಂದಿಯನ್ನೇ ಮಾತಾಡುತ್ತಾರೆ. ಅವರಾಡುವ ಮರಾಠಿ ಕೂಡ ಹಿಂದಿಮಯವಾಗಿದ್ದರಿಂದ ಪುಣೆಯ ಮರಾಠಿ ಅರ್ಥಮಾಡಿಕೊಳ್ಳುವದು ಅವರಿಗೆ ತೊಂದರೆಯ ಮಾತು. ಕರ್ನಾಟಕದಲ್ಲಿ ಬೇರೂರಿದ ಮರಾಠಿಗರೂ ಇದೇ ಧೋರಣೆ ತಳೆದು ತಾವು ವಾಸಿಸುತ್ತಿದ್ದ ನಾಡಿನ ಭಾಷೆ ತಮ್ಮದನ್ನಾಗಿ ಮಾಡಿಕೊಂಡಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು! ಅದನ್ನು ಬಿಟ್ಟು ತಾವಿರುವ ಪ್ರದೇಶವನ್ನೆ ಮಹಾರಾಷ್ಟ್ರಕ್ಕೆ ಸೇರಿಸುವ ಹಗಲುಗನಸು ಕಾಣುತ್ತಿರುವದು ಹಾಸ್ಯಾಸ್ಪದವಾಗಿದ್ದಂತೆ ಶೋಚನೀಯ.

ಆದಿವಾಸಿಗಳು ಬಹುಸಂಖ್ಯಾತರಿರುವಲ್ಲಿ ಗೊಂಡಿ, ಹಲ್ಬೀ ಮತ್ತು ಅವುಗಳ ಉಪಭೇದಗಳು ಬಳಕೆಯಲ್ಲಿವೆ. ಇವೆಲ್ಲ ಮಿಶ್ರಭಾಷೆಗಳಿದ್ದು ಹಿಂದಿ, ಮರಾಠಿ ಮತ್ತು ತೆಲುಗುಭಾಷೆಯ ಪ್ರಭಾವ ಎದ್ದು ಕಾಣುತ್ತದೆ. ಇತ್ತಲಾಗಿ ಈ ಭಾಷೆಗಳ ಶಬ್ದಕೋಶ, ಗದ್ಯ-ಪದ್ಯಗಳು ಪ್ರಕಟಿತವಾದರೂ ಅವು ಆಡು-ಭಾಷೆಗಳಾಗಿ ಊರಿಂದೂರಿಗೆ ಬದಲಾಗುತ್ತವೆ. ಹಿಂದಿಯ ಮೇಲೂ ಆದಿವಾಸಿ ಉಚ್ಚಾರಗಳ ಪ್ರಭಾವವಾಗದೇ ಇಲ್ಲ. ಹೌದು ಎನ್ನಲು ಹಿಂದಿಯ ಹಾಂ ಎನ್ನುವ ಬದಲಾಗಿ "ಹಾ" ಎನ್ನುವ ರೂಢಿಮಾಡಿಕೊಂಡಿದ್ದಾರೆ ಆದಿವಾಸಿಗಳಂತೆ.

ದಕ್ಷಿಣದವರು ದಕ್ಷತೆಯಿಂದ ಕೆಲಸ ಮಾಡುವರೆಂದು ದಿಲ್ಲಿಯವರೆಗೆ ಖ್ಯಾತಿ ಪಡೆದರೆ, ಮಧ್ಯಪ್ರದೇಶದವರು ಆರಾಮ-ಶೂರರೆಂದು ಅಪಖ್ಯಾತಿ ಪಡೆದಿದ್ದಾರೆ. ಅದಕ್ಕೆ ಅವರ ಆಕಾಂಕ್ಷಾರಹಿತ ದೃಷ್ಟಿಕೋನವೇ ಕಾರಣವಿದ್ದಿರ

ಬಹುದೇ ಎಂದು ಅನುಮಾನಬರುತ್ತದೆ. ಈ ರಾಜ್ಯ ಗೋದಿಯ ಗೋದಾಮು ಎಂದು ಪ್ರಸಿದ್ಧಿಪಡೆದಿದೆ. ಖಾಂಡವಾದ ಈ ಗೋದಿಯ ಬಗ್ಗೆ ಕೇಳದವ ರಾರು? ವಿಪುಲಮಳೆ, ಫಲವತ್ತಾದ ಭೂಮಿ, ಅನೇಕ ನದಿಗಳಿರುವದರಿಂದ ಫಸಲಿಗಾಗಲಿ, ದಟ್ಟಕಾಡಿಗಾಗಲಿ ಕೊರತೆಯೇ ಇಲ್ಲ. ಅಲ್ಲದೇ ಬಂಗಾಲ ಕೇರಳ ಗಳಂತೆ ಜನಸಂಖ್ಯೆಯ ದಟ್ಟಣೆಯೂ ಇಲ್ಲ. ಉದರನಿರ್ವಹಣೆ ಬಹಳ ಸುಲಭ. ಅಂತೆಯೇ ಜನಸಾಮಾನ್ಯರು, "ಮೂರು ಊಟಗಳಿಲ್ಲದಿದ್ದರೂ ಸಿಗುವ ರೊಟ್ಟಿ ಪಲ್ಯಕ್ಕೆ ಕೊರತೆ ಬರದಿರಲಿ ದೇವಾ" ಎಂಬ ನಂಬಿಕೆಯನ್ನು ತಳೆದವರಿದ್ದಾರೆ. ಹೀಗಾಗಿ ರಾಜ್ಯದ ಮಹತ್ವದ ಹುದ್ದೆಗಳಲ್ಲೆಲ್ಲ ಮಹಾರಾಷ್ಟ್ರದವರು, ಉತ್ತರ ಪ್ರದೇಶದವರು, ಬಂಗಾಲಿಗಳು ತುಂಬಿತುಳುಕುತ್ತಿದ್ದಾರೆ.

ಜನಸಾಮಾನ್ಯನ ಸೌಜನ್ಯ, ಸೌಹಾರ್ದತೆ, ಆದರ-ಆತಿಥ್ಯಗಳು ಮಾತ್ರ ಮೆಚ್ಚತಕ್ಕಂತಹವು. ಆಗಂತುಕನ ಪರಿಚಯವಿರಲಿ ಇಲ್ಲದಿರಲಿ, ನಮಸ್ಕಾರ ಮಾಡಿ, ಕುಳಿತುಕೊಳ್ಳುವ ಕೃಪೆ ಮಾಡಿರಿ ಎನ್ನುವ. ಚಹಾ ತರಿಸಿ ಕುಡಿಸಿ ತಾಂಬೂಲ ತಿನ್ನಿರಿ ಎನ್ನುವ. ಅದೆಲ್ಲ ಬೇಡವೆಂದರೆ ಚೂರು ಅಡಕೆ, ಇಲ್ಲವೆ ಬಡೀಸೋಪನ್ನಾದರೂ ತಿನ್ನಿಸದೇ ಸಮಾಧಾನ ಇಲ್ಲ ಅವನಿಗೆ. ನಂತರ ಇಲ್ಲಿಯ ತನಕ ದಯಮಾಡಿಸಿದ ಕಾರಣವೇನು ಎಂದು ವಿಚಾರಿಸುವ. ಈ ಗುಲಾಮನು ತಮ್ಮ ಯಾವ ಸೇವೆ ಮಾಡಬಲ್ಲ ಎಂದು ನಾಟಕೀಯವಾಗಿ ಕೇಳುವ. ಎಂತಹ ಮಹತ್ವದ, ಬಿಕ್ಕಟ್ಟಿನ ಕೆಲಸ ಹೇಳಿದರೂ, ಆದಂತೆಯೇ ಭಾವಿಸಿ, ನೆಮ್ಮದಿ ಯಿಂದ ಇರಿ ಎಂದು ವಿನಂತಿಸಿಕೊಳ್ಳುವ. ತಿಂಗಳು ಕಾದು ಆತನಿಂದ ಯಾವ ಕೆಲಸವೂ ಆಗದ್ದರಿಂದ ಇನ್ನೊಂದು ಸಲ ಅವನನ್ನು ಕಾಣಹೋದಾಗ ಅವನು ಈ ಮೊದಲು ತಾನಾಡಿದ ಮಾತುಗಳನ್ನೇ ಮರೆತಿರುತ್ತಾನೆ!

ಯಾವದೇ ಆಫೀಸಿಗೆ ಹೋದರೂ ಅಲ್ಲಿ ಅರಾಜಕತೆ ತಾಂಡವವಾಡು ತ್ತಿರುತ್ತದೆ. ಯಾವನೂ ವೇಳೆಗೆ ಸರಿಯಾಗಿ ಬಂದಿರುವದಿಲ್ಲ. ಬಂದ ನಂತರವೂ ಸ್ವಸ್ಥಾನದಲ್ಲಿರುವದರ ಬದಲಾಗಿ ಯಾರೊಂದಿಗೋ ಹರಟೆಯಲ್ಲಿ ಮೈಮರೆ ತಿರುತ್ತಾನೆ. ಮನೆಯಿಂದ ಆಫೀಸಿಗೆ ಬರುತ್ತಿದ್ದಂತೆ ಅವನಿಗೆ ಚಹದಂಗಡಿಯ ನೆನಪಾಗುತ್ತದೆ. ಆರೇಳು ಜನ ತಂಡಕಟ್ಟಿಕೊಂಡು ಹೋಗಿ ಬಿಸಿಬಿಸಿ ಜಿಲೇಬಿ, ಪಕೋಡ, ಮೆಣಸು, ಶುಂಠಿ ಮಸಾಲೆ ಹಾಕಿ ಹಾಲಿನಲ್ಲಿಯೇ ಮಾಡಿದ ಚಹ ಕುಡಿದಾಕ್ಷಣ ಬೀಡಾದ ನೆನಪಾಗುತ್ತದೆ. ಬಾಯಿತುಂಬ ವೀಳ್ಯಹಾಕಿಕೊಂಡು

ಬಾಯಿ ಕೆಂಪಗೆ ಮಾಡಿಕೊಂಡು ಬಂದನಂತರ ದೈನಂದಿನ ಕಾರ್ಯಕಲಾಪಗಳು ಪ್ರಾರಂಭವಾಗುವವು ಎಂದು ತಿಳಿಯಲಡ್ಡಿಯಿಲ್ಲ. ದಿನಕ್ಕೆ ಇಷ್ಟೇ ಸಲ, ಇಷ್ಟೇ ವೇಳೆಗೆ ಚಹಾ, ತಿಂಡಿ, ಊಟಕ್ಕೆ ಹೋಗಬೇಕೆಂಬ ನಿಯಮವೇನೂ ಇದ್ದಂತಿಲ್ಲ. ಮನಸ್ಸಿಗೆ ಬಂದಷ್ಟು ಸಲ ಹೋಗುತ್ತ ಬರುತ್ತಿರುವದು ವಾಡಿಕೆ. ಚಹಾ-ಬೀಡಾ ಗಳಿಗೆ ಎಲ್ಲರೂ ಕೂಡಿ ಹೋಗಿಬರುತ್ತಿದ್ದರಿಂದ ಮೇಲಧಿಕಾರಿ ಕೆಳ-ಅಧಿಕಾರಿ ಎಂಬ ಅಂತರ ಇಲ್ಲದಂತಾಗಿ ಸಮಾನತೆ ಸಾಧಿಸಲು ಸಮರ್ಥರಾಗಿದ್ದಾರೆ!

ನಮ್ಮಲ್ಲಿ ಇರುವಂತಹ ದೊಡ್ಡ ಹೊಟೇಲುಗಳು ಅಲ್ಲಿ ತೀರ ವಿರಳ. ಆದರೆ ಯಾವ ಮಾತಿಗೆ ಹೋದರೂ ಚಹಾ-ತಾಂಬೂಲ ಸಿಕ್ಕೇ ಸಿಗುತ್ತದೆ. ಪೋಲೀಸ-ಗೂಡಿನಂತಹ ಚಿಕ್ಕ ಅಂಗಡಿಯಲ್ಲಿ – ಇದ್ದಲಿ-ಒಲೆ, ರೇಲ್ವೆ ಇಂಜಿನ್ನಿನ ಒಲೆಯಂತೆ ಉರಿಯುತ್ತ ಇರುತ್ತದೆ. ಮುಂಜಾನೆ ಮತ್ತು ಸಂಜೆ ಯಾವಾಗಲೂ ಒಲೆಹೊತ್ತಿಸುವ ಸಮಯದಲ್ಲಿ ಊರೆಲ್ಲ ಹೊಗೆಮಯವಾಗಿರುತ್ತದೆ. ಬೆಳಗಿನ ತಿಂಡಿಗೆ ಪೂರಿ, ಜಿಲೇಬಿ, ಒಗ್ಗರಣೆ ಅವಲಕ್ಕಿ ಮಾಡಿದರೆ ಅನಂತರ ಕಚೋರಿ, ಸಾಮೋಸಾ ಮಾಡಿರುತ್ತಾರೆ. ಚಹ ಮಾತ್ರ ಹೇಳಿದ ನಂತರ ಮಾಡಿಕೊಡು ತ್ತಾರೆ. ಕೊಂಡ ನಂತರ ತೊಳೆಯದ, ಮಸಿಮಯವಾದ ಪಾತ್ರೆಗೆ ಹಾಲು, ಸಕ್ಕರೆ, ಚಹದಪುಡಿ, ಹಸಿಶುಂಠಿ ಸೇರಿಸಿ ಎಲ್ಲವನ್ನೂ ಕುದಿಸಿ ಪಾಯಸವಾದ ನಂತರ, ಕೊಳೆಯಾದ ಬಟ್ಟೆಯಲ್ಲಿ ಸೋಸಿ ಕೊಡುವರು. ಅಂಗಡಿಯವರು ನೀರನ್ನು ಎಂದೂ ತೊಳೆಯದ ಮಡಕೆ, ಇಲ್ಲವೇ ಜಂಗುಹತ್ತಿದ ಡ್ರಮ್ಮು ಗಳಲ್ಲಿ ತುಂಬಿಡುವದರಿಂದ ಆ ನೀರನ್ನು ಕುಡಿಯಲೂ ಮನಸ್ಸು ಬಾರದು. ತಪ್ಪಿ ಕುಡಿದರೆ ಹೊಟ್ಟೆ ಕೆಡುವದು ಖಂಡಿತ, ಚಹವನ್ನೆ ಕಾಸಿದ ನೀರು ಎಂದು ಕುಡಿದರೆ ಕುಡಿಯಬೇಕು.

ನಾವು, ತಾಂಬೂಲದ ಮುಖ್ಯ ಸಾಧನಗಳಾದ ಅಡಿಕೆ, ವೀಳ್ಯದೆಲೆ ವಿಪುಲ ವಾಗಿ ಬೆಳೆಯುವ ಪ್ರದೇಶದಲ್ಲಿ ಹುಟ್ಟಿ ದೊಡ್ಡವರಾದರೂ ತಾಂಬೂಲದ ವೈಭವ ನೋಡಲು ಮಧ್ಯಪ್ರದೇಶಕ್ಕೇ ಭೇಟಿಕೊಡಬೇಕು. ತಾಂಬೂಲದ ಅಭ್ಯಾಸ ಅಥವಾ ಚಟ ಇಲ್ಲದವರು ಅಲ್ಲಿ ತೀರ ವಿರಳ. ನಮ್ಮಲ್ಲಿ ತಾಂಬೂಲದ ಎಲ್ಲ ಸಾಮಾನು ಕೊಂಡು ತಟ್ಟೆಯಲ್ಲಿ ಜೋಡಿಸಿಟ್ಟು ಬಂದವರಿಗೆ ಆದರಿಸಿ ತಾವೂ ಅಷ್ಟು ತಿನ್ನುವ ರೂಢಿಯಿದ್ದರೆ ಅಲ್ಲಿ ಅಂಗಡಿಯವನು ಮಾಡಿಕೊಟ್ಟ ಸಿದ್ಧ-ಬೀಡಿಗಳನ್ನೇ ತಿನ್ನುವದು ರೂಢಿ. ಅಂತೆಯೇ ಪಾನ್-ಅಂಗಡಿಗಳಿಗೆ

ಕೊನೆಮೊದಲಿಲ್ಲ. ಮುಂಜಾನೆ ಏಳುತ್ತಿದ್ದಂತೆ ಬಾಯಾಡಿಸಲು ಪ್ರಾರಂಭಿಸಿದವರು ರಾತ್ರೆ ಮಲಗುವ ತನಕ ಮುಂದುವರಿಸುವದರಿಂದ ಔಷಧದ ಅಂಗಡಿಗಳಂತೆ ತಾಂಬೂಲದಂಗಡಿಗಳು ಸದಾ ತೆರೆದೇ ಇರುತ್ತವೆ. ಚಿಗುರೆಲೆಯ ದಂಟು ತೆಗೆದು, ಬೆಣ್ಣೆಯಂತಹ ಚಿಪ್ಪಿನ ಸುಣ್ಣ ಸವರಿ ಕಲಾತ್ಮಕವಾಗಿ ಮಸಾಲೆ-ಅಡಿಕೆ ಹೋಳು ಸೇರಿಸಿ ಸುರುಳಿ ಮಾಡಿ, ಮೇಲೊಂದು ಲವಂಗ ಚುಚ್ಚಿದ, ನಮ್ಮ ಊರಿನ ಬೀಡಗಳೆಲ್ಲಿ? ಕರ್ರಗಿನ ಎಲೆಗೆ ಮಳೆಗಾಲದ ರಾಡಿಯಂತಹ ಸುಣ್ಣ ಬಳಿದು, ಬಣ್ಣಬಣ್ಣದ ದ್ರವಗಳನ್ನು ಹಾಕಿ ಅಸಹ್ಯ ಕಾಣಿಸುವ ಅವರ ಪಾನ್ ಎಲ್ಲಿ? ಸುಣ್ಣ, ಕಾಚು ಅತಿಯಾಗಿ ಮೆತ್ತಿದ್ದರಿಂದ ವೀಳ್ಯ ಮುಟ್ಟಿದಾಗೊಮ್ಮೆ ಸಾಬೂನಿನಿಂದ ಕೈತೊಳೆದುಕೊಳ್ಳದೇ ನಿರ್ವಾಹವಿಲ್ಲದಿದ್ದರೂ, ಜನ ಕೈಯನ್ನು ಕೂದಲಲ್ಲಿ ಆಡಿಸಿ 'ಡ್ರ್ಯಾಕ್ಲೀನ್' ಮಾಡುವ ಪರಿಪಾಠವನ್ನು ಇಟ್ಟುಕೊಂಡಿದ್ದಾರೆ. ಎಂತಹ ದೊಡ್ಡ ಅಧಿಕಾರಿಯಾಗಿರಲಿ, ಎಷ್ಟು ಬೆಲೆಬಾಳುವ ಬಟ್ಟೆಗಳನ್ನು ತೊಟ್ಟಿರಲಿ, ಹಲ್ಲು, ನಾಲಿಗೆ, ಬಾಯಿ, ತುಟಿಗಳನ್ನು ಕೆಂಪು ಮಾಡಿಕೊಂಡು, ಪಾನ್ ಮೆಲಕಾಡಿಸುತ್ತ, ಜೊಲ್ಲುಸುರಿಸುತ್ತ, ಬಟ್ಟೆಗಳ ಮೇಲೆ ಕಲೆ ಹಾಕಿಕೊಂಡನೆಂದರೆ ಅವನು ಮಧ್ಯಪ್ರದೇಶದವನೆಂದು ಖಂಡಿತವಾಗಿ ಹೇಳಬಹುದು! ಆಫೀಸರರು ಆಗಾಗ ಚಪರಾಸಿಗಳಿಂದ 'ಪಾನ್' ತರಿಸಿ ಜಗಿಯುತ್ತಲೇ ಇದ್ದರೆ, ಇನ್ನಿತರರು ಎಂಟು-ಹತ್ತು ಬೀಡಗಳನ್ನು ನಿಂತು ಸಿದ್ಧಮಾಡಿಕೊಂಡು, ದಪ್ಪಕಾಗದದಲ್ಲಿ ಸುತ್ತಿಸಿಕೊಂಡು ಸದಾಕಾಲ ಜೇಬಿನಲ್ಲಿರುವ ಪ್ಲಾಸ್ಟಿಕ್ ಚೀಲಕ್ಕೆ ಸೇರಿಸಿ ನೆನಪಾದಾಗಲೊಮ್ಮೆ ತಿನ್ನುತ್ತಿರುವರು. ಬಟ್ಟೆಯ ಚುಂಚಿಯಲ್ಲಿ ತಾಂಬೂಲದ ಸಮಗ್ರ ಸಾಧನಗಳನ್ನು ಹೊತ್ತು ತಿರುಗುವ ಕಲೆ ಇವರಿಗಿನ್ನೂ ಕರಗತವಾದಂತಿಲ್ಲ.

ಅವರ 'ಪಾನ್' ನೋಡಲು ಅಸಹ್ಯವಾದರೂ ತಿಂದು ನೋಡಿದರೆ ರುಚಿ ಬಹಳವಂತೆ! ತಿನ್ನದವರಿಗೆ ಅದರ ಸ್ವಾದ ವೈಭವ ಹೇಗೆ ತಿಳಿಯಬೇಕು? ಅರಸುಮನೆತನದವರನ್ನು ನಾಚಿಸುವ ತಾಂಬೂಲ-ಚರ್ವಣವನ್ನು ಇವರು ಬೆಳೆಸಿಕೊಂಡದ್ದರಿಂದ, ಪಾನ್ ಅಂಗಡಿಯವನು ಕೂಡ ಸಾಕಷ್ಟು ಬಂಡವಾಳವನ್ನು ತೊಡಗಿಸಬೇಕು. ಹತ್ತಾರು ನಮೂನೆಯ ತಂಬಾಕುಗಳು, ಐದಾರು ವಿಧದ ಅಡಿಕೆಗಳು, ಎರಡು-ಮೂರು ಬಗೆಯ ಸುಣ್ಣಗಳು, ಕಾಚು, ಕೊಬ್ಬರಿ ಸೌಂಫ್ (ಬಡೀಸೋಪು), ಲವಂಗ, ಯಾಲಕ್ಕಿ, ಕಾನಪುರದಿಂದ ಕಿರಿ ಡಬ್ಬಿಗಳಲ್ಲಿ

ಬರುವ ಗುಲಕಂದ್, ಚಮನ್, ಠಂಡಾ, ಪೇಪರಮಿಂಟ್ ಮುಂತಾದವನ್ನು ಶೇಖರಿಸುತ್ತಾನೆ. ಗಿರಾಕಿಗಳು ತಮಗೆ ಬೇಕಾದ ಮಸಾಲೆದಾರ, ಠಂಡಾ, ಮೀಠಾ ಅಡಿಕೆ ಇಲ್ಲದ್ದು, ತಂಬಾಕು ಸಹಿತ, ಎಂದೆಲ್ಲ ಆರ್ಡರ್ ಕೊಟ್ಟಾಗ ಅದಕ್ಕೆ ಅನುಗುಣವಾಗಿ ಅವನು ಸಿದ್ಧಮಾಡಿಕೊಡುತ್ತಾನೆ. ಅದರ ಜೊತೆಗೆ ಒಬ್ಬನಿಗೆ ಹೆಚ್ಚಿನ ಸುಣ್ಣ ಕಟ್ಟಿಕೊಟ್ಟರೆ, ಇನ್ನೊಬ್ಬನಿಗೆ ಅಡಿಕೆ, ಮಗುದೊಬ್ಬ ನಿಗೆ ತಂಬಾಕು ಕೊಳ್ಳುವ ರೂಢಿ ಇರುತ್ತದೆ. ಇದನ್ನೆಲ್ಲ ಪ್ರತಿಸಲ ಪಾನ್ ತಿನ್ನುವಾಗ ಅಂಗಡಿಕಾರನಿಗೆ ವಿವರಿಸುವ ಬದಲಾಗಿ ಗಿರಾಕಿಗಳು ನಿರ್ದಿಷ್ಟ ಅಂಗಡಿಯನ್ನೇ ತಮ್ಮದನ್ನಾಗಿ ಮಾಡಿಕೊಂಡಿರುತ್ತಾರೆ.

ಎಲೆಗಳು ಒಣಗಬಾರದೆಂದು ಒದ್ದೆಬಟ್ಟೆಯ ಮೇಲೆ ಇಟ್ಟು ಅವಕ್ಕೆ ಮೇಲಿಂದ ಮೇಲೆ ನೀರು ಸಿಂಪಡಿಸುತ್ತಿರುತ್ತಾರೆ. ಆ ಬಟ್ಟೆಯ ಮೂಲ ಬಣ್ಣ ಯಾವುದು ಇತ್ತೆಂದು ಬ್ರಹ್ಮದೇವನಿಂದಲೂ ಹೇಳಲು ಸಾಧ್ಯವಿಲ್ಲ. ಸುಣ್ಣ, ಕಾಚುಗಳಿಂದ ಅಂಗಡಿಕಾರನ ಮುಂಗೈ ಕೇಸರಿಬಣ್ಣ ತಾಳಿರುತ್ತದೆ. ಅವನ ಅಂಗಿ, ಪಾಯಿಜಾಮಾಗಳೆಲ್ಲ ವೀಳ್ಯದ ಕೆಂಪುಬಣ್ಣ ಬಳಿದುಕೊಂಡಿರು ವದರಿಂದ ಅವನು ಯಾವ ಉದ್ಯೋಗ ಮಾಡುತ್ತಾನೆಂದು ಬೇರೆ ಹೇಳಬೇಕಿಲ್ಲ. ಗಿರಾಕಿಗಳು ಇಲ್ಲದಾಗ ತಾನೂ ಪಾನ್ ತಯಾರಿಸಿ ಜಗಿಯುತ್ತಿರುವದರಿಂದ ಅವನು ಉಳಿದೆಲ್ಲವರಿಗಿಂತ ಹೆಚ್ಚು ತಿನ್ನುತ್ತಿರಬೇಕೆಂದರೆ ಅತಿಶಯೋಕ್ತಿಯಾಗ ಲಾರದು. ಜನಸಾಮಾನ್ಯರ ಕೈಗಳೆಲ್ಲ ಸದಾಕಾಲ ವೀಳ್ಯದ ಬಣ್ಣದಿಂದ ಕೂಡಿರು ತ್ತಿದ್ದರಿಂದ ಅಲ್ಲಿ ಬಳಸುವ, ನಾಣ್ಯ-ನೋಟುಗಳೆಲ್ಲ ತಮ್ಮತನವನ್ನು ಕಳೆದು ಕೊಂಡು ಪಾನ್ ತಿಂದವರಿಗಿಂತ ಮೈಯೆಲ್ಲ ಕೆಂಪುಮಾಡಿಕೊಂಡಿರುತ್ತವೆ. ಬೇರೆಡೆಗಾದರೆ ಆ ನೋಟುಗಳನ್ನು ಯಾರೂ ಹಿಡಿಯುತ್ತಿರಲಿಲ್ಲ. ಆದರೆ ಅಲ್ಲಿ ಎಲ್ಲ ನೋಟುಗಳು ಹೀಗೇ ಇರುವದರಿಂದ ಅವು ಬೇಡವೆನ್ನುವ ಧೈರ್ಯ ಯಾರಿಗೆ ತಾನೇ ಇದ್ದೀತು?

ಸಾಯಕಲ್ ಮೇಲೆ ಹೋಗುತ್ತಿರಲಿ, ಬಸ್ಸಿನಲ್ಲಿ ಪ್ರಯಾಣಮಾಡು ತ್ತಿರಲಿ, ಕಾರನ್ನೇ ಹತ್ತಿರಲಿ, ಅತ್ತಿತ್ತ, ಹಿಂದೆಮುಂದೆ ನೋಡದೇ 'ಪಿಚಕ್' ಎಂದು ಪಾಕನ್ನು ಒಗೆಯುವದು ತೀರ ಸಾಮಾನ್ಯ ಮಾತು. ಆದ್ದರಿಂದ ರಸ್ತೆ ಗಳು, ಕಟ್ಟಡಗಳು, ಹೋಟೇಲುಗಳೆಲ್ಲ ಕೆಂಪು ನಕ್ಷೆ ತಾಳಿರುತ್ತವೆ. ಮಧ್ಯ- ಪ್ರದೇಶದ ಪೋಲೀಸಖಾತೆಯವರು, ವನವಿಭಾಗದವರು, ಸಾರಿಗೆಯವರೆಲ್ಲ

ತಮ್ಮ ಕರ್ಮಚಾರಿಗಳಿಗೆ ಟೆರಿಕಾಟ್‌ದ ಸುಂದರ ಸಮವಸ್ತ್ರಗಳನ್ನು ಹೊಲಿಸಿ ಕೊಟ್ಟರೂ ಅವರ ತಾಂಬೂಲ-ಚರ್ವಣದ ಗುರುತುಗಳಿಂದ ಅವೆಲ್ಲ ಅನಾಕರ್ಷಕ ವಾಗಿರುತ್ತವೆ. ಪ್ರವಾಸಕ್ಕೆ ಹೊರಡುವ ಮೊದಲು ಹೆಂಡರು-ಮಕ್ಕಳಿಗೆಲ್ಲ ಪಾನ್ ತೆಗೆಯಿಸಿ ಕೊಡುವ ಪರಿಪಾಠ ಬೆಳೆದುಬಂದಿದೆ. ಬಸ್ಸು ನಿಂತಾಗೊಮ್ಮೆ ಅರ್ಧದಷ್ಟಾದರೂ ಪ್ರವಾಸಿಕರು ಇಳಿದು ಚಹಾ ಕುಡಿದು ಬೀಡಾ ತಿಂದು, ತಿನಿಸಿ ಬಂದಾಗಲೇ ಬಸ್ಸು ಹೊರಡುವದು. ಇಂಥವರಿಗೆ ವೇಳೆ, ವೇಗದ ಪರಿವೆ ಎಲ್ಲಿಂದ ಬರಬೇಕು? ತಾಮಿಯದಿಂದ ಛಿಂದವಾಡಾ ಕೇವಲ ಇಪ್ಪತ್ತೆಂಟು ಮೈಲುಗಳ ಹಾದಿ. ಏಳು ಕಡೆಯಲ್ಲಿ ಗಾಡಿ ನಿಂತಿತು. ನಾಲ್ಕು ತಾಸಿನ ನಂತರ ಛಿಂದವಾಡಾ ತಲುಪಿದಾಗ ಗೆದ್ದೆವಪ್ಪಾ! ಅನಿಸಿತು.

ಆದಿವಾಸಿಗಳಿರುವ ಚಿಕ್ಕಪುಟ್ಟ ಹಳ್ಳಿಗಳಲ್ಲಿ ಕಾಡು, ಗುಡ್ಡಗಾಡುಪ್ರದೇಶ ದಲ್ಲಿ ಪಾನ್-ಅಂಗಡಿಗಳು ಇಲ್ಲದ್ದರಿಂದ ಅವರು ತಂಬಾಕು ನೀರಿನಲ್ಲಿ ಅದ್ದಿ ಒಣಗಿಸಿದ ಅಡಿಕೆ ತಿನ್ನುವದರ ಜೊತೆಗೆ ತಂಬಾಕು ತಿನ್ನುವ ಮತ್ತು ಸೇದುವ ಚಟ ಬೆಳೆಸಿಕೊಂಡಿರುತ್ತಾರೆ. ಆದ್ದರಿಂದ ಅವರ ಹಲ್ಲುಗಳೆಲ್ಲ ಹಳದಿ, ನಾಶಿಪುಡಿ, ಕೆಂಪು, ಕಪ್ಪುಬಣ್ಣಗಳನ್ನು ತಳೆದಿರುತ್ತವೆ. ಆದಿವಾಸಿಗಳು ಸರಕಾರದ ಆಶೀರ್ವಾದದಿಂದಲೇ ವಿವಿಧ ತರದ ಪಾನೀಯಗಳನ್ನು ತಾವೇ ತಯಾರಿಸಿ ಕುಡಿದರೆ, ನಗರವಾಸಿಗಳು ಕಳ್ಳರೀತಿಯಿಂದ ಕುಡಿಯುತ್ತಾರೆ. ಹೆಚ್ಚಿನ ಅಂಗಡಿ ಗಳಲ್ಲಿ ಸೆರೆ ಪೂರೈಸುವ ಪರಿಪಾಠವಿದೆ. ಕೆಲವರು ಊಟದ ಜೊತೆಯಲ್ಲಿ ಕುಡಿದರೆ ಕೆಲವರು ಕಪಾಟಿನ ಹಿಂದೆ ನಿಂತು ಔಷಧ ಕುಡಿದಂತೆ ಕುಡಿದು ಹಿಂತಿರುಗುತ್ತಾರೆ. ಹಬ್ಬ-ಹುಣ್ಣಿವೆಗಳಲ್ಲಂತೂ ಕುಡಿಯದವರು ಸಿಗುವದು ತೀರ ಅಪರೂಪ. ಆದಿವಾಸಿಗಳಲ್ಲಿ ಮನದಣಿ ಕುಡಿದು ಹಾಡುತ್ತ, ಕುಣಿಯುತ್ತ ಹಗಲು-ರಾತ್ರಿ ಕಳೆಯುವಂತಾದರೆ ಅದರಷ್ಟು ಸುಖ ಈ ಜೀವನದಲ್ಲಿ ಇನ್ನಿಲ್ಲವೆಂದು ತಿಳಿ ಯುತ್ತಾರೆ.

ಜನರ ಶಿಥಿಲಹೃದಯದಿಂದಾಗಿ ಕಾನೂನು, ಆಡಳಿತವ್ಯವಸ್ಥೆಗಳ ಪಾಲನೆ ಸರಿಯಾಗಿ ಆಗುತ್ತಿಲ್ಲ. ಅಂತೆಯೇ ಉತ್ಪನ್ನ, ಮಾರಾಟ, ಸಂಪತ್ತು, ಅಬಕಾರಿ ತೆರಿಗೆಗಳು ಸರಕಾರದ ಖಜಾನೆ ಸೇರುವದೇ ಇಲ್ಲ! ಆದ್ದರಿಂದ ಸರಕಾರ ಹೆಚ್ಚೆಚ್ಚು ತೆರಿಗೆಗಳನ್ನು ಹೇರಬೇಕಾಗುತ್ತದೆ. ಹೊಸ ಕರಗಳನ್ನು ಜಾರಿಗೆ ತರಬೇಕಾಗುತ್ತದೆ. ಸಾರಿಗೆ-ಖಾತೆ, ವಿದ್ಯುತ್‌ಮಂಡಳಿ, ನಗರಪಾಲಿಕೆಗಳು

ಆದಾಯವನ್ನು ಜೀರ್ಣಿಸಿಕೊಳ್ಳುವದರಲ್ಲಿ ಹೆಸರುವಾಸಿ. ಕಾನೂನು ಪಾಲಿಸುವ ವರ್ಗಕ್ಕೇ ಸರಕಾರ ಹೆಚ್ಚಿನ ಕರಭಾರ ಹೊರಿಸುವದರಿಂದ ಅವರೂ ಅದಕ್ಕೆ ನಿವಾರಣೋಪಾಯ ಕಂಡುಕೊಂಡಿದ್ದಾರೆ. ಕರ ಕಡಿಮೆಯಿರುವ ನೆರೆಯ ರಾಜ್ಯ ಮಹಾರಾಷ್ಟ್ರಕ್ಕೆ ಹೋಗಿ ಆವಶ್ಯಕ ಸಾಮಾನುಗಳನ್ನು ಖರೀದಿಸುವರು. ಸರಕಾರದ ಅಪ್ಪಣೆಯಿಲ್ಲದೇ ಅರಣ್ಯಸಂಪತ್ತನ್ನು ದೋಚಿಕೊಂಡು ಬರುವರು. ಅಧಿಕಾರಿಗಳ ಕೈ ಬಿಸಿಮಾಡುವರು. ಇಲ್ಲಿಯಷ್ಟು ನಿರ್ಲಕ್ಷ್ಯದ ಪೋಲೀಸಖಾತೆ ಹುಡುಕಹೋದರೆ ಬೇರೆಡೆ ಸಿಗಲಿಕ್ಕಿಲ್ಲ. ಸರಕಾರಿ ಸಂಪತ್ತಿನ ಸುಲಿಗೆ, ಅಧಿಕಾರಿಗಳ ಕೈ ಬಿಸಿಮಾಡುವದು, ಅವರ ಕಣ್ಣೆದುರಿಗೇ ನಡೆದಿರುತ್ತದೆ. ಅವರ ಮುಂದೆಯೇ ಸಾಯಕಲ್ ಮೇಲೆ ನಾಲ್ಕು ಜನ ಸವಾರಿಮಾಡಿದರೂ ಕಣ್ಣು ಮುಚ್ಚಿ ಸುಮ್ಮನಿದ್ದುಬಿಡುತ್ತಾರೆ. ಸಾಯಕಲ್ ಮತ್ತಿತರ ವಾಹನಗಳನ್ನು ರಾತ್ರಿ ನಡೆಸಬೇಕಾದರೆ ಅವಕ್ಕೆ ದೀಪ ಇರಬೇಕೆಂಬ ನಿಯಮ ಇದ್ದದ್ದು ಪೋಲೀಸರಿಗೆ ಗೊತ್ತಿದ್ದಂತೆ ಇಲ್ಲ! ಹೀಗಾಗಿ ಕಗ್ಗತ್ತಲ ರಾತ್ರಿಯಲ್ಲಿ ದೀಪ, ಗಂಟೆ, ಕೆಲವೊಮ್ಮೆ ಬ್ರೇಕ್ ಕೂಡಾ ಇಲ್ಲದೇ ಸಾಯಕಲ್-ರಿಕ್ಷಾಗಳನ್ನು ಹಾಗೇ ನಡಿಸುತ್ತಾರೆ. ಈ ವಾಹನಗಳು ಬೇರೊಂದು ವಾಹನಕ್ಕೆ ಡಿಕ್ಕಿಹೊಡೆಯುವದು, ಜನರ ಮೈಮೇಲೆ ಹಾಯಿಸುವದು ಅತೀಸಾಮಾನ್ಯ, ಆದರೆ ಯಾರೊಬ್ಬರೂ ರೇಗದೇ, ಜಗಳ ಕಾಯದೇ, ಕೈಗೆ ಕೈ ಹತ್ತಿಸದೇ, ಬಿದ್ದರೂ ಇದೇನು ಮಹಾ? ಎಂದು ನಕ್ಕು ತಮ್ಮ ಪಾಡಿಗೆ ತಾವು ಹೋಗುವದರಿಂದ ಅವರ ಸಹನಶೀಲತೆಯ ಕಲ್ಪನೆ ಬರುವಂತಿದೆ.

ಮಾರವಾಡಿಗಳಂತೆ ಅಪಾರ ಸಂಪತ್ತನ್ನು ಕೂಡಿಹಾಕಬೇಕೆಂಬ ಕನಸು ಅವರಿಗಿಲ್ಲ. ಸಿಂಧಿಗಳಂತೆ ಯಾವ ಮಾರ್ಗದಿಂದಲಾದರೂ ವ್ಯಾಪಾರ ಸಾಗಿಸಬೇಕೆಂಬ ಹಂಬಲ ಅವರಿಗಿಲ್ಲ. ಹೀಗಾಗಿ ಗಿರಾಕಿಗಳಿಗಾಗಿ ಹಲುಬಿ ಕರೆಯುವ ಪದ್ಧತಿ ಇಲ್ಲಿಲ್ಲ. ತಾವಾಗಿ ಹುಡುಕಿಕೊಂಡು ಬಂದ ಗಿರಾಕಿಗಳಿಗೆ ನಿರ್ಲಕ್ಷ್ಯಭಾವದಿಂದ ಸಾಮಾನು ಒದಗಿಸಿ ಉಸ್ಸಪ್ಪಾ ಎನ್ನುತ್ತಾರೆ ಅಂಗಡಿಕಾರರು. ನಯವಾಗಿ ಮಾತನಾಡಿ, ಇಲ್ಲದ ಸಾಮಾನು ಇದೆಯೆಂದು ಹೇಳಿ, ಬೇರೆಯೇ ಸಾಮಾನು ಕಟ್ಟಿಕೊಡುವ ಇತರ ಬನಿಯಾರಿಗೂ, ಇದ್ದ ಸಾಮಾನು ನೋಡುವ ಗೋಜಿಗೇ ಹೋಗದೇ ಇಲ್ಲವೆನ್ನುವ ಮಧ್ಯಪ್ರದೇಶದ ವ್ಯಾಪಾರಿಗೂ ಆಕಾಶ-ಪಾತಾಳದಷ್ಟು ಅಂತರವಿದೆ.

ಆರ್ಥಿಕ ವ್ಯವಸ್ಥೆ, ಸಾಮಾಜಿಕ-ರಾಜಕೀಯ ಮುನ್ನಡೆಯ ದೃಷ್ಟಿಯಿಂದ ಹಿಂದುಳಿದ ರಾಜ್ಯ ಎನಿಸಿಕೊಂಡರೂ ಜೀವನದ ಕ್ಷಣಭಂಗುರತೆ, ನಶ್ವರತೆಯನ್ನು ತಿಳಿದು ಕೂಡ ಜನ ಅವಕ್ಕೆ ಹೆಚ್ಚಿನ ಮಹತ್ವ ಕೊಟ್ಟಿಲ್ಲ. ಕರ್ನಾಟಕದ ನಮಗಾದರೋ, ಪಂಜಾಬದ ಮೇಲ್ಪಂಕ್ತಿ ಅನುಸರಿಸಬೇಕೇ ಮಧ್ಯಪ್ರದೇಶದವರಂತೆ ಜೀವನವನ್ನು ಲಘುವಾಗಿ ನೋಡಬೇಕೇ ಎಂಬುದು ತಿಳಿಯದೆ ಗೊಂದಲವಾಗಿದೆ!

M - 12

33 ॥ 8

## ೩. ಸಂತೆ

ರವಿವಾರ ಛಿಂದವಾಡಾದ ಸಂತೆ. ಅಂದು ಮುಂಜಾನೆಯಿಂದಲೇ ಅಲ್ಲಿ ಹೆಚ್ಚಿನ ಚಟುವಟಿಕೆಗಳಿಗೆ ಪ್ರಾರಂಭ. ಆದಿವಾಸಿಯೋರ್ವನು 'ಭೂಸಾ ಖರೀದಿಸಿ, ಭೂಸಾ' ಎಂದು ಕೂಗುತ್ತ ಓಣಿಗಳಲ್ಲೆಲ್ಲ ಓಡಾಡಲಾರಂಭಿಸಿದ್ದರಿಂದ ಕುತೂಹಲ ಕೆರಳಿತು. ಬೂಸಾ-ಸಾಹಿತ್ಯ ಕನ್ನಡಿಗರಿಗಷ್ಟೇ ಮೀಸಲಾದ ಆಪಾದನೆ ಕೇಳಿದ್ದರಿಂದ, ಈ ಬೂಸಾ ಕರ್ನಾಟಕದಿಂದ ಇಲ್ಲಿ ಬಂದದ್ದೇ ಅಥವಾ ಖಾಸ್ ಮಧ್ಯಪ್ರದೇಶದ್ದೇ ನೋಡೋಣವೆಂದು ಹೊರಗೆ ಬಂದೆ. ನಮ್ಮ ರಾಜ್ಯದಿಂದ ಬಂದದ್ದಾದರೆ ಅದರಲ್ಲಿ ಯಾವ ಯಾವ ಸಾಹಿತಿಗಳ ಕೃತಿಗಳು ಸಮಾವೇಶವಾಗಿವೆ ಎಂದು ತಿಳಿಯುವ ಉತ್ಸುಕತೆಯಿತ್ತು. ಕೂಗುವವನು ಚಕ್ಕಡಿತುಂಬ ಕಟ್ಟಿಗೆ-ಪುಡಿಯ ಚೀಲಗಳನ್ನು ತಂದು ಎರಡು ರೂಪಾಯಿಗೆ ಒಂದರಂತೆ ಮನೆಮನೆಗೆ ಒಯ್ದು ಹಾಕುತ್ತಿದ್ದ. ಭೂಸಾ ತಯಾರಿಸಲು ಸಾಕಷ್ಟು ಕಟ್ಟಿಗೆ ಆ ರಾಜ್ಯದಲ್ಲಿರುವದರಿಂದ ಸಾಹಿತಿಗಳು ಅದರ ಉತ್ಪಾದನೆಗೆ ಸಹಾಯಮಾಡಬೇಕಾಗಿಲ್ಲವೆಂದು ಆನಂತರದ ದಿನಗಳಲ್ಲಿ ತಿಳಿಯುವಂತಾಯಿತು!

ನಸುಕಿನಲ್ಲಿಯೇ ತಮ್ಮ ಹಳ್ಳಿಗಳಿಂದ ಹೊರಟ ಜನ ಸುಮಾರು ಒಂಭತ್ತು ಗಂಟೆಗೆ ಸಂತೆಯ ಪೇಟೆಯನ್ನು ಸೇರಲಾರಂಭಿಸಿದರು. ಆ ಜನಜಂಗುಳಿಯಲ್ಲಿ

ನುಸುಳಿ ಓಡಾಡುವವಕ್ಕಿಂತ ಆಯಕಟ್ಟಿನ ಸ್ಥಳದಲ್ಲಿ ಒಂದೆಡೆ ಕುಳಿತು ಎಲ್ಲ ವನ್ನು ವೀಕ್ಷಿಸುವದು ಹೆಚ್ಚು ಮೋಜಾಗಿರುತ್ತದೆ. ಕೃಷಿಕರು, ಆದಿವಾಸಿಗಳು ತಾವು ಬೆಳೆದಂತಹ ಬೆಂಡೆಕಾಯಿ, ಸೋರೆಕಾಯಿ, ಬದನೆ, ಹೀರೆಕಾಯಿ, ಬಾಳೆ ಕಾಯಿ, ಮಾವಿನಕಾಯಿ, ಹಾಲುಗುಂಬಳ, ಹಸಿಮೆಣಸು, ಕೋತಂಬರಿ, ಕೋಳಿ-ಮೊಟ್ಟೆಗಳೊಂದಿಗೆ ಬರುವದು ವಾಡಿಕೆ. ಸಂತೆ ಸೇರುವ ಸ್ಥಳವಾದ ಬಡಿ ಬಝಾರಕ್ಕೆ ಹಳ್ಳಿಗರು ಮುಟ್ಟುವ ಮೊದಲೇ, ದುಡ್ಡಿಗೆ ಪಂಜೇರು ಕೊಳ್ಳುವ ಹವಣೆಯಲ್ಲಿದ್ದ ಮಾರವಾಡಿ, ಬನಿಯಾಗಳು ಜೇನ್ನೊಣಗಳಂತೆ ಸುತ್ತುತ್ತಿರು ತ್ತಾರೆ. ಬೆಲೆಯಲ್ಲಿ, ತೂಕದಲ್ಲಿ, ಲೆಕ್ಕಾಚಾರದಲ್ಲಿ ಸತತ ತಮಗೇ ಲಾಭವಾಗ ಬೇಕೆಂದು ಅವರ ವಿಚಾರ. ಪೋಲಿಗಳಿಗೂ ಅಂದು ವಿಶೇಷ ದಿನ. ದಷ್ಟಪುಷ್ಟ ರಾದ ಹಳ್ಳಿಯ ಯುವತಿಯರಿಗೆ ಗದ್ದಲದಲ್ಲಿ ಡಿಕ್ಕಿಹೊಡೆದು, ಕಾಸು ಕೊಡದೇ ಆಗೀಗ ಹಣ್ಣುಕಾಯಿ ಗಿಟ್ಟಿಸಲು ಸದವಕಾಶ.

ಪ್ರತಿಯೊಂದು ಸಾಮಾನು ಮಾರಲೂ ನಿರ್ದಿಷ್ಟಸ್ಥಾನಗಳನ್ನು ಗೊತ್ತು ಪಡಿಸಲಾಗಿದೆ. ಛಿಂದವಾಡಾದ ಪರಿಸರದ ಕೃಷಿಕಾರರು ಕಾಯಿಪಲ್ಯವನ್ನು ವಿಪುಲವಾಗಿ ಬೆಳೆಸುವದರಿಂದ ರಾಶಿರಾಶಿಯಾಗಿ ಮಾರಾಟಕ್ಕೆ ತಂದಿದ್ದರು. ಮಾರಾಟದಲ್ಲಿ ತಲ್ಲೀನರಾದವರು ಒಮ್ಮೆಂದೊಮ್ಮೆ ಎಲ್ಲ ಕೆಲಸವನ್ನು ಬಿಟ್ಟು ಕೈಯಲ್ಲೊಂದು ದೊಣ್ಣೆ ಹಿಡಿದು ಪೋಲೀಸ ದಕ್ಷತೆಯಿಂದ ನಿಂತಾಗ ಯಾರೋ ಮಹತ್ವದ ಅತಿಥಿಗಳು ಬರುತ್ತಿದ್ದಿರಬಹುದು ಎಂದು ತಿರುಗಿ ನೋಡಿದೆ. ಆನೆಯೊಂದಿಗೆ ಸ್ಪರ್ಧೆಗೆ ಇಳಿದ ಗೂಳಿಯೊಂದು ಗಜಲೀಲೆಯಿಂದ ಬರುತ್ತಾ ಇತ್ತು. ಅದಕ್ಕೆ ಬೇಡವೆಂದು ಒಗೆದ ಮೂಲಂಗಿ ಸೊಪ್ಪು, ಕೀಟ ತಿಂದ ಕೋಸು, ಹಣ್ಣುಮೆಣಸಿನಕಾಯಿಯಲ್ಲಿ ಆಸಕ್ತಿ ಇದ್ದಂತಿರಲಿಲ್ಲ. ಲಾಠಿಯ ಏಟುಗಳು ಬೀಳುತ್ತಿದ್ದರೂ ಹೆಂಗಳೆಯರಿಗೆ ಯಾರು ಹೆದರುತ್ತಾರೆ ಎಂಬ ನಿರ್ಲಕ್ಷ್ಯಭಾವ ದಿಂದ ತನಗೆ ರುಚಿಸುವ ಟೊಮೆಟೊ, ಬದನೆಕಾಯಿ, ಸುಲಿದಿಟ್ಟ ವಟಾಣಿಕಾಳು ಗಳನ್ನು ತಿಂದು ತೇಗಿ, ಒಂದೆಡೆ ನೆರಳಿನಲ್ಲಿ ವಿಶ್ರಮಿಸಿ ಮೆಲುಕಾಡಿಸಲು ಪ್ರಾರಂಭಿಸಿತು. ಕೃಷಿಕನೊಬ್ಬ ಮಾರಾಟವಾಗದೇ ಉಳಿದ ಕೆಲವು ಕಾಲಿಫ್ಲಾವರ್ (ಹೂಕೋಸು)ಗಳನ್ನು ಗೊಂಡನಿಗೆ ಕೊಡಲು ಬೆಲೆ ಹೊಂದಿಸುವವರಲ್ಲಿದ್ದ. ಅಷ್ಟರಲ್ಲಿ ಗೂಳಿ ನುಗ್ಗಿ ಕ್ಷಣದಲ್ಲಿ ಆ ರಾಶಿಯನ್ನು ಕಬಳಿಸಿತು. ಮಾರಾಟ ಗಾರನು, "ಈ ಗೂಳಿಯೇ ವಾಸಿ, ಗೊಂಡನಿಗೆ ಮಾರಾಟವನ್ನು ಮನಗಾಣಿಸುವ

ಕಷ್ಟವನ್ನೆ ತಪ್ಪಿಸಿತು!" ಎಂದು ನಗುತ್ತ ಖಾಲಿ ಬುಟ್ಟಿಯನ್ನು ತಲೆಗೇರಿಸಿ ಗೃಹಾಭಿಮುಖನಾದ.

ಬಟಾಟೆ, ಈರುಳ್ಳಿ, ಬೆಳ್ಳುಳ್ಳಿ ಮಾರುವವನ ಮುಂದೆ ಬಜಂತ್ರಿಗಳಿಬ್ಬರು ಮೋರಿ ಮತ್ತು ಢೋಲು ಬಾರಿಸುತ್ತ ಕುಳಿತಿದ್ದರು. ಇದು ಗಿರಾಕಿಗಳನ್ನು ಆಕರ್ಷಿಸುವ ಹೊಸ ಪದ್ಧತಿ ಇದ್ದಿರಬಹುದು ಎಂದುಕೊಳ್ಳುವಷ್ಟರಲ್ಲಿ ಯುವಕನೊಬ್ಬ ಬಂದವರಿಗೆ ಬತ್ತಾಸು ಕೊಟ್ಟು ಮುದಿಯನಿಗೆ ಗಂಡುಮಗು ಹುಟ್ಟಿದೆಯೆಂದು ಸಾರಿದ. ಮೊಮ್ಮಗ ಹುಟ್ಟುವ ಪ್ರಾಯದಲ್ಲಿ ಮಗ ಹುಟ್ಟಿದರೂ (ಎಷ್ಟನೆಯದೆಂದು ಗೊತ್ತಿಲ್ಲ) ಸಂಭ್ರಮದಲ್ಲಿದ್ದವನನ್ನು ನೋಡಿ ತಲೆದೂಗಿದೆ. ಕಾಡಿ ಬೇಡಿ ತರಕಾರಿ ಸಂಗ್ರಹಿಸುವವರು, ಕರವೆಂದು ಪಕ್ಕಿನಿಂದ ಒಯ್ಯುವವರು, ಅವಕಾಶ ಸಿಕ್ಕಾಗ ಕಾಯಿಪಲ್ಯ ಕದಿಯುವವರು ಅಲ್ಲಿದ್ದರು. ಒಂದು ದೃಷ್ಟಿಯಲ್ಲಿ ಇಲ್ಲಿ ಸಿಗುವ ಒಳ್ಳೆಯ ಮತ್ತು ಅಗ್ಗದ ತರಕಾರಿ ಭಾರತದ ಬಹುಸಂಖ್ಯಾತ ಊರುಗಳಲ್ಲಿ ದೊರೆಯುವದಿಲ್ಲ. ಅಂತೆಯೇ ನಾಗಪುರ, ಭೋಪಾಲ್, ಕಲಕತ್ತೆಗಳಿಗೆ ಟ್ರಕ್ಕುಗಳಲ್ಲಿ ತರಕಾರಿ ತುಂಬಿ ತುಂಬಿ ಇಲ್ಲಿಂದ ಕಳಿಸುತ್ತಿರುತ್ತಾರೆ.

ಸಿದ್ಧಬಟ್ಟೆಗಳಿಗೆ ಹೆಚ್ಚಿನ ಬೇಡಿಕೆ ಇರುವದರಿಂದ ಅವೂ ಹೆಚ್ಚಿನ ಪ್ರಮಾಣದಲ್ಲಿ ಬಂದಿದ್ದವು. ಇಲ್ಲಿಯ ಆದಿವಾಸಿಗಳಿಗೆ ಇನ್ನೂ ಗಾಂಧಿವಾದದಲ್ಲಿ ನಂಬಿಕೆ ಇರುವದರಿಂದಲೋ ಏನೋ, ಖಾದಿಟೋಪಿ ತಪ್ಪದೇ ಧರಿಸುತ್ತಾರೆ! ಹತ್ತಾರು ಕಳ್ಳ ಕಿಸೆಯುಳ್ಳ ಒಳ-ಅಂಗಿ, ಕಸೆ-ಬಂಡಿಗೂ ಹೆಚ್ಚಿನ ಬೇಡಿಕೆ. ನಗರದ ಹೊಲಿಗೆಯ ಬೆಲೆಯಲ್ಲಿ ಇಲ್ಲಿ ಸಿದ್ಧವಾದ ರವಕೆ ಸಿಗುತ್ತದೆಂದರೆ ಆಶ್ಚರ್ಯವಾಗದೇ ಇರದು. ಅವರು ಉಡುವ ಉದ್ದವಾದ ಕಡಿಮೆ ಬೆಲೆಯ ಸೀರೆಗಳ ಅಚ್ಚಬಣ್ಣವೂ ಮಾಸದಿರುವದು ಚಮತ್ಕಾರ. ಹಳ್ಳಿಗರು ಉಡುವ ಕೋರಾ ಧೋತರಗಳೂ ವಿಪುಲವಾಗಿದ್ದವು.

ಶೃಂಗಾರ-ಸಾಧನಗಳ ಅಂಗಡಿಗೆ ಹೆಂಗಳೆಯರು ದಾಳಿಯನ್ನೇ ಇಟ್ಟಿದ್ದರು. ಪ್ರತಿದಿನ ತೊಳೆದು ಹೋಗುವ ಕುಂಕುಮದಲ್ಲಿ ಅವರು ವಿಶ್ವಾಸವಿಡದ್ದರಿಂದ ಥಳಥಳ ಹೊಳೆಯುವ, ಮೇಣದಿಂದ ಅಂಟಿಸಿಕೊಳ್ಳುವ, ವಿವಿಧ ಬಣ್ಣದ ಸಿದ್ಧ ಕುಂಕುಮ ಕೊಳ್ಳುತ್ತಿದ್ದರು. ಕೊರಳಿಗೆ ಮಣಿಸರ, ಕೈಗೆ ಬಳೆಗಳನ್ನು ಕೊಂಡರು. ಕನ್ನಡಿ, ಬಾಚಣಿಕೆಗಳು ಮಾರಾಟವಾದವು, ಹತ್ತಿರದಲ್ಲಿಯೇ ವಿವಿಧ ಧಾತುಗಳ ಮಿಶ್ರಣದಿಂದ ಬೆಳ್ಳಿಯನ್ನು ಹೋಲುವ ಆಭರಣಗಳ ಅಂಗಡಿಗಳು ತಲೆಯೆತ್ತಿ

ನಿಂತಿದ್ದವು. ಅವನ್ನು ಕೊಂಡವರಿಗಿಂತ ನೋಡಿ ಸಂತೋಷಪಟ್ಟವರೇ ಹೆಚ್ಚು. ತಾಮ್ರ-ಹಿತ್ತಾಳೆಯ ಉಂಗುರಗಳು, ಭೂತ-ಪ್ರೇತಗಳಿಂದ ಸಂರಕ್ಷಿಸುವ ವಿವಿಧ ಹರಳುಗಳ ಉಂಗುರಗಳನ್ನು ಕೊಂಡರು. ಪುರುಷರು ತಮ್ಮ ದೊಣ್ಣೆ ಕಾಡು ಹಾದಿಯಲ್ಲಿ ಸವೆದುಹೋಗದಂತೆ ಅವಕ್ಕೊಂದು ಉಂಗುರ ಹಾಕಿಸುವದರಲ್ಲಿ, ಚಿಲುಮೆ, ಬೂರಲಹತ್ತಿ, ತಂಬಾಕುಡಬ್ಬಿ ಆರಿಸುವದರಲ್ಲಿ ಮೈಮರೆತಿದ್ದರು. ಮಾರಲು ಬಂದ ತಂಬಾಕುಗಳ ಪ್ರಕಾರಕ್ಕಂತೂ ಕೊನೆಮೊದಲಿಲ್ಲ.

ಧಾನ್ಯದ ಅಂಗಡಿಗಳಲ್ಲಿ ಗೋದಿ, ಗೋವಿನ ಜೋಳಗಳಿಗೆ ಹೆಚ್ಚಿನ ಬೇಡಿಕೆಯಿದ್ದರೂ, ವಿವಿಧ ಪ್ರಕಾರದ ಅಕ್ಕಿ, ಸುಜ್ಜು, ಸಿಪ್ಪೆಸಹಿತ ಬೇಳೆಗಳು, ಸಿಪ್ಪೆತೆಗೆದ ಬೇಳೆಗಳೆಲ್ಲ ಅಲ್ಲಿದ್ದವು. ಬಿಸಿಲಿನ ತಾಪಕ್ಕೆ ಕರಗಿದ ಡಾಂಬರದಂತೆ ಇದ್ದ ಬೆಲ್ಲಕ್ಕೆ ಮುತ್ತಿದ ಕುಂಬಾರ-ಕೀಟದೊಂದಿಗೆ ನೊಣಗಳು ಸ್ಪರ್ಧೆಗೆ ಇಳಿದಿದ್ದವು. ಸಂತೆಗೆ ಬಂದಾಗಲೊಮ್ಮೆ ಮೀನು, ಮಾಂಸ, ಕೋಳಿ, ತತ್ತಿಗಳನ್ನು ಖರೀದಿಸುವವರು ಇರುವದರಿಂದ ಅವುಗಳ ಅಂಗಡಿಗಳೂ ಇದ್ದವು. ಬಣ್ಣದಿಂದ ಸುಂದರ ಆಕೃತಿಗಳನ್ನು ತೆಗೆದ ಮಡಕೆಗಳ ಜೊತೆಗೆ ಮಕ್ಕಳಿಗಾಗಿ ಆಟಿಗೆಗಳನ್ನೂ ತಂದಿದ್ದರು, ಕುಂಬಾರರು.

ಗೊಂಡರನ್ನು ಹತ್ತಿರದಿಂದ ನೋಡಬೇಕಾದರೆ ಛಿಂದವಾಡಾದ ಉತ್ತರಕ್ಕೆ ನಾಲವತ್ತು ಕಿಲೋಮೀಟರ ದೂರ ಇರುವ ತಾಮಿಯಕ್ಕೆ ಹೋಗಬೇಕೆಂದು ಯಾರೋ ಸೂಚಿಸಿದ್ದರಿಂದ "ಸಾವನ್" (ಶ್ರಾವಣ)ಹಬ್ಬಕ್ಕಾಗಿ ದೊಡ್ಡ ಸಂತೆ ಸೇರಿದಾಗ ಅಲ್ಲಿಗೆ ಹೋಗುವ ಅವಕಾಶ ಸಿಕ್ಕಿತು. ಊರ ಮಧ್ಯದಲ್ಲಿ ಇರುವ ಮೇಘನಾಥ ಮಂಚಲ (ನೋಡಿ, "ಧಾರ್ಮಿಕರು") ಬಿಕೋ ಎಂದು ನಿಂತಿತ್ತು. ಐಪರಿಯಾ ಮತ್ತು ಪರಾಸಿಯಾದಂತಹ ದೂರದ ಊರಿನಿಂದ ಬರುವ ವ್ಯಾಪಾರಿಗಳು ವಾಹನಗಳಲ್ಲಿ ಬಂದು ಇಳಿದರೂ, ಮಟಕುಲ, ಪಾತಾಳ ಖೋಲ ಮೊದಲಾದ ಹತ್ತಿರದ ಹಳ್ಳಿಗಳಿಂದ ಬರುವ ಆದಿವಾಸಿಗಳು ಇನ್ನೂ ಅರ್ಧದಾರಿಯಲ್ಲೇ ಇದ್ದರು. ಸೂರ್ಯದೇವನು ನೆತ್ತಿಯ ಮೇಲೆ ಬಂದು ಒಂದು ತಾಸಾದ ನಂತರ ಜನರು ಒಂದೆಡೆ ಸೇರಲಾರಂಭಿಸಿದರು. ಕೆಲವರು ಉತ್ತರದಿಂದ ಬಂದರೆ ಇನ್ನು ಕೆಲವರು ದಕ್ಷಿಣದಿಂದ ಬಂದರು. ಹಲವರು ಹೊಲದೊಳಗಿಂದ ಹಾದು ಬಂದರೆ, ಇನ್ನುಳಿದವರು ಕಾಡಿನ ದಾರಿ ತುಳಿದು, ಗುಡ್ಡಗಳನ್ನು ಹತ್ತಿ ಇಳಿದು ಬಂದರು.

ಆದಿವಾಸಿಗಳೆಲ್ಲ ಕಡು ಬಡವರಾದ್ದರಿಂದ ಅವರ ಹತ್ತಿರ ನಗದು ಹಣ ಇರುವದು ತೀರ ವಿರಳ. ಸಾವನ (ರಕ್ಷಾಬಂಧನ) ಹಬ್ಬಕ್ಕೆ ಬೇಕಾಗುವ ಎಲ್ಲ ಸಾಮಾನು, ಸಂತೆಯಲ್ಲಿ ಅವರು ಕೊಳ್ಳಲು ಬಂದವರಾದ್ದರಿಂದ ತಾವು ಉತ್ಪಾದಿಸಿದ್ದ ಇಲ್ಲವೇ ತಮ್ಮಲ್ಲಿದ್ದ ಸಾಮಾನು ಸಂತೆಯಲ್ಲಿ ಮಾರಿ, ಇಲ್ಲವೇ ಅದಲು ಬದಲು ಮಾಡಿಯೇ ಕೊಳ್ಳಬೇಕಾಗುತ್ತದೆ. ಹೀಗಾಗಿ ಅವರು ಈಚಲಗರಿಯ ಚಾಪೆ, ಕಸಬರಿಗೆ, ತತ್ತಿ, ಹುಂಜ, ಕುರಿಗಳೊಂದಿಗೆ ಹೊರಟಿದ್ದರು. ಒಬ್ಬಳು ಹೊಳೆಹೊಳೆಯುವ ಹಿತ್ತಾಳೆಯ ಚೊಂಬಿನಲ್ಲಿ ತುಪ್ಪ ತಂದರೆ, ಇನ್ನೊಬ್ಬನು ತಾರವಿಜೋಡಿ ಇರುವ ಎತ್ತುಗಳನ್ನು ಮಾರಲು ಹೊರಟಿದ್ದ. ಪುರುಷರು ದೊಣ್ಣೆಯೊಂದಿಗೆ ಒಂಟಿಯಾಗಿ ಬರುತ್ತಿದ್ದರೆ, ಹೆಂಗಳೆಯರು ಗುಂಪುಗುಂಪಾಗಿ ನಡೆಯುತ್ತಿದ್ದರು. ಕಾಲಿಗೆ ಮೆತ್ತಿಕೊಂಡ ಕೆಸರು, ಚಿಕ್ಕಮಕ್ಕಳನ್ನು ಸಂಗಡ ತರದೇ ಇರುವದು, ಇದರ ಮೇಲಿಂದ ಅವರು ತುಂಬ ದೂರದಿಂದ ಬರುತ್ತಿದ್ದಾರೆ ಎಂದು ಸುಲಭವಾಗಿ ಹೇಳಬಹುದು.

ಆದಿವಾಸಿಗಳಿರುವ ಹಳ್ಳಿಗಳ ಸಂತೆ ಕೇವಲ ಕೊಡುಕೊಳಿಯ ಕೇಂದ್ರವಾಗಿರದೇ ಸಾಮಾಜಿಕ, ಸಾಂಸ್ಕೃತಿಕ, ಮನೋರಂಜನೆಯ ಸ್ಥಾನವೂ ಆಗಿರುತ್ತದೆ. ಬಹಳ ಕಾಲದಿಂದ ಭೇಟಿಯಾಗದ ಗೆಳತಿಯರು ಪರಸ್ಪರ ವಿಚಾರ ವಿಮರ್ಶೆ ಮಾಡುವರು. ಒಂದೇ ಹಳ್ಳಿಯವರು ವಿವಾಹವಾಗಿ ಬೇರೆ ಹಳ್ಳಿಗೆ ಹೋದವರು ತಮ್ಮ ಸುಖದುಃಖಚಿಂತನೆ ನಡೆಸುವರು. ಯಾವುದೋ ಕಂಡರಿಯದ ಕಾರಣಕ್ಕಾಗಿ ಒಂದಾಗುವ ಪ್ರೇಮಿಗಳು ಹಿಂದಿನ ಸಲಿಗೆಯಿಂದ ನಗೆಚಾಟಿಕೆ ಮಾಡುವರು. ವಿವಾಹಿತ ಮಗಳು ತಂದೆ-ತಾಯಿಗಳನ್ನು ಸಂತೆಯಲ್ಲಿ ಕಾಣುವಂತಾಗುತ್ತದೆ. ಸಂತೆಯಲ್ಲಿ ಭೇಟಿಯಾಗುವ ಪ್ರಣಯಿಗಳೂ ಇರುತ್ತಾರೆ. ಕುಡಿಮೀಸೆ ಒಡೆದ ತರುಣರು, ಇದ್ದುಬಿದ್ದ ಒಳ್ಳೆಯ ಬಟ್ಟೆಗಳನ್ನು ಧರಿಸಿ, ಸಂಭ್ರಮದಿಂದ ಓಡಾಡಿ ಎಷ್ಟೊಂದು ಕುಮಾರಿಯರು ತಮ್ಮನ್ನು ನೋಡಿರಬಹುದೆಂದು ಊಹೆಯಿಂದಲೇ ಸುಖಪಡುತ್ತಾರೆ. ರಸಿಕ-ಶಿಖಾಮಣಿಯೊಬ್ಬ ನೆರೆಯೂರಿನ ರಂಭೆಗೆ ಧೈರ್ಯದಿಂದ ಎರಡು ಹಿಡಿ ಚುರಮುರಿ ಕೊಡಲು ಹೋದಾಗ, ಅವಳು ಅರ್ಧ ನಾಚಿಕೆ, ಅರ್ಧ ಸೋಗಿನಿಂದ ಬೇಡಬೇಡವೆನ್ನುತ್ತ ಸ್ವೀಕರಿಸಿ, ಅಭಿಮಾನದಿಂದ ಗೆಳತಿಯರಿಗೆಲ್ಲ ಹಂಚಿ ತಾನೂ ತಿನ್ನುತ್ತಾಳೆ. ಹೆಂಗಳೆಯರು ಪುರುಷರೊಡನೆ ಸರಿಸಮಾನರಂತೆ ವರ್ತಿಸಿ ಮಾತನಾಡುವರು,

ಹಾಸ್ಯ, ವಿನೋದಮಾಡುವರು; ಆಗೀಗ ಮೈಮುಟ್ಟಿ ಮಾತನಾಡುವದೂ ತ್ಯಾಜ್ಯವಲ್ಲ. ಅವರ ಈ ರೂಢಿಯ ದುರುಪಯೋಗ ಮಾಡಿಕೊಂಡು ನಗರದವರು ಅವರ ಕೈಹಿಡಿದು, ಭುಜತಟ್ಟಿ ಸುಖಪಡುವವರೂ ಇದ್ದಾರೆ.

ಪರಿಚಯದ ಗಂಡು-ಹೆಣ್ಣು ಅಪರೂಪಕ್ಕೆ ಸಂಧಿಸಿದಾಗ, ಮೊದಲು ಹಸ್ತಲಾಘವ ಮಾಡುವವರಂತೆ ಕೈಜೋಡಿಸಿ ನಂತರ ನಮಿಸುವರು. ಸ್ತ್ರೀಯರಿಬ್ಬರು ಭೇಟಿಯಾದರೂ ಇದೇ ಕ್ರಮ. ಪುರೋಹಿತರು ಇಲ್ಲವೇ ಅವರ ಪತ್ನಿ ಕಂಡಾಗ, ಕಾಲುಗಳನ್ನು ಅದುಮಿ, ನಂತರ ಕಾಲಿಗೆರಗುವರು. ಪುರೋಹಿತರ ಪತ್ನಿ ಎಷ್ಟೇ ಚಿಕ್ಕವಳಿದ್ದರೂ, ಎಲ್ಲ ವಯಸ್ಸಿನ ಗಂಡಸರು-ಹೆಂಗಸರು ಅವಳ ಕಾಲುಹಿಡಿದು ನಮಿಸಿ ಗೌರವಿಸುವರು. ಅನಂತರ ಅವರೆಲ್ಲ ಸರಿಸಮಾನರಂತೆ ಒಂದೆಡೆಗೆ ಕುಳಿತು ಹರಟೆಯಲ್ಲಿ ಮೈಮರೆಯುವರು. ಈ ವರ್ಷದ ಮಳೆ ಹೇಗೆ, ಯಾರು ಯಾವ ಬೆಳೆ ಬಿತ್ತಿದ್ದಾರೆ, ಯಾವ ದನ ಕರುಹಾಕಿದೆ, ಹುಲಿ ಎಷ್ಟು ದನಕರುಗಳನ್ನು ದೋಚಿಕೊಂಡು ಹೋಯಿತು, ಭೂತದ ಪ್ರಕೋಪಕ್ಕೆ ಯಾರು ಬಲಿಯಾದರು, ಯಾರಿಗೆ ಪ್ರೇತ ಪೀಡಿಸುತ್ತಿದೆ, ಯಾರ ವಿವಾಹ ನಿಶ್ಚಯವಾಗಿದೆ, ವಧೂ ದಕ್ಷಿಣೆ ಎಷ್ಟೆಂದು ನಿಶ್ಚಯಮಾಡಲಾಗಿದೆ, ಯಾವಳು ವಿವಾಹ-ಬಾಹ್ಯ-ಸಂಬಂಧವನ್ನು ಇಟ್ಟುಕೊಂಡಿದ್ದಾಳೆ, ಅವಳನ್ನು ಪಂಚಾಯತಿಯವರು ಹೇಗೆ ಶಿಕ್ಷಿಸಬಹುದು, ಅಂಥವರ ಪಾಪದಿಂದಾಗಿ ಹಳ್ಳಿಗೆ ಬಂದ ಕೇಡು ಮೊದಲಾದವು ಅವರ ಚರ್ಚೆಯ ವಿಷಯ.

ಗಂಡಸರೆಲ್ಲ ವರ್ತುಲಾಕಾರದಲ್ಲಿ ಮರದಡಿಯಲ್ಲಿ ಕುಳಿತು, ಯಾವನೊಬ್ಬ ಚಿಲುಮೆಯನ್ನು ಹೊರಗೆಳೆದು ಅದನ್ನು ಹೊತ್ತಿಸಿ ಎಂಜಲಾಗದಂತೆ ಬಟ್ಟೆ ತುಣುಕೊಂದನ್ನು ಸುತ್ತಿ ಮೊದಲು ಪಟೇಲ, ಕೊತವಾಲರಿಗೆ ಕೊಡುತ್ತಾನೆ. ಮಾತಿನ ಲಹರಿ ಏರಿದಂತೆ ಚಿಲುಮೆ ಒಬ್ಬರಿಂದೊಬ್ಬರಿಗೆ ಹೋಗುತ್ತಿರುತ್ತದೆ. ಆಧುನಿಕರು ಒಂದೇ ಸಿಗರೇಟನ್ನು ಈ ರೀತಿ ಪಾಲುಗೊಂಡು ಸೇದಿದ್ದರೆ, ಹಣದ ಉಳಿತಾಯದೊಂದಿಗೆ ಕ್ಯಾನ್ಸರ್‌ದಂತಹ ರೋಗಬಾಧೆಯೂ ಕಡಿಮೆಯಾಗುತ್ತಿತ್ತೊ ಏನೋ! ಹಳ್ಳಿಗರು ಇಂಥ ಸಂದರ್ಭಗಳಲ್ಲಿ ಮಹತ್ವದ ನಿರ್ಣಯಗಳನ್ನು ಕೊಳ್ಳುವದು ಹೆಚ್ಚು. ಯಾವಯಾವ ಹಬ್ಬ, ಎಂದು ಎಂದು ಆಚರಿಸಬೇಕು, ಅದರ ಖರ್ಚನ್ನು ಹೇಗೆ ಹೊಂದಿಸಬೇಕು, ಕಿರಿಯರಿಗೆ ಹಿರಿಯರೆಂದರೆ ಅಸಡ್ಡೆಯೇಕೆ? ತರುಣರ ಸ್ವೇಚ್ಛಾಚಾರದಿಂದ ಹಳ್ಳಿ ಹೇಗೆ

ಹಾಳಾಗುತ್ತಿದೆ. ತಮ್ಮೂರು ದೇವರ ಪ್ರಕೋಪದಿಂದ ಹೇಗೆ ಜರ್ಜರಿತವಾಗುತ್ತಿದೆ, ಒಮ್ಮತವಿದ್ದ ಹಳ್ಳಿಗಳಲ್ಲಿ ಹೇಗೆ ದುರಾಸೆ, ಲೋಭಗಳು ಸೇರಿ ಬಣಗಳಾಗುತ್ತಿವೆ, ಆಗಾಗ ಸಣ್ಣ ಅಧಿಕಾರಿಗಳು ಬಂದು ಕಾಳು-ಕಡಿ-ಕಾಸುಗಳಿಗಾಗಿ ಕಿರುಕಳ ಹೇಗೆ ಕೊಡುತ್ತಿದ್ದಾರೆ ಮುಂತಾದವುಗಳ ಮೇಲೆ ಚಿಲುಮೆ ಆರುವ ತನಕ ಚರ್ಚೆ ನಡೆಯುತ್ತದೆ.

ಯುವಜನಾಂಗಕ್ಕೆ ಸಾವನ ಸಂತೆಯೆಂದರೆ ವಿಶೇಷ ಆಸಕ್ತಿ. ಯುವತಿಯರು ತಮ್ಮ ಕೇಶರಾಶಿಗೆ ಒಂದಿಷ್ಟು ಎಣ್ಣೆ ಸವರಿ ಪ್ರಿಯತಮನು ಮಾಡಿ ಇಲ್ಲವೇ ತಂದುಕೊಟ್ಟ ಬಾಚಣಿಗೆಯಿಂದ ಹಿಕ್ಕಿ, ಆಕರ್ಷಕ ಮುಡಿ ಕಟ್ಟಿ, ಇದ್ದ ಬಟ್ಟೆ ಸಾಬೂನ ಚೂರಿನಿಂದಲೇ ಮುಖ ತೊಳೆದು, ಜಾತ್ರೆಯಲ್ಲಿ ಕೊಂಡ ನಾಪಿತನ ಪೌಡರ ಒಂದಿಷ್ಟನ್ನು ಬಳಿದುಕೊಂಡು ಹಣೆಗೆ ಹೊಳೆಯುವ ಕುಂಕುಮ ಅಂಟಿಸಿಕೊಂಡು ತಲೆಯಿಂದ ಕಿವಿಯವರೆಗೆ ತೂಗುವ ಆಭರಣ ಇಟ್ಟುಕೊಳ್ಳುವರು. ಗೊಂಡರ ಆಹಾರದಲ್ಲಿ ಅಯೋಡಿನದ ಕೊರತೆ ಇರುವದರಿಂದ ಅವರ ಕೊರಳು "ಗಂಟತೂಳಾ" (Gout)ದಿಂದ ಉಬ್ಬಿರುವದು ತೀರ ಸಾಮಾನ್ಯ. ಅದಕ್ಕಾಗಿ ಮಂತ್ರ ಮಾಡಿಸಿ ಹಾಕಿದ ಗಾಯದ ಕಲೆ ಇದ್ದರೂ ಕೊರಳನ್ನು ಅಲಂಕರಿಸುವದು ಕಡಿಮೆಯಾಗಿಲ್ಲ. ಬಡವರು ಆಕರ್ಷಕವಾಗಿ ಪೋಣಿಸಿದ ಮಣಿ ಸರಗಳ ಪಟ್ಟಿ ಧರಿಸಿದರೆ, ಉಳ್ಳವರು ಬೆಳ್ಳಿಯ ಒಡವೆಗಳನ್ನು ಧರಿಸುವರು. ಒಬ್ಬಳಿಗೆ ಬಹಳಷ್ಟು ಆಭರಣಗಳಿರುವದು ಇಂದಿನ ದಿನಗಳಲ್ಲಿ ಸುಲಭ ಸಾಧ್ಯದ ಮಾತಲ್ಲವಾದ್ದರಿಂದ ಅಕ್ಕ-ತಂಗಿ, ಅತ್ತೆ-ನಾದಿನಿಯರ ಒಡವೆಗಳನ್ನೂ ಧರಿಸಿ ಸಂತೆಗೆ ಬಂದಿರುತ್ತಾರೆಂಬುದು ವಿದಿತ. ಮೂಗುತಿಯ ಹಲವಾರು ಬಗೆಗಳು, ಅರಗು-ಕಾಜಿನ ಬಳೆಗಳು ಬೆಳ್ಳಿಯ ಪಾಟ್ಲಿಗಳು, ವಂಕಿಗಳು, ಅಗಲವಾಗಿ ಹೊಳೆಯುವ ಸೊಂಟದ ಪಟ್ಟಿಗಳು ಬೇಲೂರ ಹಳೆಬೀಡಿನ ಶಿಲಾಬಾಲಿಕೆಯರ ಅಲಂಕಾರಗಳನ್ನು ನೆನಪಿಗೆ ತರುತ್ತವೆ. ನಡೆದಾಗೊಮ್ಮೆ ಕಾಲಿನ ಕಡಗ ಸರಪಳಿ, ಗೆಜ್ಜೆಗಳು ಸುತ್ತುಂಗಲಗಳು, ಬಳೆಗಳ ನಿನಾದದೊಂದಿಗೆ ಸೇರಿ ನೃತ್ಯನಾದವನ್ನೇ ಹೊರಡಿಸುತ್ತವೆ. ಆಭರಣಗಳೊಂದಿಗೆ ಹಚ್ಚೆಯ ಅಲಂಕಾರದ ಪೈಪೋಟಿ ಇದ್ದೇ ಇದೆ.

ಈಗ ತಾಯಿಯಕ್ಕೆ ಹೊಸ ಕಳೆ ಬಂದಂತಾಗಿತ್ತು. ತಾತ್ಪೂರ್ತಿಕ ಅಂಗಡಿಗಳು ನಾಯಿ-ಕೊಡೆಯಂತೆ ಎಲ್ಲೆಲ್ಲೂ ಎದ್ದಿದ್ದವು. ಹಬ್ಬಕ್ಕೆ ರಾಖೀ (ರಕ್ಷಾ

ಬಂಧನದ ನೂಲು)ಗಳನ್ನು ಮಾರುವ ಅಂಗಡಿಗಳಿಗಂತೂ ಬರವೇ ಇರಲಿಲ್ಲ. ಥಳಥಳ ಹೊಳೆಯುವ, ಮಿರಿಮಿರಿ ಮಿನುಗುವ ರಾಖೀಗಳಿಂದ ಸ್ವಲ್ಪ ಆರ್ದ್ರತೆ ತಾಗಿದರೆ ಬಣ್ಣ ಹೋಗುವ ಎಲ್ಲ ಪ್ರಕಾರಗಳೂ ಅಲ್ಲಿದ್ದವು. ಒಬ್ಬ ಸಿಪ್ಪೆ ಕತ್ತಗಳಿಂದ ಕೂಡಿದ ತೆಂಗಿನಕಾಯಿಗಳನ್ನು ಮಾರಿದರೆ, ಇನ್ನೊಬ್ಬ ನೀರು ಚಿಮುಕಿಸಿ ಭಾರಮಾಡಿದ ಮೆಣಸಿನ ರಾಶಿಯಿಟ್ಟಿದ್ದ. ಕಡಿಮೆ ಅಳತೆಯಿಂದ ಉಪ್ಪು, ಚಿಮಣೆಯಣ್ಣೆ ಮಾರುವವರೂ ಅಲ್ಲಿಗೆ ಬಂದಿದ್ದರು. ತಾಳ, ತಿಪರಿ, ಜಾಗಟೆ, ಸಣ್ಣ ಢೋಲು ಮಾರುವವರೂ ಉಪಸ್ಥಿತರಿದ್ದರು. ಈ ದಿನಗಳಲ್ಲೂ ಹೆಂಗಳೆಯರಿಗೆ ಹಚ್ಚೆಯ ಆಕರ್ಷಣೆ ಕಡಿಮೆಯಾಗಿಲ್ಲವೆಂದು ತೋರುತ್ತದೆ. ಅಂತೆಯೇ ಹಾಡು ಹೇಳುತ್ತ, ಸೂಜಿಯಿಂದ ಚುಚ್ಚಿಸಿಕೊಳ್ಳುತ್ತ ಹಚ್ಚೆ ಹಾಕುವವನಿಗೆ ಕಾಸು ಕೊಟ್ಟು ಶರೀರವನ್ನು ಅಲಂಕರಿಸಿಕೊಂಡಾಗಲೇ ಆನಂದ ಅವರಿಗೆ. ಸಂತೆಯಲ್ಲಿ ಹಜಾಮತಿಗೂ ಅವಕಾಶವಿದ್ದುದರಿಂದ ಗಂಡಸರೂ ಆನಂದದಲ್ಲಿರುತ್ತಾರೆ. ನಾಲ್ಕಾಣೆ ಕೊಟ್ಟು ಅಷ್ಟಾವಕ್ರ ಗೋಕರ್ಣ-ಹಜಾಮತಿ ಮಾಡಿಸಿಕೊಂಡರೆ ಇನ್ನೂ ನಾಲ್ಕು ತಿಂಗಳು ಈ ಸಮಸ್ಯೆ ಬಗೆಹರಿಯಿತೆಂಬ ನೆಮ್ಮದಿ ಅವರಿಗೆ.

ಆದಿವಾಸಿಗಳು ಸಂಗಡ ತಂದ ಸಾಮಾನುಗಳನ್ನು ಮಾರಿಯೇ ಬೇಕಾದ ಸರಕುಗಳನ್ನು ಮಾರಬೇಕಾದ್ದರಿಂದ ಅಲ್ಲಿ ನೆರೆದವರು ನಿರ್ಧರಿಸಿದ ಬೆಲೆಗೆ ಯಾವದೇ ಬೇರೆ ಮಾರ್ಗವಿಲ್ಲ. ಹದಿನಾರು-ಇಪ್ಪತ್ತು ರೂಪಾಯಿ ಬೆಲೆಬಾಳುವ ಹುಂಜವನ್ನು ಆರೆಂಟು ರೂಪಾಯಿಗಳಿಗೆ ಕೊಳ್ಳುತ್ತಾರೆ. ಅವರು ತಂದ ಸಾಸಿವೆಯಷ್ಟೆ ತೂಕದ ಉಪ್ಪನ್ನು ಕೊಟ್ಟುಕಳಿಸುತ್ತಾರೆ ಕಪಟಿಗಳು. ವ್ಯಾಪಾರಿಗಳು ಸೂಚಿಸಿದ ಬೆಲೆಗೆ ಕೊಡಲು ಮನಸ್ಸಿಲ್ಲದೇ ಎತ್ತು, ದನಕರು, ಹುಲ್ಲುಗಾಡಿಗಳನ್ನು ಜೋಲುಮುಖ ಹಾಕಿಕೊಂಡು ತಿರುಗಿ ಹೂಡಿಕೊಂಡು ಆದಿವಾಸಿಗಳು ಹೊರಟದ್ದನ್ನು ನೋಡಿದಾಗ ಕನಿಕರ ಬಾರದಿರದು. ಅದೇ, ವ್ಯಾಪಾರಿಗಳು ತಮ್ಮ ಸರಕಿನ ಮೇಲೆ ಲಾಭ, ಕಡಿಮೆ ತೂಕ ಕೊಟ್ಟು ಲಾಭ, ತಾವು ಖರೀದಿಸಿದ್ದರ ಮೇಲಿನ ಸುಲಭ ಲಾಭದ ಲೆಕ್ಕಾಚಾರ ಹಾಕಿ, ಬಸ್ಸನ್ನೊ ಲಾರಿಯನ್ನೋ ಹತ್ತಿ ತಮ್ಮ ಮನೆ ಸೇರುವರು.

ದೊಡ್ಡ ಊರು, ಪಟ್ಟಣಗಳು ತುಂಬ ದೂರವಿರುವ ಬಸ್ತರ ಜಿಲ್ಲೆಯಲ್ಲಿ ಸಂತೆಗಳು ಆದಿವಾಸಿಗಳಿಗೆ ಆಕರ್ಷಕವಾಗಿದ್ದಂತೆ ಅತ್ಯಾವಶ್ಯಕವಾಗಿವೆ. ಇಂಥ

ಸಂತೆಗೆ ಅವರು ೧೭ರಿಂದ ೨೦ ಮೈಲು ದೂರವನ್ನು ಸಹಜವಾಗಿ ನಡೆದು ಕೊಂಡು ಬರುತ್ತಾರೆ. ಈ ಸಂತೆಗಳಲ್ಲಿ ಕೋಳಿ-ಅಂಕಗಳು ತಪ್ಪದೇ ನಡೆಯು ವದರಿಂದ ಎಲ್ಲ ಕೆಲಸಗಳನ್ನು ಬದಿಗೊತ್ತಿ ಧಾವಿಸುತ್ತಾರೆ. ಯಕ್ಷಗಾನದ ವೇಷ-ಭೂಷಣಗಳನ್ನು ಧರಿಸಿ ಬಿಲ್ಲು-ಬಾಣಗಳೊಂದಿಗೆ ಸಂತೆಗೆ ಬರುವ ಜನರನ್ನು ನೆನೆಸಿಕೊಂಡರೇ ರೋಮಾಂಚವಾಗುವದಿಲ್ಲವೇ? ನಾರಾಯಣಪುರ ತಹಶೀಲದ ಸುತ್ತಮುತ್ತಲ ಹಳ್ಳಿಗಳಲ್ಲಿ ನಡೆಯುವ ಸಂತೆಗಳಲ್ಲಿ ಅಂತಹ ಅಲಂಕಾರವನ್ನು ಧರಿಸಿಕೊಂಡ ಯುವಕ-ಯುವತಿಯರು ನೋಡಲು ಸಿಗುತ್ತಾರೆ. ಅಬುಜ್ ಮಾರಿಗೆ ಹೆಬ್ಬಾಗಿಲಿನಂತೆ ಇರುವ ಸಂತೆಗೆ, ಅದೇ ದಿನ ಹೋಗಿ ಮುಟ್ಟಲಾರ ದಷ್ಟು ದೂರದಿಂದ ಜನರು ಬರುವದರಿಂದ ಮೊದಲ ದಿನವೇ ಬಂದು ಠಾಣ್ಯ ಹಾಕುತ್ತಾರೆ. ಈ ಸಂತೆಗಳನ್ನು ತೀರ ಹತ್ತಿರದಿಂದ ನೋಡಿದಾಗ, ನಮ್ಮ ದೇಶದ ಗ್ರಾಮಸಂಸ್ಕೃತಿ, ನಿಷಾದ-ಸಂಸ್ಕಾರಗಳು ಕೆಲಮಟ್ಟಿಗೆ ಈಗಲೂ ಉಳಿದು ಕೊಂಡಿವೆ ಎಂದು ಅನಿಸದೇ ಇರದು.

ಸಂಚತಾಳಾಸೋಂಡಿತಿ - 1A 0001
ಸಂತೆ ದೃಶ್ಯ - 001, 8 11

# ೪. ವಿದ್ಯಾವಂತರು

ಪರಿಚಯದ, ಹಿಂದೀ ಮಾತೃಭಾಷೆಯುಳ್ಳ ದಂಪತಿಗಳು ಬೆಂಗಳೂರಿಗೆ ವರ್ಗವಾಗಿ ಬಂದಾಗ ಕನ್ನಡ ಕಲಿಯುವ ಉದ್ದೇಶದಿಂದ ಅಚ್ಚ ಕನ್ನಡ ಮಾತ ನಾಡುವವಳನ್ನೇ ಮನೆಗೆಲಸಕ್ಕೆ ನೇಮಿಸಿಕೊಂಡರು. ಎರಡು ತಿಂಗಳ ನಂತರ ಕೆಲಸದ ಆ ಚುರುಕು-ಹುಡುಗಿ ಹಿಂದೀಯಲ್ಲಿ ಮಾತನಾಡಲು ಕಲಿತುಬಿಟ್ಟಳು. ಹೀಗಾಗಿ ಅವರ ಕನ್ನಡ ನಾಲ್ಕಾರು ಕನ್ನಡ ಶಬ್ದಗಳಿಗಷ್ಟೇ ಮೀಸಲಾಯಿತು. ಹಿಂದೀ ಮಾತನಾಡುವ ಬಹುಸಂಖ್ಯಾತರಿಗೆ ಇದೇ ಮಾತು ಅನ್ವಯಿಸುತ್ತದೆ. ಜನಸಾಮಾನ್ಯರ ಜೊತೆಗೆ ಕಾಲೇಜ-ಶಿಕ್ಷಣ ಪಡೆದವರಿಗೂ ಇಂಗ್ಲಿಷ್ ಭಾಷೆ ಯೆಂದರೆ ನಡುಕ ಬರುತ್ತದೆ. ಅಂತೆಯೇ ಇಂಗ್ಲಿಷ್ ಚನ್ನಾಗಿ ಬಲ್ಲ ದಕ್ಷಿಣ

ದವರಿಗೆ ಮಧ್ಯಪ್ರದೇಶದಲ್ಲಿ ಗೌರವವಿದೆ. ಇದರ ಲಾಭ ಪಡೆದು ಕೇರಳದವರು, ತಮಿಳುನಾಡಿನವರು, ಕರ್ನಾಟಕ ಮತ್ತು ಆಂಧ್ರದವರು ನೌಕರಿಗಾಗಿ ಇಲ್ಲಿಗೆ ಬಂದು ಒಳ್ಳೆ ಹುದ್ದೆಗಳಲ್ಲಿದ್ದಾರೆ. ತಮ್ಮ ಬುದ್ಧಿ ಚಾತುರ್ಯವನ್ನು ಅತಿಯಾಗಿ ಬಳಸಿ, ಅಲ್ಲಿಯವರಿಗೆ ಮೋಸಮಾಡಿ ಕೆಟ್ಟ ಹೆಸರು ಗಳಿಸಿದವರೂ ಇದ್ದಾರೆ. ಆ ಮಾತೇ ಬೇರೆ!

ಬಿಹಾರದಲ್ಲಿ ವಿದ್ಯಾರ್ಥಿಗಳು ಪರೀಕ್ಷೆಗಳಲ್ಲಿ ವಾಮಮಾರ್ಗದಿಂದ ಪ್ರಶ್ನೆಗಳಿಗೆ ಉತ್ತರಿಸುವದು, ಮೇಲ್ವಿಚಾರಕರು ಅವರಿಗೆ ಅಡೆ-ತಡೆ ತಂದರೆ, ಪಿಸ್ತೂಲಿನಿಂದ ಬೆದರಿಸುವದು, ಹಿಂಸಾಕ್ರಮ ಕೈಕೊಳ್ಳುವದು ಆಗಾಗ ಕೇಳಿ ಬರುತ್ತದೆ. ಪರೀಕ್ಷೆಗಳನ್ನೇ ಇಡದೆ ಪದವೀದಾನ ಮಾಡಬೇಕೆನ್ನುವ ಮಹತ್ವಾಕಾಂಕ್ಷಿಗಳೂ ಇದ್ದಾರೆ. ಓದು-ಬರೆಹದ ಕ್ರಮದಲ್ಲಿ ಮಧ್ಯಪ್ರದೇಶದವರು ಬಿಹಾರದವರೊಡನೆ ಸ್ಪರ್ಧಿಸಿದರೂ, ಹಿಂಸಾಮಾರ್ಗವನ್ನು ಅನುಸರಿಸುವದಿಲ್ಲ. ನಮ್ಮಲ್ಲಿ ದೊಡ್ಡ ನಗರಗಳ ಧನಿಕರು ಮಕ್ಕಳನ್ನು ಇಂಗ್ಲಿಷ್ ಮಾಧ್ಯಮ-ಶಾಲೆಗೆ ಕಳಿಸಿಕೊಡುವಂತೆ ಅಲ್ಲಿಯೂ ಕಳಿಸುತ್ತಾರೆ. ಆದರೆ ಅಂತರವಿಷ್ಟೆ, ಇಲ್ಲಿ ಹಿಂದೀ, ಕನ್ನಡಗಳನ್ನು ಇಂಗ್ಲಿಷ್ ಮಾಧ್ಯಮದಲ್ಲಿ ಕಲಿಸಿದರೆ, ಅಲ್ಲಿ ಇಂಗ್ಲಿಷನ್ನೂ ಹಿಂದೀಯಲ್ಲಿ ಕಲಿಸುತ್ತಾರೆ! ಸಮವಸ್ತ್ರ ಧರಿಸಿ ಕಾರು, ಸ್ಕೂಟರ್, ರಿಕ್ಷಾ-ಸಾಯಕಲ್‌ಗಳ ಮೇಲೆ ಸ್ಕೂಲಿಗೆ ಹೋಗುವ ಧನಿಕರ ಮಕ್ಕಳನ್ನು ಕಂಡು ಸಮಾಜವಾದದ ದೇಶದಲ್ಲಿ ಈ ಅಸಮಾನತೆಗಾಗಿ ಕರಬುವ ಪಾಲಕರೂ ಇದ್ದಾರೆ.

ಗೆಳೆಯರಿಬ್ಬರ ಸಂಭಾಷಣೆ ಅಲ್ಲಿಯ ಶಿಕ್ಷಣದ ಮಟ್ಟದ ಒಳ್ಳೆಯ ಪರಿಚಯ ಕೊಡುತ್ತದೆ. ಒಬ್ಬ ಸ್ಥಳೀಯನಾದರೆ, ಇನ್ನೊಬ್ಬಾತ ಓದಲೆಂದೇ ನೆರೆಪ್ರಾಂತದಿಂದ ಬಂದವ. "ನಮ್ಮ ರಾಜ್ಯದಲ್ಲಿ ಹತ್ತನೇ ಕ್ಲಾಸಿನಲ್ಲಿ ಎರಡು ಸಲ ಅನುತ್ತೀರ್ಣನಾಗಿದ್ದರಿಂದ, ನಮ್ಮವರೆಲ್ಲ ನನ್ನನ್ನು ನಾಲಾಯಖರ ಗುಂಪಿಗೆ ಸೇರಿಸಿಬಿಟ್ಟಿದ್ದರು. ಸೋಲನ್ನು ನಾನು ಅಷ್ಟು ಸುಲಭದಲ್ಲಿ ಒಪ್ಪಿಕೊಳ್ಳುವವನಲ್ಲದ್ದರಿಂದ ನಾನು ಇಲ್ಲಿಯ ನೆಂಟರೊಬ್ಬರ ಮನೆಯಲ್ಲಿ ಇದ್ದು ವಿದ್ಯಾಭ್ಯಾಸ ಮುಂದುವರಿಸಿದೆ. ಅಲ್ಲಿಯ ಶಿಕ್ಷಣ, ಇಲ್ಲಿಯ ಪರೀಕ್ಷೆಯ ಫಲವಾಗಿ ಪ್ರಥಮಬಾರಿಗೇ ಮೊದಲ ವರ್ಗದಲ್ಲಿ ಪಾಸಾದೆ. ನಂತರದ ವರ್ಷಗಳಲ್ಲಿಯೂ ಮೊದಲವರ್ಗ ತಪ್ಪಿದರೂ ಎರಡನೆಯ ವರ್ಗಕ್ಕೆ ಮೋಸವಿರಲಿಲ್ಲ. ಪದವೀ ಕ್ಲಾಸಿನಲ್ಲೂ ದ್ವಿತೀಯ ವರ್ಗ ಸಿಕ್ಕಿತು. ನನ್ನ ಹೆಚ್ಚಿನ

ಸಹಪಾಠಿಗಳು ಹಿಂದೀಯಲ್ಲಿ ತಮ್ಮ ಸ್ನಾತಕೋತ್ತರ ವಿದ್ಯಾಭ್ಯಾಸ ಮುಂದು ವರಿಸಿದ್ದರಿಂದ ಇಂಗ್ಲಿಷ್ ತೆಗೆದುಕೊಳ್ಳಲು ಧೈರ್ಯಮಾಡಿದ ನನಗೆ ಶಿಷ್ಯ-ವೇತನ ಸುಲಭವಾಗಿ ದೊರೆಯಿತು ! ಈಗ ನನ್ನ ವರ್ಗದಲ್ಲಿ ಕೇವಲ ನಾಲ್ಕು ವಿದ್ಯಾರ್ಥಿಗಳಿದ್ದರಿಂದ ರ್‍ಯಾಂಕ್ ಕಟ್ಟಿಟ್ಟದ್ದೇ. ಇಂಗ್ಲಿಷ್ ಪ್ರಾಧ್ಯಾಪಕರ ಕೊರತೆ ತುಂಬ ಇರುವದರಿಂದ ಪರೀಕ್ಷೆ ಪಾಸಾದೊಡನೆ ಒಂದಿಲ್ಲೊಂದು ಕಾಲೇಜಿನಲ್ಲಿ ನೌಕರಿ ಸಿಕ್ಕೇ ಸಿಗುತ್ತದೆ. ಪಾಲಕರು, ನಾನು ಶ್ರಮವಹಿಸಿ ಓದಿ ಮುಂದೆ ಬಂದಿದ್ದೇನೆಂದು ತಿಳಿದರೂ ಇಲ್ಲಿಯ ಸ್ಪರ್ಧಾಹೀನ ಶಿಕ್ಷಣವೇ ನನ್ನ ಯಶಸ್ಸಿಗೆ ಕಾರಣ" ಎಂದು ಮಾತು ಮುಗಿಸಿದ. ಅದಕ್ಕೆ ಅವನ ಗೆಳೆಯ, "ನೀನು ಹೇಳಿದ್ದು ನಿಜವಾದರೆ ನನಗೇಕೆ ಕ್ಲಾಸು ತೆಗೆದುಕೊಳ್ಳಲು ಆಗಲಿಲ್ಲ?" ಎಂದಾಗ, "ನೀನು ಮೊದಲಿನಿಂದಲೂ ಇಲ್ಲಿಯೇ ಓದುತ್ತಿರುವಿ. ಅದ್ದರಿಂದ ಸ್ಪರ್ಧೆಗೆ ಬೇಕಾದ ತಳಹದಿಯೇ ಇಲ್ಲವಾಗಿದೆ. ಇಲ್ಲಿ ಪಾಸಾದರೂ ಆಗುತ್ತಿರುವಿ. ಅದೇ ಬೇರೆ ವಿಶ್ವವಿದ್ಯಾಲಯಗಳಿಗೆ ಹೋದರೆ ಅದೂ ಅಸಾಧ್ಯ. ಈ ಕಾರಣ ಕ್ಕಾಗಿಯೇ ಈ ರಾಜ್ಯದವರು ರಾಷ್ಟ್ರೀಯ ಮಟ್ಟದ ಸಾರ್ವಜನಿಕ ಸ್ಪರ್ಧೆಯ ಪರೀಕ್ಷೆಗಳಲ್ಲಿ ಆಯ್ಕೆಯಾಗುವದು ತುಂಬ ಕಡಿಮೆ" ಎಂದು ಉತ್ತರಿಸಿದನು.

ಶಾಲೆ-ಕಾಲೇಜುಗಳಲ್ಲಿ ಒಂದು ಮಟ್ಟ ಕಾಯ್ದುಕೊಂಡು ಹೋಗಲು ಯಾವ ಹೆಚ್ಚಿನ ಪ್ರಯತ್ನವನ್ನೂ ಮಾಡುವದಿಲ್ಲ. ೧೯೭೩ನೇ ಇಸ್ವಿಯ ಅಲ್ಲಿಯ S.S.L.C. ಪರೀಕ್ಷೆಯಲ್ಲಿ ಕಾಪಿ ಹೊಡೆಯದಂತೆ ಕ್ರಮ ಕೈಕೊಂಡದ್ದ ರಿಂದ ಶೇಕಡಾ ಎಂಬತ್ತು ವಿದ್ಯಾರ್ಥಿಗಳು ಪಾಸಾಗಲಿಲ್ಲ, ಇಲ್ಲಿಯ ರೂಢಿಯಂತೆ! ವಾರ್ಷಿಕೋತ್ಸವಗಳಲ್ಲಿ, ವಿವಿಧ ವಿನೋದಾವಳಿಗಳಲ್ಲಿ ಮುಂಬಯಿ ಫಿಲ್ಮ ಜಗತ್ತಿನ ಹಾಡು, ನೃತ್ಯ, ದೃಶ್ಯಗಳೇ ಅಧಿಕಪ್ರಮಾಣದಲ್ಲಿ ಇರುತ್ತವೆ. ರಾಜ್ಯದ ಮಹಾಪುರುಷರಾದ ತಾನಸೇನ, ಮತ್ತು ಕಾಳಿದಾಸರ ಸಪ್ತಾಹಗಳಲ್ಲಿ ಮಾತ್ರ ರಾಜ್ಯದವರೊಂದಿಗೆ ಹೊರಗಿನವರನ್ನೂ ಆಮಂತ್ರಿಸಿ, ಸಂಗೀತ, ನಾಟಕಗಳ ಉಜ್ವಲ ಪರಂಪರೆಯ ಪುನರುಜ್ಜೀವನ ಮಾಡುವ ಯತ್ನ ಕಂಡು ಬರುತ್ತದೆ. ಆದರೆ ಈ ಚಟುವಟಿಕೆಗಳಲ್ಲಿ ಜನಸಾಮಾನ್ಯರು ಆಸಕ್ತಿ ವಹಿಸು ವದು ತೀರ ಕಡಿಮೆ. ಕವಿಸಮ್ಮೇಲನಗಳು ಮಾತ್ರ ತುಂಬ ಜನಪ್ರಿಯವಾಗಿರು ವದರಿಂದ ಮೇಲಿಂದ ಮೇಲೆ ಸಾರ್ವಜನಿಕ ಸ್ಥಳಗಳಲ್ಲಿ ಅವನ್ನು ಏರ್ಪಡಿಸ ಲಾಗುತ್ತದೆ. ಮಧ್ಯರಾತ್ರಿ ಮೀರಿದರೂ ಜನ ಕುಳಿತು ಶಾಂತರೀತಿಯಿಂದ

ಕೇಳಿ ಆನಂದಿಸುತ್ತಾರೆ. 'ಕವಿತೆ'ಗಳು ಶಾಯರಿಯ ಅಗ್ಗದ ರೂಪದಲ್ಲಿರುವದೇ ಹೆಚ್ಚು. ದೈನಂದಿನ ಘಟನೆಗಳನ್ನೇ ವಿನೋದಪೂರ್ಣವಾಗಿ ರಚಿಸಿ, ಸಾಭಿನಯವಾಗಿ ಹಾಡುವದರಿಂದ ಜನಸ್ತೋಮ ನಗೆಗಡಲಲ್ಲಿ ತೇಲುತ್ತಿರುತ್ತದೆ. ಗಂಡು ಹೆಣ್ಣಿನ ಪ್ರೀತಿ, ವಿರಸ, ವಿರಹಗಳೇ ಪ್ರಧಾನವಸ್ತುವಾಗಿರುತ್ತದೆ ಈ ಶಾಯರಿಗೆ.

ಅವನಿಗಾಗಿ ಕರೆದ ಕಂಬನಿಯಿಂದ ಬಾಲ್ದಿ ತುಂಬಿತು

ಆ ನಿರ್ಲಜ್ಜನೋ ಅದೇ ನೀರಿನಿಂದ ಕೈಕಾಲು ತೊಳೆದುಕೊಂಡ !

ಶಾಲೆ-ಕಾಲೇಜಗಳಲ್ಲಿಯೂ ಇಂತಹ ಸ್ಪರ್ಧೆಗಳು ನಡೆಯುವದುಂಟು. ಆದರೆ ಅವುಗಳಲ್ಲಿ ಸ್ವರಚನೆಗಿಂತ ಕದ್ದುತಂದವೇ ಬಹುಸಂಖ್ಯೆಯಲ್ಲಿ ಇರುತ್ತವೆ. ರಾಜ್ಯದಲ್ಲಿ ಉರ್ದು ಮಾತನಾಡುವವರೂ ಸಾಕಷ್ಟು ಜನರಿರುವದರಿಂದ ಆಗಾಗ 'ಕವಾಲಿ ರಾತ್'ಗಳು ನಡೆಯುತ್ತವೆ. ರಾತ್ರಿಯೆಲ್ಲ ನಡೆಯುವ ಈ ಕಾರ್ಯಕ್ರಮಕ್ಕೆ ಧ್ವನಿವರ್ಧಕಗಳನ್ನು ಹಚ್ಚುವದರಿಂದ ಮನೆಗಳಲ್ಲಿ ಮಲಗಿದವರೂ ಮರುದಿನ ತಾವು ಕವಾಲಿ ಕೇಳಲು ಹೋದ ಭ್ರಾಂತಿಯಲ್ಲಿರುತ್ತಾರೆ.

ಬೇರೆಲ್ಲೂ ನೌಕರಿ ಸಿಗದಾಗ, ಸರಕಾರಿ ನೌಕರಿಯನ್ನು ಮಾಡುವ ಹಂಬಲವುಳ್ಳ ವಿದ್ಯಾವಂತರು ಆದಿವಾಸಿಗಳಿಗೆ ಮೀಸಲಾದ ಶಾಲೆಗಳಲ್ಲಿ ಶಿಕ್ಷಕರಾಗುತ್ತಾರೆ. ಆದಿವಾಸಿಗಳಿಗೆ ಅಭ್ಯುದಯದ ಹೆಸರಿನಲ್ಲಿ ಸರಕಾರ, ಕೋಟಿಗಟ್ಟಲೆ ಹಣ ಖರ್ಚುಮಾಡುವದರಿಂದ ಅದರ ಲಾಭ ಇಂಥವರಿಗೂ ಆಗುತ್ತದೆ. ಆದರೆ ಆದಿವಾಸಿಗಳ ಬಗ್ಗೆ ಯಾವದೇ ಅನುಕಂಪ, ಆದರ, ಅವರಿಗೆ ಇರದ್ದರಿಂದ ಇವರ ಸಾಹಸ ಅಸಮಾಧಾನದಲ್ಲಿ, ಅಸಂತೋಷದಲ್ಲಿ ಕೊನೆಗೊಳ್ಳುತ್ತದೆ. ಪಟ್ಟಣಗಳಲ್ಲಿ ಬೆಳೆದ ವಿದ್ಯಾವಂತರಿಗೆ ಸೌಕರ್ಯಗಳಿಲ್ಲದ ಹಳ್ಳಿಯ ವಾತಾವರಣ ಬಿಕೋ ಅನಿಸುತ್ತಿರುತ್ತದೆ. ತಮ್ಮ ಸಂಸಾರವನ್ನು ದೊಡ್ಡ ಪಟ್ಟಣಗಳಲ್ಲಿಟ್ಟು ದಿನಂಪ್ರತಿ ಪ್ರವಾಸಮಾಡುವರು. ಇಲ್ಲವೇ ವಾರಾಂತ್ಯಗಳಲ್ಲಿ ಹೋಗಿಬರುವರು. ಹೀಗಾಗಿ ತಮ್ಮ ವೃತ್ತಿಯಲ್ಲಿ ಯಾವದೇ ಆಸಕ್ತಿ ತಳೆಯುವದಿಲ್ಲ. ಆದಿವಾಸಿಗಳ ಗೊಂಡಿ, ಹಲ್ಬೀ ಭಾಷೆಗಳು ಇವರಿಗೆ ಬಾರವು. ಸಾಲದ್ದಕ್ಕೆ ಆದಿವಾಸಿಗಳಿಗೆ ಹಿಂದೀ ಬಾರದೆಂದು ಗೊಣಗುತ್ತಲೇ ಇರುವರು. ಗಿರಿಜನರಿಗೆ ದೈನಂದಿನ ಜೀವನವೇ ಒಂದು ಶಿಕ್ಷಣವಾದ್ದರಿಂದ ಅಕ್ಷರಾಭ್ಯಾಸದಲ್ಲಿ ಅವರು ಏಕೆ ಆಸಕ್ತಿ ವಹಿಸಿಯಾರು? ಇಂತಹ ಆದಿವಾಸಿ-ಶಾಲೆಗಳಲ್ಲಿ ವಿದ್ಯಾರ್ಥಿಗಳಿಗಿಂತ ಶಿಕ್ಷಕರ ಸಂಖ್ಯೆಯೇ ಹೆಚ್ಚಾಗಿದ್ದರೆ ಆಶ್ಚರ್ಯವಿಲ್ಲ.

ಆದ್ದರಿಂದ ವಿದ್ಯಾರ್ಥಿಗಳನ್ನು ಮೇಲಿಂದ ಮೇಲೆ ಎಳೆದು ತರುವದಕ್ಕಾಗಿ ಆದಿವಾಸಿಗಳ ಕೇರಿಗೆ ದಾಳಿಯಿಡುತ್ತಾರೆ. ಪಾಲಕರ ಸಭೆ ಕರೆಯುತ್ತಾರೆ. ಅಕ್ಷರಾಭ್ಯಾಸವೆಂದರೆ ಮಕ್ಕಳಿಗೊಂದು ಶಿಕ್ಷೆ ಎಂದು ಭಾವಿಸಿದ ಪಾಲಕರು, ಮಕ್ಕಳು ದಿನಂಪ್ರತಿ ಏಕೆ ಶಾಲೆಗೆ ಹೋಗಬೇಕು? ವಾರಕ್ಕೊಮ್ಮೆ ಬಿಡುವಾದಾಗ ಕಳಿಸಿದರೆ ಆಗದೇ ಎಂದು ಸವಾಲು ಹಾಕಿದಾಗ ಈ ಮೂರ್ಖರ ಬಗ್ಗೆ ವಿದ್ಯಾವಂತರು ರೇಗುತ್ತಾರೆ. ಆದರೆ ವಿದಾಭ್ಯಾಸದಲ್ಲಿ ಪ್ರಗತಿ ತೋರಿಸಿದ ಹೊರತು ತಮಗೆ ಮೋಕ್ಷವಿಲ್ಲವೆಂದು ಚೆನ್ನಾಗಿ ಅರಿತಿದ್ದರಿಂದ ಕಾಲ್ಪನಿಕ ಪ್ರಗತಿಯ ವರದಿಯನ್ನು ಸರಕಾರಕ್ಕೆ ಒಪ್ಪಿಸುತ್ತಲೇ ಇರುತ್ತಾರೆ. ವರದಿಯಲ್ಲಿದ್ದಕ್ಕಿಂತ ನಿಜವಾದ ಸಂಗತಿ ಬೇರೆಯೇ ಇರುತ್ತದೆಂದು ಹೇಳಬೇಕೆಂದಿಲ್ಲ.

ಹೆಚ್ಚಿನ ಹಿಂದೀಸಾಹಿತ್ಯ, ನೆರೆರಾಜ್ಯವಾದ ಉತ್ತರ-ಪ್ರದೇಶ ಮತ್ತು ದಿಲ್ಲಿಗಳಿಂದಲೇ ಮಧ್ಯಪ್ರದೇಶಕ್ಕೆ ಬರುತ್ತದೆ. ಖ್ಯಾತ ಲೇಖಕರ ಕೃತಿಗಳೊಂದಿಗೆ ಅಗ್ಗದ ಪುಸ್ತಕ ಅಗ್ಗದ ಸಾಹಿತ್ಯ-ರಚನೆಗಳು ವಿಪುಲವಾಗಿ ಮಾರಾಟವಾಗುತ್ತವೆ. ಧಾರ್ಮಿಕ-ಪುಸ್ತಕಗಳೊಂದಿಗೆ ಕಾಮಪ್ರಚೋದಕ ಪುಸ್ತಕಗಳನ್ನೂ ರಸ್ತೆಯ ಅಂಚಿನಲ್ಲಿ ಮಾರಾಟಕ್ಕೆ ಇಟ್ಟಿರುತ್ತಾರೆ. ಪತ್ತೆದಾರಿ-ಕಾದಂಬರಿಗಳು ಲೆಕ್ಕವಿಲ್ಲದಷ್ಟು ಇರುತ್ತವೆ. ರಾಜ್ಯದಲ್ಲಿಯೂ ಅನೇಕ ಸಾಹಿತಿಗಳು ಕೃತಿ ರಚನೆಯಲ್ಲಿ ತೊಡಗಿರುತ್ತಾರೆ. ಆದರೆ ಅವರ ಕೃತಿಗಳು ಸ್ಥಳೀಯ ಸಮಸ್ಯೆಗಳನ್ನು ಕುರಿತು ಇರುವದರಿಂದ, ಮತ್ತು ಶ್ರೇಷ್ಠಮಟ್ಟದವು ಇರದ್ದರಿಂದ ರಾಷ್ಟ್ರೀಯ ಮಟ್ಟದಲ್ಲಿ ಅವುಗಳ ಹೆಸರು ಕೇಳಬರುವದಿಲ್ಲ. ಕರ್ನಾಟಕದಂತೆ, ಬೇರೆಬೇರೆ ವೃತ್ತಿಗಳಲ್ಲಿದ್ದು ಸಾಹಿತ್ಯನಿರ್ಮಾಣದಲ್ಲಿ ತೊಡಗಿದವರೇ ಹೆಚ್ಚು. ಇತಿಹಾಸಕಾರ ಶ್ರೀ. ಶುಕ್ಲಾರು ವಕೀಲರಾಗಿದ್ದರೆ, ಆಶುಕವಿಯೆಂದು ಹೆಸರು ಪಡೆದ ರಾಮಕುಮಾರಶರ್ಮರು ಹೊಟೇಲ ಒಂದನ್ನು ನಡೆಸುತ್ತಿದ್ದಾರೆ. 'ವಿರಂಚಿ' ಎಂಬ ಹೆಸರಿನಿಂದ ಕವಿತೆಗಳನ್ನು ಬರೆಯುವ ಸಕ್ಸೇನಾರು ಪೋಲೀಸ ಖಾತೆಯಲ್ಲಿ ಕೆಲಸಮಾಡುತ್ತಾರೆ. 'ಜ್ವಾಲಾ' ಎಂಬ ಕಾವ್ಯನಾಮದಿಂದ ಬರೆವ ರವಿವರ್ಮರು ರೇಡಿಯೋ ಮಾಸ್ಕೊದಿಂದ ಹಲವಾರು ಕವಿತೆಗಳನ್ನು ಬಿತ್ತರಿಸಿದ್ದಾರೆ. ಅಮೇರಿಕೆಯ ದ್ವಿಶತಾಬ್ದಿಸಮಾರಂಭಕ್ಕೂ ಆಮಂತ್ರಿತರಾಗಿದ್ದರು. ಮಾಂಡ್ಲಾದಲ್ಲಿರುವ ಶ್ರೀ. ಬಿ.ಎಲ್. ಅಗರವಾಲರು ಗೊಂಡರ ರಾಜ್ಯದ ಬಗ್ಗೆ "ಗಡ ಮಾಂಡ್ಲಾಕೇ ರಾಜಾ" ಎಂಬ ಕೃತಿಯನ್ನು ಹೊರಗೆ ತಂದಿದ್ದಾರೆ.

ಹಿಂದೀಯ ಪ್ರಸಿದ್ಧ ಕವಿ ಮತ್ತು ಲೇಖಕ ಶಿವಮಂಗಲಸಿಂಹ 'ಸುಮನ'ರು ಉಜ್ಜಯನಿ ವಿಶ್ವವಿದ್ಯಾಲಯದ ಉಪಕುಲಪತಿಗಳು. ಬಸ್ತರದ ಮಹರುನ್ನಿಸಾ ಪರ್ವೇಝ್ ಉರ್ದು ಮತ್ತು ಹಿಂದಿಯಲ್ಲಿ ಸಣ್ಣಕಥೆಗಳ ಒಳ್ಳೆಯ ಲೇಖಕಿ. ಅನೇಕ ಲೇಖಕರಿಗೆ ಆದಿವಾಸಿಜೀವನ ಕಥಾವಸ್ತುವಾಗಿ ಪರಿಣಮಿಸಿದ್ದುಂಟು. ಭೋಸಲೆ ಮನೆತನ, ನರ್ಮದಾ-ತಾಪಿಗಳಂತಹ ಪುಣ್ಯನದಿಗಳು, ಹೋಳಕರ, ಸಿಂಧಿಯಾ ಮತ್ತಿತರ ಸಣ್ಣಪುಟ್ಟ ಅರಸು-ಮನೆತನಗಳ ಕಥೆಗಳು, ಬಾಝು ಬಹಾದುರ್-ರೂಪಮತಿಯರ ದಿವ್ಯಪ್ರೇಮದ ಕಥೆ, ಕಾಳಿದಾಸನ ಕೃತಿಗಳು, ಓಂಕಾರೇಶ್ವರ, ಖಜೂರಾಹೋ ದೇವಾಲಯಗಳು, ಸಾಕಷ್ಟು ಲೇಖಕರಿಗೆ ಸ್ಫೂರ್ತಿಯ ಜೊತೆಗೆ ವಸ್ತುವನ್ನೂ ಒದಗಿಸಿವೆ. ದೇಶದ ಇತರ ಪ್ರಾಂತಗಳಂತೆ ಇಲ್ಲಿಯೂ ನವ್ಯಕವಿಗಳು ತಲೆಯೆತ್ತಿದ್ದಾರೆ. ಪ್ರೇಮ, ಕಾಮಗಳೇ ಮುಖ್ಯವಿಷಯವಾಗಿದ್ದರೂ, ಆಗೊಮ್ಮೆ ಈಗೊಮ್ಮೆ ಪ್ರತಿಭೆಯ ಸೆಳಕು ಅವರ ಕವನಗಳಲ್ಲಿ ಕಾಣಸಿಗುವದುಂಟು.

ಹೆಸರುವಾಸಿ ಹಿಂದೀ-ಕೃತಿಗಳಂತೆ ಇಂಗ್ಲಿಷ-ರಚನೆಗಳನ್ನು ಬರೆದವರಲ್ಲಿ ಹೊರಗಿನವರೇ ಹೆಚ್ಚು. ಈ ರಾಜ್ಯದ ಆದಿವಾಸಿಗಳ ಬಗ್ಗೆ ಹಲವಾರು ಕೃತಿಗಳನ್ನು ನಿರ್ಮಿಸಿ ರಾಜ್ಯ, ದೇಶ ಮತ್ತು ಜಾಗತಿಕ ಲಕ್ಷ್ಯವನ್ನು ಅವರತ್ತ ತಮ್ಮತ್ತ ಸೆಳೆದ ಶ್ರೇಯಸ್ಸು ಇಂಗ್ಲಂಡಿನ ವೆರಿಯರ್ ಎಲ್ವಿನ್‌ರಿಗೆ ಸೇರುತ್ತದೆ. ಮೂಲತಃ ಅವರು ಇಂಗ್ಲಿಷ್ ಕವಿಗಳು, ಪ್ರಾಧ್ಯಾಪಕರು. ನಂತರ ಮಿಶನರಿಗಳಾಗಿ ಭಾರತಕ್ಕೆ ಬಂದರೂ ಆದಿವಾಸಿಗಳ ಸಮಸ್ಯೆಗಳ ಅಭ್ಯಾಸಕ್ಕಾಗಿ ಜೀವನವನ್ನು ಮುಡುಪಿಟ್ಟರು. ಮಾಂಡ್ಲಾ ಜಿಲ್ಲೆಯ ಗೊಂಡ ಮತ್ತು ಭೂಮಿಯ ಬಗ್ಗೆ ಫಾದರ ಸ್ಟಿಫನ್ ಫುಚ್‌ರು ಗ್ರಂಥ ರಚಿಸಿದ್ದಾರೆ. ಬೇತುಲ್ ಆಸ್ಪತ್ರೆಯೊಂದರ ಮುಖ್ಯ ಅಧಿಕಾರಿ ಡಾ। ಕ್ಲಿಮೆಂಟ್ ಮೌನಸರು ಗೊಂಡಿ ಭಾಷೆಯನ್ನು ಆಳವಾಗಿ ಅಭ್ಯಸಿಸಿ ಅದರ ಸಂಪೂರ್ಣ ವ್ಯಾಕರಣ ಬರೆದಿದ್ದಾರೆ. ರಾಜಗೊಂಡರ ಬಗ್ಗೆ ಕ್ರಿಸ್ಟೊಫರ್ ಹೈಮೆಂಡರರು ಬರೆದಂತೆ, ಕೋಲ ಆದಿವಾಸಿಗಳ ಬಗ್ಗೆ ಗ್ರಿಫಿತ್‌ರು ಬರೆದಿದ್ದಾರೆ. ಅನೇಕ ಭಾರತೀಯರೂ ಆದಿವಾಸಿಗಳ ಬಗ್ಗೆ ಹಲವಾರು ಕೃತಿಗಳನ್ನು ನಿರ್ಮಿಸಿದ್ದಾರೆ. ಆದಿವಾಸಿಗಳ ಹಾಡುಗಳನ್ನು ಸಂಗ್ರಹಿಸಿದ ಶ್ರೇಯಸ್ಸು ಶಾಮರಾವ್ ಹಿವಳೆ ಅವರಿಗೆ ಸಲ್ಲಬೇಕು. ಓರಾವೋ, ಖಾರಿಯಾ, ಬಿರ್ಹೋರ ಆದಿವಾಸಿಗಳ ಬಗ್ಗೆ ಶರಚ್ಚಂದ್ರ ಬರೆದಿದ್ದಾರೆ.

ಕೇದಾರನಾಥ್, ಪಿ.ಸಿ. ಅಗರವಾಲ್, ಡಿ. ಹಾಚ್ರಾ, ಟಿ.ಬಿ. ನಾಯಕ್, ಮೀರಾ ಮುಕರ್ಜಿ ಇವರೆಲ್ಲ ಆದಿವಾಸಿ ಜೀವನದ ವಿವಿಧ ಮುಖಗಳನ್ನು ಚಿತ್ರಿಸಿದ್ದಾರೆ. ಬಸ್ತರದ ರಾಜ, ಪವೀರಚಂದ್ರ ಭಾಂಜದೇವರ ದುರ್ಮರಣದ ಬಗೆಗೆ ಮದನ ಮೋಹನ ಜೋಶಿಯವರ ಗ್ರಂಥ ಪ್ರಸಿದ್ಧವಿದೆ. ಮಧ್ಯಪ್ರದೇಶದ ಬಗೆಗೆ ಒಳ್ಳೆಯ ಕೃತಿ ಬೇಕಾದರೆ ಅಲಹಾಬಾದ, ಆಗ್ರಾ, ದಿಲ್ಲಿ, ನಾಗಪುರಕ್ಕೆ ಬರೆದು ತರಿಸಿಕೊಳ್ಳಬೇಕು.

ಇಪ್ಪತ್ತೊಂದು ವರ್ಷಗಳಿಂದ ಅಸ್ತಿತ್ವದಲ್ಲಿದ್ದ ಸಂಸ್ಥೆಯೊಂದು ದಿಲ್ಲಿಯಲ್ಲಿ ನಡೆಯಲಿದ್ದ ಅಂತರರಾಷ್ಟ್ರೀಯ ಸಮ್ಮೇಳನದಲ್ಲಿ ಸದಸ್ಯರಿಗೆ ಹಂಚುವ ಸಲುವಾಗಿ ಐವತ್ತು ಪುಟಗಳ ಕಿರುಹೊತ್ತಿಗೆಯನ್ನು ಹೊರತಂದಿತು. ಸಂಸ್ಥೆಯ ಐವತ್ತು ಜನರಾದರೂ ಅದರ ಪ್ರಕಟನೆಯ ಶ್ರೇಯಸ್ಸು ತಮಗೆ ಸಲ್ಲಬೇಕೆಂದು ವಾದಿಸಿದರು. ಆದರೆ ಅದರಲ್ಲಿ ಕೇವಲ ಇಬ್ಬರ ಹೆಸರುಗಳನ್ನು ಮುದ್ರಿಸಿದ್ದರಿಂದ ತೀವ್ರ ಅಸಂತೋಷ ತಲೆದೋರಿತು. ಅದರ ಬಗ್ಗೆ ದೂರು ಡಾಯರೆಕ್ಟರ್, ಮಂತ್ರಿಗಳವರೆಗೂ ಹೋಯಿತು. ಉಚ್ಚ ಅಧಿಕಾರಿಗಳು ಯಾರಿಂದಲೂ ಅವರನ್ನೆಲ್ಲ ಸಮಾಧಾನಪಡಿಸಲು ಆಗದ್ದರಿಂದ ಕೈಪಿಡಿಯಲ್ಲಿ ಕೊಟ್ಟ ಅಂಕಿ-ಸಂಖ್ಯೆಗಳು ದೋಷಯುಕ್ತವಾಗಿವೆ ಎಂಬ ನೆವದ ಮೇಲೆ ಅದರ ಚಲಾವಣೆಗೆ ಪ್ರತಿಬಂಧ ಹಾಕಲಾಯಿತು. ಪ್ರಾಗೈತಿಹಾಸ ಸಮ್ಮೇಲನವೊಂದು ಜೈಪುರದಲ್ಲಿ ನಡೆಯಲಿತ್ತು. ಉಜ್ಜಯನಿಯ ಖ್ಯಾತ ವಿದ್ವಾಂಸರು ಅದರ ಅಧ್ಯಕ್ಷರಾಗಿ ಆಯ್ಕೆ ಹೊಂದಿದ್ದರು. ತಮ್ಮ ಹಲ ವರ್ಷಗಳ ಸಂಶೋಧನೆಯ ಸಾರಾಂಶವನ್ನು ಒಂದು ಕಿರು-ಹೊತ್ತಗೆಯ ರೂಪದಲ್ಲಿ ಬರೆದು ಸ್ಥಾನೀಯ ಮುದ್ರಣಾಲಯಕ್ಕೆ ಕಳಿಸಿದರು. ಮುದ್ರಿತ ಪ್ರತಿಗಳಲ್ಲಿ ಸರಿಯಾದ ಅಕ್ಷರಗಳಿಗಿಂತ ಅಕ್ಷರದೋಷಗಳೇ ಹೆಚ್ಚಾಗಿದ್ದರಿಂದ ಅವನ್ನೆಲ್ಲ ರದ್ದಿಖಾತೆಗೆ ಹಾಕಬೇಕಾಯಿತಂತೆ! ಇಂತಹ ಸಾಹಸಗಳಿಗೆ ಕೊನೆಮೊದಲಿಲ್ಲ. ಅಲ್ಲಿಯ ಸ್ಟೇಟ್‌ಬ್ಯಾಂಕಿನವರು ಇಂಗ್ಲಿಷಿನಲ್ಲಿ ಬರೆದ ಪತ್ರಕ್ಕೆ ಉತ್ತರಿಸಲು ಎರಡು ತಿಂಗಳು ತೆಗೆದುಕೊಂಡು ನಂತರ ಬರೆದ ಪತ್ರ, ಹಾಯ್‌ಸ್ಕೂಲ ವ್ಯಾಕರಣ ಪಾಠಕ್ಕೆ ಮಾದರಿಯ ದೋಷಯುಕ್ತ ಪತ್ರವಾಗಿದೆ. ಅದರಲ್ಲಿ ಬಳಸಿದ ಕೆಲ ಶಬ್ದಗಳ ಅರ್ಥವನ್ನು ಯಾವ ಇಂಗ್ಲಿಷ್ ಶಬ್ದಕೋಶವೂ ಕೊಡಲಾರದು!

ಬಹುಸಂಖ್ಯಾತರು ರೇಡಿಯೋ ಹಚ್ಚಿ ಕೇಳುವದು ಹಿಂದೀ ಸಮಾಚಾರ

ವನ್ನೇ. ಓದುವದು ಹಿಂದೀ ಪತ್ರಿಕೆಗಳನ್ನೇ. ತುರ್ತುಪರಿಸ್ಥಿತಿಯಲ್ಲಿ ಭಾರತದ ಸಮಾಚಾರಕ್ಕಾಗಿ ಬಿ.ಬಿ.ಸಿ.ಯ ಹಿಂದೀ ಪ್ರಸಾರಕ್ಕಾಗಿಯೇ ಕಾಯುತ್ತಿದ್ದರು. ಹೀಗಾಗಿ ಇಂಗ್ಲಿಷ್ ಪತ್ರಿಕೆ ಕೊಂಡು ಓದುವವರನ್ನು ಗೌರವದಿಂದ ಕಾಣುತ್ತಾರೆ! ಆ ರಾಜ್ಯದಿಂದ 'ಹಿತವಾದ್', 'ನರ್ಮದಾ ಟೈಮ್ಸ್', 'ನರ್ಮದಾ ಹೆರಾಲ್ಡ್', 'ಮಧ್ಯಪ್ರದೇಶ ಕ್ರಾನಿಕಲ್' ಎಂಬ ಇಂಗ್ಲಿಷ್ ದೈನಿಕಗಳು ಹೊರಬರುತ್ತವೆ. ಇವುಗಳೆಲ್ಲ ಹಿಂದೀಯಲ್ಲಿ ಇಂಗ್ಲಿಷ್ ಕಲಿತವರಿಗೆ ಅರ್ಥವಾಗಬಹುದೇ ಹೊರತು ಇಂಗ್ಲಿಷಿನಲ್ಲಿ ಇಂಗ್ಲಿಷ್ ಕಲಿತವರಿಗೆ ತಿಳಿಯುವಂತಹವಲ್ಲ. ಜೊತೆಗೆ ಅಕ್ಷರದೋಷ, ಮುದ್ರಣದೋಷಗಳಿಗೆ ಕೊನೆಮೊದಲು ಇರದ್ದರಿಂದ ಸಮಾಚಾರಗಳನ್ನು ಅರ್ಥಮಾಡಿಕೊಳ್ಳಲು ಇದ್ದ ಬುದ್ಧಿಯನ್ನೆಲ್ಲ ಉಪಯೋಗಿಸಬೇಕು. ನೆರೆರಾಜ್ಯದ ನಾಗಪುರದಿಂದ ಪ್ರಕಟವಾಗುವ 'ನಾಗಪುರ ಟೈಮ್ಸ್' ಸಾಧಾರಣಮಟ್ಟದ್ದು. ಅದರಲ್ಲಿ ಒಂದು ಸಂಚಿಕೆಯಲ್ಲಿ ಅಂತರರಾಷ್ಟ್ರೀಯ ಹಿಂದೀ ಸಮ್ಮೇಳನ ವಿವರ, ಮಹಿಳಾಲೇಖಕಿಯರನ್ನು ಉದ್ದೇಶಿಸಿ ಮಾಡಿದ ಅಧ್ಯಕ್ಷಿಣಿಯ ಭಾಷಣವೇ ಪತ್ರಿಕೆಯುದ್ದಕ್ಕೂ ತಂಬಿಕೊಂಡಿತ್ತು. (ಈಕೆ ಸಂಪಾದಕರ ಪತ್ನಿ ಎಂದು ಅನಂತರ ತಿಳಿಯಿತು!) ಈ ಪತ್ರಿಕೆಗಳಲ್ಲಿ ಶಾಲೆ ಕಾಲೇಜಗಳ ವಿವಿಧ ಸ್ಪರ್ಧೆಗಳ ವಿವರ, ವೈಯಕ್ತಿಕ ಸಾಧನೆಗಳು, ಫೋಟೊಗಳು, ದೈನಂದಿನ ಭವಿಷ್ಯ ಇವನ್ನು ಓದಿ ಓದಿ ಜಿಗುಪ್ಸೆ ಬರುವಂತಾಯಿತು. ಸಮಾಚಾರಗಳನ್ನು ಓದಬೇಕಾದರೆ ಒಂದು ದಿವ ತಡಮಾಡಿ ಬರುವ ದಿಲ್ಲಿ, ಮುಂಬಯಿಗಳ ಪತ್ರಿಕೆಗಳಿಗೆ ಕಾಯದೇ ಬೇರೆ ಮಾರ್ಗವಿಲ್ಲ!

# ೫. ರಾಜ್ಯದ ಆದಿವಾಸಿಗಳು

ದೇಶವು ಸ್ವತಂತ್ರವಾದಂದಿನಿಂದ ರಾಜಕಾರಣಿಗಳು ಅರಣ್ಯವಾಸಿ, ಆದಿವಾಸಿ, ಗಿರಿಜನರ ಬಗ್ಗೆ ಕಣ್ಣೀರು ಸುರಿಸುತ್ತಲೇ ಬಂದರೂ ಅವರನ್ನು ಸರಿಯಾಗಿ ಅರ್ಥಮಾಡಿಕೊಳ್ಳುವ ಯತ್ನ ಈ ಮೂವತ್ತು ವರ್ಷಗಳಲ್ಲಿ ನಡೆದಿಲ್ಲ ಎಂಬುದು ಶೋಚನೀಯ. ಕೇಂದ್ರ ಮತ್ತು ರಾಜ್ಯಸರಕಾರಗಳು ಅವರ ಜನಸಂಖ್ಯೆ, ಉತ್ಪನ್ನ, ಶಿಕ್ಷಣಮಟ್ಟ ಮತ್ತು ಅವರ ಉದ್ಧಾರಮಾಡಲು ಹರಿಸಿದ ಹೊನ್ನ-ಹೊಳೆಯ ಅಂಕಿ-ಸಂಖ್ಯೆಗಳು ಲಭ್ಯವಾಡಿವೆಯೇ ಹೊರತು ಅವರ ಅಂತರಾಳವನ್ನು ಅರಿಯುವ ಯತ್ನವೇ ಈವರೆಗೆ ನಡೆದಿಲ್ಲ. ಅವರ ಜೀವನಕ್ರಮ, ಆಸೆ-ಆಕಾಂಕ್ಷೆಗಳು, ಸಂಸ್ಕೃತಿ-ಸಂಸ್ಕಾರಗಳನ್ನು ಸಂಪೂರ್ಣವಾಗಿ ಅರಿಯದೇ ಅವರಿಗಾಗಿ ಕೈಕೊಂಡ ಸುಧಾರಣಾ-ಕ್ರಮಗಳು ಫಲಕಾರಿಯಾಗ ಲಾರವೆಂದು ಈ ಮೂರು ದಶಕಗಳಲ್ಲಿ ಅರಿತುಕೊಳ್ಳಲಾಗದಿದ್ದರೆ, ಅವರ ಹಿತಚಿಂತಕರೆನಿಸಿಕೊಂಡವರೆಲ್ಲ ಅಬಲರೆನ್ನಿಸಿಕೊಳ್ಳುವರು.

ಭಾರತದಲ್ಲಿ ಸುಮಾರು ೩೮ ಲಕ್ಷ ಆದಿವಾಸಿಗಳು ಇಪ್ಪತ್ನಾಲ್ಕು ರಾಜ್ಯ ಗಳಲ್ಲಿ ಹಂಚಿಹೋಗಿದ್ದರೂ ಮಧ್ಯಪ್ರದೇಶ, ಬಿಹಾರ, ಓರಿಸ್ಸಾಗಳಲ್ಲಿ ಶೇಕಡಾ ೫೦%ರಷ್ಟು ಇದ್ದಾರೆ. ಮಧ್ಯಪ್ರದೇಶ ಒಂದರಲ್ಲಿಯೇ ೨೨.೩%ರಷ್ಟು ಇದ್ದಾರೆ. ರಾಜ್ಯದ ಜನಸಂಖ್ಯೆಯ ಶೇಕಡಾ ೨೦ರಷ್ಟು ಇದ್ದು ಹದಿಮೂರು ಜಿಲ್ಲೆಗಳಲ್ಲಿ ವಿಪುಲವಾಗಿದ್ದಾರೆ. ಇವರಲ್ಲಿ ಅರ್ಧದಷ್ಟು ಜನ ಮೂವತ್ತೆಂಟು ತಹಶೀಲುಗಳಲ್ಲಿ ಇದ್ದು ರಾಜ್ಯದ ೨೫೬೫೨ ಚೌರಸಮೈಲು ಅಂದರೆ ರಾಜ್ಯದ ೧೫% ಕ್ಷೇತ್ರಫಲದಲ್ಲಿ ವಾಸಿಸುತ್ತಾರೆ. ಈ ಅಂಕಿಸಂಖ್ಯೆಗಳಿಂದ ಆ ರಾಜ್ಯ ದಲ್ಲಿಯ ಆದಿವಾಸಿಗಳ ಮಹತ್ವದ ಕಲ್ಪನೆ ಬರುವಂತಿದೆ.

ಆದಿವಾಸಿ ಯಾರು ಎಂದು ವ್ಯಾಖ್ಯೆ ನೀಡುವದು ಶ್ರೀಸಾಮಾನ್ಯ ನೆಂದರೆ ಯಾರು ಎಂದು ವಿವರಿಸುವಷ್ಟೇ ಬಿಗಿಯಾದ ಮಾತು. ಸುಧಾರಣೆ ಮುನ್ನಡೆ, ಆಧುನಿಕತೆಗಳ ಪ್ರವಾಹದಲ್ಲಿ ಕೊಚ್ಚಿಕೊಂಡು ಹೋಗದೇ ಶಿಲಾ ಬಂಡೆಗಳಂತೆ ಗಟ್ಟಿಯಾಗಿ ನಿಂತು ನವನಾಗರಿಕತೆಯಿಂದ ಅತಿ ದೂರವಿದ್ದು

ತಮ್ಮತನ ಕಾಯ್ದುಕೊಂಡವರು ಆದಿವಾಸಿಗಳೆಂದು ಸರ್ವಸಾಧಾರಣವಾಗಿ ಹೇಳಬಹುದು. ಯಾವ ವ್ಯಾಖ್ಯೆ ಕೊಟ್ಟರೂ ಅದಕ್ಕೆ ಅಪವಾದಗಳು ಇದ್ದೇ ಇವೆ. ಇವರಿಗೆ ಗಿರಿಜನರು, ವನವಾಸಿ ಹಿಂದುಳಿದವರು, ಪರಿಶಿಷ್ಟವರ್ಗ ಎಂಬ ಅನೇಕ ಅನ್ವರ್ಥಕ ಹೆಸರುಗಳುಂಟು. ಇವರು ಉಳಿದ ಭಾರತೀಯರಿಗಿಂತ ಹೇಗೆ ಮತ್ತು ಎಂದು ಭಿನ್ನರಾದರು ಎಂಬ ಬಗ್ಗೆ ಚರಿತ್ರೆಯಲ್ಲಿ ಉಲ್ಲೇಖ ವಿಲ್ಲ. ಬಹುಶಃ ಆರ್ಯರು ಭಾರತಕ್ಕೆ ಆಗಮಿಸಿದಾಗ ಮತ್ತು ಸಿಂಧು ಗಂಗಾ ನದಿಗಳ ಕೊಳ್ಳಗಳನ್ನು ಆಕ್ರಮಿಸಿದಾಗ ಮೂಲನಿವಾಸಿಗಳು ದಕ್ಷಿಣಕ್ಕೆ ಗುಳೇ ಹೋಗಲಾರಂಭಿಸಿದರು. ಕೆಲವು ಗುಂಪುಗಳು ದಟ್ಟಕಾಡು, ಬೆಟ್ಟ, ಗಿರಿ, ಕಂದರಗಳಲ್ಲಿ ಹೋಗಿ ಒಂಟಿ-ಜೀವನ ಪ್ರಾರಂಭಿಸಿರಬೇಕು. ಇವರಿಗೆ ಶತಕ ಗಳಿಂದ ಬಾಹ್ಯಜಗತ್ತಿನ ಸಂಪರ್ಕವಿಲ್ಲದೇ ಒಂದೇ ರೀತಿಯ ಜೀವನವನ್ನು ನಡೆಸುತ್ತ ಬಂದಿದ್ದರು. ಈ ಆದಿವಾಸಿಗಳಲ್ಲಿದ್ದ ಯಾವ ಸಂಪತ್ತು ರಾಜ-ಮಹಾ ರಾಜರಿಗೆ ಬೇಕಿರಲಿಲ್ಲವಾದ್ದರಿಂದ ಅವರ ಗೊಡವೆಗೆ ಹೋಗಿರಲಿಲ್ಲ. ಬ್ರಿಟಿಶರಿಗೆ ನಾಗರಿಕರನ್ನು ಆಳುವದೇ ದೊಡ್ಡ ತಲೆಬೇನೆಯಾಗಿದ್ದರಿಂದ ಶಾಂತಿಯಿಂದ ಬಾಳುತ್ತಿದ್ದ ಈ ಗಿರಿಜನರನ್ನು ಅವರ ಪಾಡಿಗೇ ಬಿಟ್ಟು ತೆಪ್ಪಗಿದ್ದರು. ಸ್ವಾತಂತ್ರ್ಯಾನಂತರ ದೇಶದ ವನಗಳು ಮತ್ತು ವನ್ಯಸಂಪತ್ತು ಭರದಿಂದ ಕಡಿಮೆ ಆಗದೇ ಇದ್ದಿದ್ದರೆ ಸರಕಾರದ ಲಕ್ಷ್ಯ ಈಗಿನಷ್ಟು ಈ ವನವಾಸಿಗಳತ್ತ ಹೋಗು ತ್ತಿತ್ತೋ ಇಲ್ಲವೋ ಹೇಳುವದು ಕಷ್ಟ!

ರಾಜ್ಯದ ಆದಿವಾಸಿಗಳನ್ನು ನಾಲ್ಕು ಭೌಗೋಲಿಕ ಪಂಗಡಗಳನ್ನಾಗಿ ವಿಂಗಡಿಸಬಹುದು. ಪೂರ್ವಕ್ಕೆ ಸರಗುಜಾ, ಬಿಲಾಸಪುರ ರಾಯಗಡ, ಪಶ್ಚಿಮಕ್ಕೆ ಧಾರ, ಝಬುಆ, ಖಾರಗೋನ, ದಕ್ಷಿಣಕ್ಕೆ ಬಸ್ತರ ಮತ್ತು ಮಧ್ಯಭಾಗದಲ್ಲಿ ಬೇತುಲ, ಛಿಂದವಾಡಾ, ನರಸಿಂಹಪುರ, ಮಾಂಡ್ಲಾ, ಮತ್ತು ಬಾಲಾಘಾಟ ಜಿಲ್ಲೆಗಳಲ್ಲಿ ಅವರು ಬಹುಸಂಖ್ಯಾಕರಾಗಿದ್ದಾರೆ. ಅವರ ಗುಂಪು, ಒಳಗುಂಪು, ಬಣಗಳ ಬಗೆಗೆ ಯಾವದೇ ಲಿಖಿತ ಸಾಹಿತ್ಯ ಸೂತ್ರಗಳಿಲ್ಲದ್ದರಿಂದ ಅಪಾರ ಗೊಂದಲವಾಗಿದೆ. ತಮ್ಮ ಕುಲ, ಗೋತ್ರಗಳನ್ನು ಚಾಚೂ ತಪ್ಪದೇ ನೆನಪಿಟ್ಟುಕೊಳ್ಳುವವರಲ್ಲಿ ಆದಿವಾಸಿಗಳು ಮುಖ್ಯ ಪಂಗಡಗಳನ್ನೆ ಮರೆತು ಬಿಟ್ಟಿದ್ದಾರೆ! ಹತ್ತೊಂಭತ್ತನೇ ಶತಮಾನದ ಅಂತ್ಯ ಮತ್ತು ಈ ಶತಮಾನದ ಆದಿಯಲ್ಲಿ ನಡೆಸಿದ ಜನಗಣತಿಯಲ್ಲಿ ಹೆಚ್ಚಿನ ಆದಿವಾಸಿಗಳಿಗೆ ಗೊಂಡರೆಂದು

ವರ್ಗೀಕರಿಸಲಾಗಿದೆ. ಇಪ್ಪತ್ತನೇ ಶತಕದ ಮೂರು ಮತ್ತು ನಾಲ್ಕನೆಯ ದಶಕಗಳಲ್ಲಿ ಕ್ರಿಶ್ಚಿಯನ್ ಮಿಶನರಿಯಾಗಿ ಬಂದ ಇಂಗ್ಲಿಷ ಕವಿ ವೆರಿಯರ್ ಎಲ್ವಿನ್‌ರ ಬರಹಗಳೇ ಇಂದಿಗೂ ಸರಕಾರದ ನಿರ್ಣಯಗಳಿಗೆ ತಳಹದಿಯಾಗಿದೆ ಎಂದರೆ ಕಳೆದ ನಾಲ್ಕು ದಶಕಗಳಲ್ಲಿ ಗಮನಾರ್ಹವಾದ ಒಂದೂ ಅಭ್ಯಾಸವನ್ನು ಸಹಾ ಕೈಕೊಂಡಿಲ್ಲವೆಂಬುದು ಸ್ಪಷ್ಟ. ಎಲ್ವಿನ್‌ರು ಪಾಶ್ಚಾತ್ಯ ಓದುಗರನ್ನು ಲಕ್ಷ್ಯದಲ್ಲಿ ಇಟ್ಟುಕೊಂಡು, ಆದಿವಾಸಿಗಳ ಜೀವನವನ್ನು ರಂಗುರಂಗಾಗಿ ಕಲಾತ್ಮಕವಾಗಿ ಬರೆದದ್ದರಿಂದ ಅವು ಸತ್ಯದಿಂದ ದೂರವಾಗಿವೆಯೆಂದು ಬೇರೆ ಹೇಳಬೇಕಾಗಿಲ್ಲ. ಸ್ವಾತಂತ್ರ್ಯದ ನಂತರ ಆದಿವಾಸಿ ಸುಧಾರಣಾ ಆಯೋಗವೊಂದನ್ನು ನೇಮಿಸಿದಾಗ ಅದರ ಮುಖಂಡತ್ವ ಎಲ್ವಿನ್‌ರ ಕೊರಳಿಗೇ ಬಿತ್ತು. ಅದರ ಶಿಫಾರಸುಗಳನ್ನಾದರೂ ಚಾಚೂ ತಪ್ಪದೇ ಕಾರ್ಯರೂಪಕ್ಕೆ ತಂದಿದ್ದರೆ ಇಂದು ಆದಿವಾಸಿಗಳು ಎಷ್ಟೋ ನೆಮ್ಮದಿಯಿಂದ ಇರುವಂತೆ ಆಗುತ್ತಿತ್ತು. ಆದಿವಾಸಿಗಳನ್ನು ಸುಧಾರಿಸಹೊರಟು ಸರಕಾರ ಕುದುರೆಯ ಬದಲಾಗಿ ಅವರನ್ನು ಹೆಸರಗತ್ತೆಗಳನ್ನಾಗಿ ಮಾಡಿದೆ.

ಮಧ್ಯಪ್ರದೇಶದ ಆದಿವಾಸಿಗಳನ್ನು ಸುಮಾರು ನಾಲವತ್ತು ಗುಂಪುಗಳಲ್ಲಿ ವಿಂಗಡಿಸಬಹುದು. ಅಬುಜಮಾರಿಯು, ಆಗೇರಿಯಾ, ಬೈಗಾಭಾರಿಯಾ, ಭಾತ್ರಾ, ಭಿಲ್ಲ, ಭಿಲಾಲ, ಭಂಜವಾಡ, ಭೂಮ್ಯಾ, ಭೂರೆಜಿಯಾ, ಧಾನವಾರ, ಧೋರವಾ, ಧೋಬಾ, ದೂರಲಾ, ಗಾಲ್ಬಾ, ಗೊಂಡ, ಹಲ್ಬಾ, ಕಾಲಂಗ, ಕವಾರ, ಕವಾರ, ಖೈರವಾರ, ಬಾರಿಯಾ, ಖೊಂಡ, ಕೋಲ, ಕೊರ್ಕ, ಕೊಲರ್ಮಾಜವಾರ, ಮುಂಡ, ಮುರಿಯು, ನಾಗಾರ್ಚಿ, ನಾಗೇಸಿಯು, ನಿಹಾಲ, ಓಝಾ, ಓರಾನ್, ಪಾಜ, ಪರ್ಧಾನ (ಪ್ರಧಾನ), ಸಹರಿಯು, ಸಾವಾರ, ಇತ್ಯಾದಿ. ಈ ಹೆಸರುಗಳನ್ನು ಬರೆಯುವದರಲ್ಲಿ ಆಗಲಿ, ಉಚ್ಚಾರದಲ್ಲಿ ಆಗಲಿ ಒಮ್ಮತವಿಲ್ಲ. ಸಿಂಧು ನದಿ ನಾಲಿಗೆ ಹೊರಳದ ಆಂಗ್ಲರ ಬಾಯಲ್ಲಿ ಇಂಡಸ್ ಆದಂತೆ, ಆದಿವಾಸಿಗಳ ಹೆಸರಗಳು ಹಿಂದಿಯಲ್ಲಿ ಅಪಭ್ರಂಶ ಹೊಂದಿ ಇಂಗ್ಲಿಷಿಗೆ ರೂಪಾಂತರ ಹೊಂದುವಾಗ ಅಧ್ವಾನವಾಗಿರುತ್ತವೆ. ಈ ಹೆಸರುಗಳ ಬಗ್ಗೆ ಯಾವದೇ ಎರಡು ಅಧಿಕಾರಿಗಳಲ್ಲಿ, ಲೇಖಕರಲ್ಲಿ ಒಮ್ಮತವಿಲ್ಲ. ಒಬ್ಬನು, ಕೊರ್ಕು, ಮಾರಿಯ, ಮುರಿಯರು ಗೊಂಡರ ಉಪಪಂಗಡಗಳೆಂದು ಸಾಧಿಸಿದರೆ ಇನ್ನೊಬ್ಬ ಅವಕ್ಕೆ ವಿಂಗಡ ಪಂಗಡಗಳ ಸ್ಥಾನವನ್ನು ದಯಪಾಲಿಸುವ. ಒಂದೇ ಒಳ

ಗುಂಪಿಗೆ ವಿವಿಧ ತಹಶೀಲ ಅಥವಾ ಜಿಲ್ಲೆಗಳಲ್ಲಿ ಬೇರೆ ಬೇರೆಯಾಗಿ ಕರೆಯುವ ವಾಡಿಕೆಯುಂಟು. ಅಲ್ಲದೆ ಹಲವಾರು ಆದಿವಾಸಿಗಳ ಪಂಗಡಗಳಲ್ಲಿ ತಾವು ಉಳಿದವರಿಗಿಂತ ಮೇಲು ಅನಿಸಿಕೊಳ್ಳುವದಕ್ಕಾಗಿ ಹೆಸರಿನ ಹಿಂದೆ 'ರಾಜ' ಎಂಬ ಬಿರುದು ಸೇರಿಸಿಕೊಳ್ಳುವದುಂಟು. ಆದ್ದರಿಂದ ರಾಜಭಿಲ್ಲರು, ರಾಜ ಗೊಂಡರು, ತಾವು ಭಿಲ್ಲ ಮತ್ತು ಗೊಂಡರಿಂದ ಬೇರೆಯೆಂದು ಸಾಧಿಸುತ್ತಿರುತ್ತಾರೆ. ಕೆಲವು ಗುಂಪುಗಳು ಭೌಗೋಲಿಕವಾಗಿ ಒಂದರಿಂದ ಇನ್ನೊಂದು ಬೇರ್ಪಟ್ಟಿದ್ದರಿಂದ ಅವರ ಆಚಾರ-ವಿಚಾರ, ನಡೆ-ನುಡಿಗಳು ತೀರ ಭಿನ್ನವಾಗಿವೆ. ಉದಾಹರಣಾರ್ಥವಾಗಿ ಬಯಲಿನಲ್ಲಿ ವಾಸಿಸುವ ಮಾರಿಯರು, ಗುಡ್ಡಗಾಡು ಮಾರಿಯರಿಗಿಂತ ಭಿನ್ನವಾಗಿದ್ದಾರೆ. ಹಾಗೇ ಕಾಡುಕೋಣ-ಕೋಡಿನ ಮಾರಿಯರು (Bison-horn Marias) ಅಬುಜ್ ಮಾರಿಯರಿಗಿಂತ ಭಿನ್ನವಾಗಿದ್ದಾರೆ. ಇವರೆಲ್ಲ ಮಾರಿಯ ಪಂಗಡದ ಒಳಗುಂಪುಗಳೆಂದು ತಿಳಿಯಬೇಕೇ? ಅಥವಾ ಬೇರೆಯೇ ಪಂಗಡಗಳೆಂದು ತಿಳಿಯಬೇಕೇ ಎಂದು ಬಹುಮತವಿಲ್ಲ. ಭಿಲ್ಲರು, ಭಿಲ್ಲಾಲರು ಮತ್ತು ಕೋಲರು ಮುಂದುವರಿದವರು ಅನಿಸಿಕೊಂಡರೆ ಅನಂತರ ಬೈಗಾ, ಆಗೇರಿಯಾ, ಕೊರ್ಕುಗಳು ಬರುತ್ತಾರೆ. ಕೋಲಾರರು ಅತಿ ಹಿಂದುಳಿದ ಆದಿವಾಸಿಗಳು, ಪೆಜ್ಜಿನವರು ಪರಂಪರಾಗತವಾಗಿ ಬಂದ ಧಾರ್ಮಿಕ ರೀತಿ-ನೀತಿಗಳನ್ನು ಪಾಲಿಸುತ್ತಿದ್ದರೆ, ಹಲ್ಬಾ ಮತ್ತು ಗೊಂಡರು ಹಿಂದುಗಳ ನಿಕಟ ಸಂಪರ್ಕದಿಂದಾಗಿ ಹಿಂದುಧರ್ಮವನ್ನು ಆಚರಿಸಹತ್ತಿದ್ದಾರೆ. ರಾಜ್ಯದ ಪಶ್ಚಿಮಕ್ಕೆ ಭಿಲ್ಲ, ಭಿಲ್ಲಾಲರು ಹೆಚ್ಚಾಗಿದ್ದರೆ ಮಧ್ಯ ಮತ್ತು ಪೂರ್ವಭಾಗಗಳಲ್ಲಿ ಗೊಂಡ, ಭಾರಿಯಾ, ಕೊರ್ಕು, ಮಾರಿಯ ಮುರಿಯರು, ಬಹುಸಂಖ್ಯಾತರಾಗಿದ್ದಾರೆ.

ಗೊಂಡ, ಭಿಲ್ಲ, ಓರಾಜರ ಜನಸಂಖ್ಯೆ ಲಕ್ಷಗಳ ಗುಣಿತದಲ್ಲಿದ್ದರೆ, ಕೋಲ, ಕೊರ್ಕು, ಮಾರಿಯ, ಮುರಿಯರು ಸಹಸ್ರದ ಮತ್ತು ಭೂಮಿಯಾ, ದುರ್ಲಾರು ಶತಕದ ಗುಣಿತಗಳಲ್ಲಿ ಇದ್ದಾರೆ. ಕೆಲವು ಪಂಗಡಗಳಂತೂ ತೀರ ಚಿಕ್ಕವು. ಆಯಾ ವರ್ಗಗಳನ್ನವಲಂಬಿಸಿ ಅವರು ಗೊಂಡಿ, ಹಲ್ಬಿ, ಭಾತ್ರಿ, ದೂರ್ಲಿ ಕೊರ್ಕು, ಭಿಲ್ಲ ಭಾಷೆಗಳನ್ನು ಮಾತನಾಡುತ್ತಾರೆ. ಅವರು ಒಂದು ಹಳ್ಳಿಯನ್ನಾಗಲಿ, ಭಾಗವನ್ನಾಗಲಿ ಮಾಡಿಕೊಂಡು ವಾಸಿಸುವದು ಹೆಚ್ಚು. ದೊಡ್ಡ ಗೊಂಡ ಹಳ್ಳಿಗಳಲ್ಲಿ ಐನೂರರ ವರೆಗೆ ಜನವಸತಿಯಿದ್ದರೆ ನಿಸರ್ಗದ ಮಡಿಲಲ್ಲಿ

ವಿಂಗಡದ ಗುಡಿ ಕಟ್ಟಿಕೊಂಡಿರುವ ಮಾರಿಯರ, ಮುರಿಯರ ಹಳ್ಳಿಯಲ್ಲಿ ಎಂಟು ಹತ್ತು ಕುಟುಂಬಗಳು ಮಾತ್ರ ವಾಸಿಸುವದು ವಾಡಿಕೆ, ಅಬುಜ ಮಾರಿಯರದು ಚೌರಸ ಮೈಲಿಗೆ ಎಂಟು ಹತ್ತು ಜನರಂತೆ ವಾಸವಿದೆ. ಅವರ ಚಿಕ್ಕಚಿಕ್ಕ ಹಳ್ಳಿಗಳಿಗೆ ತೋಲಾ, ಧಾನಾ, ಮಾಜ್ರಾ, ಪಾರಾ ಮುಂತಾದ ಪ್ರತ್ಯಯಗಳನ್ನು ಹಚ್ಚುವದು ವಾಡಿಕೆ. ಡಿಮರಾಧಾನಾ ಎಂದರೆ ಡಿಮರಾ ಎಂಬ ಹಳ್ಳಿಯ ಒಂದು ಭಾಗ ಎಂದಾಗುತ್ತದೆ. ಆದಿವಾಸಿಗಳ ನಿವಾಸಸ್ಥಾನದ ಇನ್ನೊಂದು ವೈಶಿಷ್ಟ್ಯವೆಂದರೆ, ಕೆಲವು ಯಾವದೇ ತರದ ಸಂಪರ್ಕವನ್ನು ಸುಲಭವಾಗಿ ಸಾಧಿಸಲಾರದಷ್ಟು ಏಕಾಂತಸ್ಥಳದಲ್ಲಿ ಇರುತ್ತವೆ. ಹೆಚ್ಚಾಗಿ ಸಮುದ್ರಪಾತಳಿಯಿಂದ ಎರಡರಿಂದ ನಾಲ್ಕು ಸಹಸ್ರ ಅಡಿ ಎತ್ತರದಲ್ಲಿ ಅವರು ಬೀಡುಮಾಡಿಕೊಂಡಿರುತ್ತಾರೆ.

ಅಬುಜ್ ಮಾರಿಯರಂತಹ ಹಿಂದುಳಿದ ಆದಿವಾಸಿಗಳು ಮೊನ್ನೆ ಮೊನ್ನೆಯ ವರೆಗೆ ಸ್ಥಳಾಂತರ-ಕೃಷಿ (Shift-cultivation) ಮಾಡುತ್ತಿದ್ದರು. ಊರ ಮುಖ್ಯಸ್ಥರು ಕಾಡಿನಲ್ಲಿ ಅಲೆದು ತಮಗೆ ಸುರಕ್ಷತೆ, ಕೃಷಿಗೆ ಯೋಗ್ಯ ವಾದ ಭೂಮಿಯನ್ನು ಗೊತ್ತುಪಡಿಸಿ, ಕಾಡನ್ನು ಕಡಿದು, ಮರಗಳನ್ನು ಸುಟ್ಟು, ನೆಲ ಹಸನಮಾಡದೇ ಬೆಳೆವಷ್ಟು, ಬೆಳೆ ತೆಗೆದುಕೊಂಡು, ಅಲ್ಲೇ ಮನೆ ಮಾಡಿ, ನಾಲ್ಕಾರು ವರ್ಷಗಳಲ್ಲಿ ಭೂಮಿ ಪಾಳುಬಿದ್ದಾಗ, ಬೇರೊಂದು ಸ್ಥಳಕ್ಕೆ ಗುಳೇ ಹೋಗಿ ತಿರುಗಿ ಕೃಷಿಮಾಡುವದು ಕ್ರಮವಾಗಿತ್ತು. ಅವರು, ಬಿಟ್ಟು ಬಂದ "ಹೊಲಗಳು" ಸವಕಳಿಯಿಂದಾಗಿ ಹಾಳುಬೀಳುವದರಿಂದ ಅಲ್ಲಿ ಯಾವ ಸಸ್ಯವೂ ಬೆಳೆಯದ್ದರಿಂದ ಆಗುವ ಹಾನಿ ಅಷ್ಟಿಷ್ಟಲ್ಲ. ಜನವಸತಿ ಅತಿ ವಿರಳ ಮತ್ತು ಕಾಡು ದಟ್ಟವಾಗಿದ್ದಾಗ ಈ ಕೃಷಿ-ಪದ್ಧತಿಯ ಬಗ್ಗೆ ಸರಕಾರವು ಅಷ್ಟೊಂದಾಗಿ ತಲೆಕೆಡಿಸಿಕೊಳ್ಳದಿದ್ದರೂ ಈಚೆಗೆ ಅರಣ್ಯ-ಸಂಪತ್ತು ಈ ರೀತಿ ಸೂರೆಗೊಳ್ಳುವದನ್ನು ತಡೆಹಿಡಿಯಲು, ಆದಿವಾಸಿಗಳೆಲ್ಲ ಸ್ಥಾಯಿಯಾಗಿ ಒಂದೆಡೆ ನೆಲೆಸಿ ಹೊಲ ಊಳಿ ಕೃಷಿಮಾಡಬೇಕೆಂಬ ನಿರ್ಬಂಧ ಹೇರಿದೆ. ಆದರೂ ಅಬುಜ್‌ಮಾರ್ ಪ್ರದೇಶದಲ್ಲಿ ಕೆಲವೆಡೆ ಈಗಲೂ ಸ್ಥಳಾಂತರ-ಕೃಷಿಯನ್ನು ಮಾಡುತ್ತಾರೆ.

ಕಾಡಿನಲ್ಲಿ ಬೇಟೆಯಾಡುವದು, ಗಡ್ಡೆಗೆಣಸುಗಳನ್ನು ಸಂಗ್ರಹಿಸುವದು, ಎಣ್ಣೆಕಾಳು, ಮಹುವಾ ಹೂ, ತೊಗಟೆ ಮೊದಲಾದುವನ್ನು ಸಂಗ್ರಹಿಸುವದು

ಆದಿವಾಸಿಗಳ ಬೇರೆ ವ್ಯವಸಾಯಗಳಲ್ಲಿ ಬರುತ್ತದೆ. ಬಿಲ್ಲು-ಬಾಣ, ಕೊಡಲಿಗಳೊಂದಿಗೆ ಕಾಡಿನಲ್ಲಿ ಅಲೆಯಲಾರಂಭಿಸಿದರೆ ಅವರು ಜಗತ್ತನ್ನೇ ಮರೆಯುತ್ತಾರೆ. ಸಾಮಗ್ರಿಗಳನ್ನು ಅದಲುಬದಲು ಮಾಡಿಕೊಳ್ಳುವದು ಅವರ ವ್ಯಾಪಾರದ ಮುಖ್ಯ ಪದ್ಧತಿಯಾದ್ದರಿಂದ ಆಧುನಿಕರ ಹಣಕಾಸಿನ ವ್ಯವಸ್ಥೆಯಲ್ಲಿ ಅವರಿಗೆ ವಿಶ್ವಾಸವಿಲ್ಲ. ಪ್ರತಿಯೊಂದು ಹಳ್ಳಿ, ಅಷ್ಟೇ ಏಕೆ ಪ್ರತಿಯೊಂದು ಕುಟುಂಬವೂ ತನ್ನ ದಿನಬಳಕೆಯ ಸಾಮಗ್ರಿಗಳ ವಿಷಯದಲ್ಲಿ ಸ್ವತಂತ್ರವಾಗಿರುತ್ತದೆ. ಅವರ ಜೀವನದ ದೃಷ್ಟಿಕೋನ, ಭಾರತೀಯರಿಗಿಂತ ಪಾಶ್ಚಾತ್ಯರದನ್ನು ಹೋಲುತ್ತದೆಯೆಂದರೆ ಅತಿಶಯೋಕ್ತಿಯಾಗಲಾರದು, ತಂದೆ-ತಾಯಿಗಳು ಮಕ್ಕಳಿಗೆ ಹೆಚ್ಚಿನ ಸ್ವಾತಂತ್ರ್ಯ ಕೊಟ್ಟು ಸಮಾನತೆಯಿಂದ ನೋಡಿಕೊಳ್ಳುವರು. ಶ್ರಮಜೀವಿಗಳಾದ್ದರಿಂದ ಅಶಕ್ತರು, ಅಯೋಗ್ಯರು ತೀರ ಕಡಿಮೆ. ಬಾಲ್ಯದಿಂದಲೂ, ಅಧಿಕಾರದಿಂದ ನಡೆಸಿಕೊಳ್ಳದೇ ಆತ್ಮೀಯತೆಯಿಂದ ಕಾಣುತ್ತಾರೆ. ಅಂತೆಯೇ ನಾಗರಿಕ ಜಗತ್ತಿನ ಹಳಬ-ಹೊಸಬ, ಹಿರಿಯ-ಕಿರಿಯರ ತಿಕ್ಕಾಟ ಅವರಲ್ಲಿ ಇಲ್ಲ. ಜೀವನ ಅತಿ ಕಷ್ಟಮಯವಾದ್ದರಿಂದ ಬಹುಶಃ ಅವರು ಒಟ್ಟಾಗಿ ಹೋರಾಡುತ್ತಿರಬೇಕು.

ಹಬ್ಬ-ಹುಣ್ಣಿವೆಗಳೆಂದರೆ ಅವರೆಲ್ಲ ಒಟ್ಟಾಗಿ ಆನಂದಿಸುವ ಕಾಲ. ಆ ಹರುಷದಲ್ಲಿ ಹಿರಿಕಿರಿಯ ಎಂಬ ಭೇದವಿಲ್ಲ. ಯುವಜನರ ರಸಿಕತೆ, ಕಾಮುಕತೆ, ಉತ್ಸಾಹಗಳನ್ನು ಅದುಮಿ ಇಡುವ ಯತ್ನ ಅವರಲ್ಲಿಲ್ಲ; ಆದರೆ ವಿವಾಹಬಾಹ್ಯ ಕಾಮುಕತೆಯನ್ನು ಆ ಸಮಾಜ ಅತಿ ಕಠೋರವಾಗಿ ಕಾಣುತ್ತದೆ. ವೈವಾಹಿಕ ಜೀವನದಲ್ಲಿ ಗಂಡಸಿಗಿರುವಷ್ಟು ಸ್ವಾತಂತ್ರ್ಯ ಹೆಣ್ಣಿಗೂ ಇದೆ. ಗಂಡ ಪತ್ನಿಗೆ ಅನುಕೂಲವಾಗಿರದಿದ್ದರೆ ವಿವಾಹ-ವಿಚ್ಛೇದನ ಪಡೆದು ಬೇರೊಬ್ಬನೊಡನೆ ಮದುವೆಯಾಗುವ ಸ್ವಾತಂತ್ರ್ಯ ಅವಳಿಗೆ ಶತಮಾನಗಳಿಂದ ಪ್ರಾಪ್ತವಾಗಿದೆ. ವಿಧವೆಯರೂ ಇನ್ನಿಲ್ಲದ ನಲ್ಲನಿಗಾಗಿ ಗೋಳಿಡದೇ ಬೇರೊಬ್ಬನನ್ನು ವಿವಾಹ ಮಾಡಿಕೊಳ್ಳಬಹುದು. ಮತ್ತು ಮಾಡಿಕೊಳ್ಳುತ್ತಾರೆ. ವಿವಾಹಿತಳು ಭಾವನೊಡನೆ ದೂರವಿದ್ದು ಗೌರವದಿಂದ ನಡೆದುಕೊಂಡರೆ, ಮೈದುನನೊಡನೆ ಸಲಿಗೆಯಿಂದ ಇದ್ದು ಮಾತು-ನಗೆಯಾಟದಲ್ಲಿ ತೊಡಗಬಹುದು. ವಿಧವೆಯನ್ನು ಹೆಚ್ಚಾಗಿ ಮೈದುನನೇ ವಿವಾಹವಾಗುವದು ವಾಡಿಕೆ.

ವಧು-ದಕ್ಷಿಣೆ ಇವರಲ್ಲಿ ಪ್ರಬಲವಾಗಿದೆ. ಮಗನಿಗೆ ಪಾಲಕರು ಹೆಣ್ಣು

ಗೊತ್ತುಮಾಡಿ ಅಕ್ಕಿ, ಸೆರೆಯ ರೂಪದಲ್ಲಿ ವಧು-ದಕ್ಷಿಣೆ ನಿಶ್ಚಯಿಸುವರು. ಸಗೋತ್ರರಲ್ಲಿ ವಿವಾಹ ತ್ಯಾಜ್ಯ. ಕಡುಬಡವನಾದವನು ವಧು-ದಕ್ಷಿಣೆಯ ಬದಲಾಗಿ ಭಾವೀ ಮಾವನಲ್ಲಿ ವಿವಾಹಪೂರ್ವದಲ್ಲಿ ಮೂರರಿಂದ ನಾಲ್ಕು ವರ್ಷ ಜೀತದಾಳಾಗಿ ದುಡಿದ ನಂತರವೇ ಗೃಹಸ್ಥನಾಗಲು ಸಾಧ್ಯ. ವಿವಾಹವನ್ನು ಇಡೀ ಹಳ್ಳಿಯೇ ವಿಜೃಂಭಣೆಯಿಂದ ಆಚರಿಸುತ್ತದೆ. ಆಗ ಊಟ-ಉಪಚಾರಕ್ಕಾಗಿ, ಸೆರೆಯ ಹೊಳೆಯನ್ನೇ ಹರಿಸಬೇಕಾಗುತ್ತದೆ. ವಿವಾಹಿತ ಹೆಣ್ಣು ಬೇರೊಬ್ಬನಲ್ಲಿ ಅನುರಕ್ತಳಾಗಿ ಅವನೊಡನೆ ವಿವಾಹವಾಗಬಯಸಿದರೆ, ಈ ಹೊಸ ಪ್ರಿಯತಮನು, ಅವಳ ಪತಿಗೆ ವಧೂ-ದಕ್ಷಿಣೆ, ಮದುವೆಯ ಖರ್ಚೆಂದು ಹಣ ಸಂದಾಯಮಾಡಬೇಕಾಗುವದು. ಕೆಲವು ಪಂಗಡಗಳಲ್ಲಿ ವಿವಾಹಪೂರ್ವ ಕಾಮ ತ್ಯಾಜ್ಯವಲ್ಲದಿದ್ದರೂ, ಗರ್ಭಧಾರಣದಿಂದ ಗೊಂದಲವಾಗುತ್ತದೆ. ಹೆಚ್ಚಾಗಿ ಅದಕ್ಕೆ ಕಾರಣನಾದವನೊಡನೆಯೆ ವಿವಾಹ ನಿಶ್ಚಯಿಸುತ್ತಾರೆ. ಈ "ಅಪರಾಧ"ಕ್ಕಾಗಿ ಊರಿಗೆಲ್ಲ ಭೋಜನಕೂಟದ ಏರ್ಪಾಡು ಮಾಡುವ ಶಿಕ್ಷೆಯನ್ನು ಪಂಚಾಯತಿಯವರು ವಿಧಿಸುವದುಂಟು. ಕನ್ಯೆ, ತನ್ನ ಪ್ರೇಮಿಯನ್ನು ಸಂರಕ್ಷಿಸಬಯಸಿದಾಗ, ಒಪ್ಪುವ ವರನೊಂದಿಗೆ ಹೆಚ್ಚಿನ ಸದ್ದಿಲ್ಲದೇ ವಿವಾಹವನ್ನು ಏರ್ಪಡಿಸುವರು

ಆದಿವಾಸಿಗಳ ಸಮಾಜದಲ್ಲಿ ಆಧುನಿಕ ವೈದ್ಯಕೀಯ ಉಪಕರಣಗಳಿಂದ ರೋಗನಿದಾನಮಾಡುವದು ತೀರ ಕಡಿಮೆ. ಬೇನೆ – ರೋಗಗಳ ನಿವಾರಣೋಪಾಯಕ್ಕೆ ಮಂತ್ರ, ತಂತ್ರ, ಮಾಯ-ಮಾಟಗಳ ಮೊರೆಹೋಗುವದೇ ಹೆಚ್ಚು. ಅವು ಫಲಿಸದಾಗ ರೋಗಿಯ ಹಣೆಬರೆಹದಲ್ಲಿ ಬರೆದದ್ದೇ ಅಷ್ಟು ಎಂದು ತಲೆಯ ಮೇಲೆ ಕೈಹೊತ್ತು ಕೂಡ್ರುವರು. ಮೃತರನ್ನು ಮಣ್ಣುಪಾಲು ಮಾಡುವಾಗ ಆತನ ಪ್ರೀತಿಯ ವಸ್ತುಗಳು, ಬಳಕೆಯ ಸಾಮಾನುಗಳು ಮುಂತಾದವನ್ನು ಒಟ್ಟಿಗೇ ಹೂಳುವರು. ಊರಲ್ಲಿಯ ಪ್ರತಿಷ್ಠಿತ ವ್ಯಕ್ತಿಗಳು ಸ್ವರ್ಗಸ್ಥರಾದಾಗ ಮಾತ್ರ ದಹನಮಾಡಿ, ಅವರ ಹೆಸರಿನಿಂದ ಮೃತ್ಯು-ಸ್ತಂಭಗಳನ್ನು ನಿಲ್ಲಿಸುವರು. ಇವುಗಳು ಕೊರೆದಿದ ಗೊಂಬೆ, ಉಬ್ಬುಚಿತ್ರ, ವೀರಗಲ್ಲು, ಶಿಲ್ಪ, ಗೋರಿಗಳ ರೂಪದಲ್ಲಿ ಇರುತ್ತವೆ.

# ೬. ಪ್ರಾಣಿ-ಪ್ರಪಂಚ

ರಾಜಮಹಾರಾಜರ ಕಾಲದಿಂದಲೂ ಮಧ್ಯಭಾರತ ವನ್ಯಪಶು-ಪಕ್ಷಿಗಳಿಗೆ ಹೆಸರುವಾಸಿಯಾಗಿ: ಈ ಅರಸರ, ರಾಜವೈಭವಗಳ ಜೊತೆಗೆ ಆನೆ, ಮಂಚಲ ಮತ್ತು ಜೀಪಗಳಲ್ಲಿ ನಡೆಯುತ್ತಿದ್ದ ದೊಡ್ಡಪ್ರಮಾಣದ ಶಿಕಾರದ ವೈಭವವೂ ಕಣ್ಮರೆಯಾಗಿದೆ. ಶತಮಾನಗಳ ಮೃಗಯಾ-ವಿನೋದದಿಂದ, ಅತ್ಯಮೂಲ್ಯವಾದ ಪ್ರಾಣಿಗಳ ಜಾತಿಗಳೇ ಕಣ್ಮರೆಯಾಗುತ್ತಿರುವದರಿಂದ, ಸರಕಾರ ಬೇಟೆಯನ್ನು ನಿರ್ಬಂಧಿಸಿದೆ. ಬೇಟೆಯನ್ನೆ ಅವಲಂಬಿಸಿದ ಕೆಲ ಆದಿವಾಸಿ ಜನಾಂಗಗಳನ್ನು ಹೇಗೆ ನಿಯಂತ್ರಿಸುವದು ಎಂದು ಅಧಿಕಾರಿಗಳು ಈಗ ಸಂಕಟಕ್ಕೊಳಗಾಗಿದ್ದಾರೆ. ಬೇಟೆಯಾಡುವದು ಕಾಗದದ ಮೇಲೆ ಕಾನೂನು-ಬಾಹಿರವಾದರೂ, ಕಾಡಿನಲ್ಲಿ ಅದು ನಿರಾತಂಕವಾಗಿ ಸಾಗಿದೆ.

ಪ್ರಾಣಿಪ್ರಪಂಚ ಪ್ರೀತಿಸುವವರಿಗೆ ಈ ರಾಜ್ಯ ಒಂದು ಸ್ವರ್ಗವಿದ್ದಂತೆ. ಅವುಗಳನ್ನು ನೋಡಲು ಸಂಗ್ರಹಾಲಯಕ್ಕಾಗಲಿ, ಕಾದಿಟ್ಟ ಅರಣ್ಯಕ್ಕಾಗಲಿ ಹೋಗಬೇಕೆಂದಿಲ್ಲ. ನಗರ ಬಿಟ್ಟು ಸ್ವಲ್ಪ ಹೊರಗೆ ಹೋದರೆ, ಇಲ್ಲವೆ ಚಿಕ್ಕ ಊರಿನ ಶಾಂತವಾತಾವರಣದಲ್ಲೇ ಅವುಗಳನ್ನು ತೀರ ಹತ್ತಿರದಿಂದ ನೋಡಬಹುದು. ಆದಿವಾಸಿ ಹಳ್ಳಿಗಳಂತೂ ಅವುಗಳ ಬೀಡು ಇದ್ದಂತೆ. ವಿಪುಲವಾದ ನೀರು, ಹಸಿರು-ಹುಲ್ಲು, ಚಿಗುರಿ ನಿಂತ ಗಿಡಮರಗಳಿರುವಲ್ಲಿ, ಬೇಲಿಯ ಮೇಲೆ ವಿಶ್ರಾಂತಿಸುವ ಟಿಪ್-ಟಿಪ್‌ಹಕ್ಕಿ ಪಾದಚಾರಿಗಳನ್ನು ಸ್ವಾಗತಿಸುವಂತೆ 'ಟಿವೀಽಽಕ್, ಟಿವೀಽಽಕ್' ಎಂದು ಹಾರಾಡುತ್ತ, ಒಂದು ಕಡೆಯಿಂದ ಇನ್ನೊಂದು ಕಡೆಗೆ ಹಾರುತ್ತ ವಾದ್ಯಮೇಳದಂತೆ ಮುಂದೆ ಮುಂದೆ ಹೋಗುವದು. ಮರಕುಟಕನ-ಹಕ್ಕಿ ಚುಂಚಿನಿಂದ ನೆಲ ಅಗೆದು, ಹುಳ-ಹುಪ್ಪಡಿಗಳು ಸಿಕ್ಕಾಗ, ದೇವರಿಗೆ ನೈವೇದ್ಯ ಮಾಡುವಂತೆ ಚುಂಚನ್ನು ಗಗನದತ್ತ ಎರಿಸಿ, ನಂತರ ಹುಳವನ್ನು ಹೊಟ್ಟೆಯಲ್ಲಿ ಇಳಿಬಿಡುವದು, ತನ್ನದನ್ನಾಗಿ ಮಾಡಿಕೊಂಡ ಕ್ಷೇತ್ರದಲ್ಲಿ ಇನ್ನೊಂದು ಬೇರೆ ಹಕ್ಕಿ ಪ್ರವೇಶಿಸಿದಾಗ, ಶಿರವನ್ನಲಂಕರಿಸಿದ ಗರಿ ತುರಾಯಿಯನ್ನು ಹರಡಿ ಅದನ್ನು ಎಚ್ಚರಿಸುವದು. ಮೀನುಗಾರಿಕೆಯಲ್ಲಿ

ತೊಡಗಿರಬೇಕಾದ ಕಿಂಗಫಿಶರ್ ಹಕ್ಕಿ ತನ್ನ ವಿವಿಧ ಪ್ರಕಾರದ ನೀಲವರ್ಣವನ್ನು ಪ್ರದರ್ಶಿಸುತ್ತ, ಶಕ್ತಿಯುತ ಕೊಕ್ಕಿನಲ್ಲಿ ಕಲೆಹಾಕಿದ ಕೀಟಗಳೊಂದಿಗೆ ಮರಿಗಳತ್ತ ಹಾರುವದು. ಬೆಳ್ಳಕ್ಕಿಗಳು ತಮ್ಮಲ್ಲಿ ಉಂಟಾದ ವೈಮನಸು ವಿಪರೀತಕ್ಕೆ ಹೋಗಿ ಕಾದಾಟದ ಕಣಕ್ಕಿಳಿಯುತ್ತವೆ. ಚುಂಚುಗಳಿಂದ ಬಡಿದುಕೊಳ್ಳುತ್ತ, ಕಾದಾಡಿ ನಿರ್ಣಾಯಕರು ಯಾರೂ ಇಲ್ಲದ್ದರಿಂದ ಗಗನದತ್ತ ಹಾರುತ್ತವೆ.

ನಮಗೆ ಚಿರಪರಿಚಿತವಿರುವ ಪ್ರಾಣಿವರ್ಗವೂ ಈ ರಾಜ್ಯದಲ್ಲಿ ಭಿನ್ನವಾಗಿ ವರ್ತಿಸುವಂತೆ ಭಾಸವಾಗುತ್ತದೆ, ಬಾರದ ಅತಿಥಿಗಳ ಹಾದಿ ನೋಡುತ್ತ, ಅವರಿಗಾಗಿ ಸ್ವಾಗತಗೀತ ಹಾಡುತ್ತ, ಅವರ ಹೆಸರಿನಲ್ಲೇ ಉದರನಿರ್ವಹಣೆ ಸಾಗಿಸುವ ಕಾಗೆಗಳು, ಯಾರ ಕೈಗೂ ಎಟುಕದಂತಹ ಎತ್ತರವಾದ ಮರದ ಟೊಂಗೆಯ ಮೇಲೆ ಗೂಡು ಕಟ್ಟಿ, ಮೊಟ್ಟೆ ಇಟ್ಟು, ಕಾವು ಕೊಟ್ಟು, ಮರಿಗಳ ಲಾಲನೆ-ಪಾಲನೆಯಲ್ಲೇ ಹೆಚ್ಚಿನ ಸಮಯ ಕಳೆಯುವವು. ವಸಂತಕಾಲದಲ್ಲಿ ಹಾಡಿ ಪ್ರಿಯತಮೆಯನ್ನು ಬರಮಾಡಿಕೊಳ್ಳಬೇಕಾದ ಕೋಗಿಲೆಗಳು, ಮಳೆಯಿಂದ ತಪತಪ ತೊಯ್ದರೂ ಹಾಡುವದನ್ನು ಮಾತ್ರ ಕಡಿಮೆ ಮಾಡಲಿಲ್ಲ. ಆ ಹವೆಯಲ್ಲಿ, ಆ ಗಾಳಿಯಲ್ಲೇ ಪ್ರಣಯದ ಸೆಳೆತವಿದ್ದಿರಬೇಕು, ಮನೆ ಅಂಗಡಿಗಳಲ್ಲಿ ಇಟ್ಟ ಕಾಳು-ಕಡಿಗಳನ್ನು ಕದ್ದು ತಿಂದು, ಸಿಕ್ಕ ಕಂಟಿಗಳಲ್ಲಿ ಗೂಡನ್ನು ಕಟ್ಟುವ ಗುಬ್ಬಚ್ಚಿಗಳು ಇಲ್ಲಿ ತಮ್ಮ ಸಂಸಾರಿಕ ಜೀವನದತ್ತ ಹೆಚ್ಚಿನ ಲಕ್ಷ್ಯ ಪೂರೈಸುತ್ತವೆ. ಕಳ್ಳತನಕ್ಕೆ ಮನಸ್ಸು ಮಾಡದೇ, ಹೊಲದಲ್ಲಿ ಬೆಳೆದು ನಿಂತ ನೈಸರ್ಗಿಕ ಕಣಜದಿಂದಲೇ ಕಾಳು ಹೆಕ್ಕಿ ಉದರಪೋಷಣೆ ಮಾಡಿಕೊಳ್ಳುವವು. ಹಸಿವು ಹಿಂಗಿದ ನಂತರ ಶೃಂಗಾರಚೇಷ್ಟೆಯಲ್ಲಿ ಮೈಮರೆಯುವವು. ತಾವು ಪಾಲಕರಾಗುವ ಶುಭಸೂಚನೆ ಕಂಡ ಕೂಡಲೇ ಗೂಡು ಕಟ್ಟುವ ಸಿದ್ಧತೆ ನಡೆಸುವವು. ಆವಾರದಲ್ಲಿ ಇರುವ ಮರಗಳನ್ನೆಲ್ಲ ಸಂಶೋಧಿಸಿ ಯೋಗ್ಯವಾದ ಪೊಟರೆಯಲ್ಲಿ ಗೂಡಿನ ಸಾಮುಗ್ರಿ ಜೋಡಿಸಲಾರಂಭಿಸುವವು. ಕೊಕ್ಕಿನಿಂದ ಮಣ್ಣನ್ನು ಅಗೆದು ಬೇರುಸಹಿತವಾಗಿ ಹುಲ್ಲನ್ನು ಕಿತ್ತು, ನೆಲಕ್ಕೆ ಅದನ್ನು ಝಾಡಿಸಿ ಮಣ್ಣನ್ನು ತೆಗೆದು, ತಂದು ಗೂಡಿಗೆ ನೆಲೆಗಟ್ಟು ಹಾಕುವವು, ನಂತರ ಬಾಳೆಗಿಡದ ಒಣನಾರನ್ನು ಉದ್ದಕ್ಕೆ ಸೀಳಿ, ನೆಲದ ಮೇಲಿಟ್ಟು ಸುರುಳಿಮಾಡಿ, ಗೂಡಿಗೆ ಅದನ್ನು ಸಾಗಿಸಿ, ಮುಂಬರುವ ಪೀಳಿಗೆಗೆ ಜಾಳಿಗೆಯ ತೊಟ್ಟಿಲು ನಿರ್ಮಿಸುವವು. ಗಾಳಿಯಲ್ಲಿ ಹಾರುವ ಬೂರಲ-ಹತ್ತಿಯನ್ನು

ಹಿಡಿದು ತಂದು, ಮೆತ್ತಗಿನ ಗಾದಿಯನ್ನು ತಯಾರಿಸುವವು. ಹತ್ತಿಗೆ ಕೊಳೆ, ಕೆಸರು, ದುರ್ವಾಸನೆಗಳಿದ್ದರೆ, ಅದನ್ನು ನೆಲಕ್ಕೆ ಬಡಿದು ಸ್ವಚ್ಛಗೊಳಿಸುವಷ್ಟು ಎಚ್ಚರಿಕೆ ಮತ್ತು ತಾಪತ್ರಯಗಳನ್ನು ವಹಿಸುವವು. ಇಷ್ಟೊಂದು ಶ್ರಮವನ್ನು ನಮ್ಮ ಬೆಂಗಳೂರಿನ ಗುಬ್ಬಕ್ಕಿಗಳು ಸಾಧಾರಣವಾಗಿ ವಹಿಸುವದಿಲ್ಲ!

ಮಧ್ಯಪ್ರದೇಶದ ಸಾಕುಪ್ರಾಣಿಗಳೂ ಆಫ್ರಿಕೆಯ ಸಫಾರಿ ಪ್ರಾಣಿಗಳಂತೆ ವರ್ತಿಸುತ್ತಿರುತ್ತವೆ. ಮಡಿವಾಳನ ಬಟ್ಟೆ, ಉಪ್ಪಾರನ ಕಲ್ಲು, ಗಾರೆಯವನ ಗೋಜ್ಜು ಹೊತ್ತು ಮೆತ್ತಗಾದ ಕತ್ತೆಗಳು, ಬಿಡುವಿನ ವೇಳೆಯನ್ನು, ಹಗ್ಗದಿಂದ ಬಿಗಿದ ಕಾಲುಗಳನ್ನು ಎಳೆಯುತ್ತ ರಸ್ತೆ ಅಂಚಿನಲ್ಲಿ ಸಿಕ್ಕಿದ್ದನ್ನು ತಿನ್ನುತ್ತ ತಿರುಗುವ ಬದಲಾಗಿ, ಸ್ವೇಚ್ಛೆಯಿಂದ ತಿರುಗಾಡುತ್ತಿವೆ; ತಿಂದುಂಡು ಮೈ ಕೊಬ್ಬಿಸಿ ಸಂಗಾತಿಯನ್ನು ಹುಡುಕಿಕೊಂಡು ಎಲ್ಲೆಡೆ ಅಲೆಯುತ್ತಿರುತ್ತವೆ. ಇರುವ ಒಬ್ಬಳೇ ಸಂಗಾತಿಯ ಬಗ್ಗೆ ಗಾರ್ದಭ-ಪ್ರೇಮಿಗಳಲ್ಲಿ ಕಲಹವೇಳುವದು ಸ್ವಾಭಾವಿಕ. ಅಂತಹ ಸಮಯದಲ್ಲಿ ಕಚ್ಚಾಡಿ, ಚೀರಾಡಿ, ನಾಗಾಲೋಟ ಹಾಕಿ, ಓಡುವಾಗ ಕಾಡು-ಝೀಬ್ರಾಗಳ ನೆನಪಾಗುತ್ತದೆ. ಆಡುಗಳೂ, ಕಾಡಿನಲ್ಲಿ ಇದ್ದ ನೆಂಟರಂತೆ, ಮನೆ, ಮಠವೆಂದು ತಲೆಕೆಡಿಸಿಕೊಳ್ಳದೇ ಬಿಟ್ಟಿಬಸವನಂತೆ ಊರೆಲ್ಲ ಅಲೆದಾಡಿ ಸಿಕ್ಕಿದ್ದು ತಿಂದು, ಸಿಕ್ಕಲ್ಲಿ ವಿರಮಿಸುವವು. ದನಕರು, ಸೂಕರವರ್ಗ, ಕುಕ್ಕುಟಗಳು, ಕಪಿವಂಶ ಕೂಡ, ಉದರನಿರ್ವಹಣೆಗೆ ಹೆಚ್ಚು ಶ್ರಮಿಸಬೇಕಾಗಿರದ್ದರಿಂದ ಹೆಚ್ಚು ಸಮಯವನ್ನು ಆಟ, ಕೂಟ, ತಮಾಷೆಗಳಲ್ಲಿ ಕಳೆಯುತ್ತವೆ.

ಪ್ರಾಣಿಗಳನ್ನು ಗೌರವಿಸುವದಕ್ಕಾಗಿಯೇ ಮೀಸಲಿಟ್ಟ ಹಬ್ಬಗಳಿಗೆ ಈ ರಾಜ್ಯದಲ್ಲಿ ಏನೂ ಕೊರತೆಯಿಲ್ಲ. ಪೋಲಾ, ಎತ್ತುಗಳಿಗಾಗಿಯೇ ಮೀಸಲಿಟ್ಟ ಹಬ್ಬ. ಹೆಚ್ಚಿನ ಊರುಗಳಲ್ಲಿ ಇದಕ್ಕಾಗಿಯೇ ಮೈದಾನ ಒಂದನ್ನು ಮೀಸಲಿಟ್ಟು ಪೋಲಾ-ಬಯಲು ಎನ್ನುವದುಂಟು. ಭಾದೋನ (ಆಗಸ್ಟ) ತಿಂಗಳಿನಲ್ಲಿ ಆಚರಿಸುವ ಈ ಹಬ್ಬಕ್ಕೆ ಹೋಳಿ-ಹಬ್ಬದಲ್ಲಿಯಂತೆ ಬಣ್ಣಗಳನ್ನು ಮಾರುವರು. ಎತ್ತುಗಳ ಕೋಡುಗಳಿಗೆ ಬಣ್ಣ ಸವರಿ, ಕವಚ ಹಾಕಿ, ಬಾಸಿಂಗದಂತಹ ಎತ್ತರವಾದ ತುರಾಯಿಗಳನ್ನು ಕಟ್ಟುವರು. ಕೊರಳಿಗೆ ಕವಡೆ, ಮಣಿಗಳ ಸರ, ಮೈಮೇಲೆ ವಿವಿಧ ನಕ್ಷೆಗಳ ಬಟ್ಟೆ ಹೊದಿಸಿ ಅಲಂಕರಿಸುವರು. ಕೊರಳಿಗೆ ಜೆಳ್ಳಿಯ ಹಾಬು, ಬಾಲಕ್ಕೆ ಕೈಗಡಿಯಾರ ಕಟ್ಟುವವರೂ ಉಂಟು, ಪರಂಪರೆ

ಯಂತೆ ಸೆರೆಕುಡಿದು, ವಾದ್ಯಮೇಳದೊಂದಿಗೆ ಊರೆಲ್ಲ ಮೆರವಣಿಗೆ ತೆಗೆದು ಬಯಲಿಗೆ ಕರೆದುತರುವರು. ಊರಿನ ಎಲ್ಲ ಮೂಲೆಗಳಿಂದ ಎತ್ತುಗಳು ಬರಲಾರಂಭಿಸುವದರಿಂದ ಜನರ ಸಡಗರ ಹೇಳತೀರದು. ವಾದ್ಯಗಳು ಜೋರಾಗಿ ಮೊಳಗಿದಾಗ ಹಾಡುಗಳೊಂದಿಗೆ ಆವೇಶದ ನೃತ್ಯವೂ ಪ್ರಾರಂಭವಾಗುವದು. ಜನರ ಮೆಚ್ಚಿಗೆ ಪಡೆದ ನರ್ತಕರಿಗೆ, ನೋಟುಗಳಿಂದ ಎತ್ತುಗಳ ದೃಷ್ಟಿ ತೆಗೆದು ಆ ಹಣ ಕೊಡುವದುಂಟು. ಎಲ್ಲ ಮೇಳಗಳು ಒಂದಾದಾಗ ಎತ್ತರದಲ್ಲಿ ಕಟ್ಟಿದ ಹಗ್ಗವೊಂದನ್ನು ಮೇಲೆ ಕೆಳಗೆ ಮಾಡಲಾರಂಭಿಸುತ್ತಾರೆ. ಆಟದಲ್ಲಿ ಭಾಗವಹಿಸುವವರೆಲ್ಲ ಜಿಗಿದು ಅದಕ್ಕೆ ಕಟ್ಟಿದ ತಿಂಡಿಗಳನ್ನು ಎಳೆದು ತಿನ್ನುವರು, ಮಾವಿನ ಎಲೆಗಳನ್ನು ಪ್ರಸಾದವೆಂದು ಒಯ್ಯುತ್ತಾರೆ. ಅಲ್ಲಿಂದ ತಮ್ಮ ಇಷ್ಟ ದೇವರ ದರ್ಶನಕ್ಕೆ ಹೋಗಿ ಪೂಜಿಸಿ ಹೆಸರುಬೇಳೆ-ಸೌತೆಕಾಯಿ ಕೋಸಂಬರಿ ಯನ್ನು ಪ್ರಸಾದವೆಂದು ಹಂಚುವರು. ಹಿಂತಿರುಗಿ ಬರುವಾಗ ಮೆರವಣಿಗೆಯಲ್ಲಿ (ಕಾಟೇರಿ ಜುಲೂಸ), 'ನಾರಬೇರ' ಎಂಬ ಕಾಡುಕಂಟಿಯನ್ನು ಮನೆಗೆ ಹೊತ್ತು ತರುವರು. ಮರುದಿನ ಚಿಕ್ಕಮಕ್ಕಳೂ ತಮ್ಮ ಗೊಂಬೆ-ಬಸವನೊಂದಿಗೆ ತಾನಾ-ಪೋಲಾ (ಚಿಕ್ಕ ಪೋಲಾ) ಹಬ್ಬವನ್ನು ಆಚರಿಸುವರು.

ದೀಪಾವಳಿಯ ಸಮಯದಲ್ಲಿ ದನಕರುಗಳನ್ನು ಪೂಜಿಸುವ ಹಬ್ಬವನ್ನು ಆಚರಿಸುವರು. ಆಗ ಎತ್ತುಗಳನ್ನು ಬಿಟ್ಟು ಉಳಿದ ದನಗಳಿಗೆ ಮೈ ಎಲ್ಲ ಬಣ್ಣ ಬಳಿದು, ಕೋಡಿಗೆ, ಕೊರಳಿಗೆ ನವಿಲುಗರಿಗಳ ಹಾರ ಹಾಕಿ ಅವುಗಳೊಂದಿಗೆ ಊರಲ್ಲಿ ಮೆರವಣಿಗೆ ತೆಗೆದು ತಮ್ಮ ಪರಿಚಿತರಲ್ಲೆಲ್ಲ ನರ್ತನವನ್ನು ಪ್ರದರ್ಶಿಸಿ ಬಕ್ಷಿಸ ಗಿಟ್ಟಿಸುವರು. ಚಳಿಗಾಲ ಕಳೆದ ನಂತರ ಹರೆಯದ ಎತ್ತುಗಳನ್ನು ಹಗುರವಾದ ಚಕಡಿ(ಚಕಡಾ)ಗಳಿಗೆ ಕಟ್ಟಿ ಅವುಗಳ ಓಟದ ಸ್ಪರ್ಧೆ ನಡೆಸು ವರು. ಜನರು ತಮ್ಮ ಕೆಲಸಗಳನ್ನೆಲ್ಲ ಬದಿಗಿಟ್ಟು ಚಕಡಾ ಓಟದಲ್ಲಿ ಭಾಗ ವಹಿಸಲು ಮತ್ತು ಪ್ರೇಕ್ಷಕರಾಗಿ ಭಾಗವಹಿಸಲು ಧಾವಿಸಿ ಬರುತ್ತಾರೆ. ಈ ಸ್ಪರ್ಧೆಯಲ್ಲಿ ಜಯಶಾಲಿಯಾದವರಿಗೆ ಸ್ಥಳೀಯ ಕೃಷಿಕ-ಸಮಾಜದಲ್ಲಿ ಹೆಚ್ಚಿನ ಪ್ರತಿಷ್ಠೆ ಸಲ್ಲುವದರಿಂದ, ಬಹಳ ಉತ್ಸಾಹದಿಂದ ಭಾಗವಹಿಸುತ್ತಾರೆ. ದೈನಂದಿನ ಜೀವನದಲ್ಲೂ ಬೇರೆ ಪ್ರದೇಶಗಳಿಗಿಂತ, ಹೆಚ್ಚು ಪ್ರೀತಿ, ವಿಶ್ವಾಸ ತೋರಿಸು ತ್ತಾರೆ. ಹಲವಾರು ಬಸ್ತರದ ಆದಿವಾಸಿ ಪಂಗಡಗಳಲ್ಲಿ ದನಕರುಗಳನ್ನು ಸಾಕಿದರೂ ಅವುಗಳನ್ನು ಒಂದೇ ಹೊತ್ತು ಹಿಂಡುವರು. ಸ್ವಂತ ಬಳಕೆಗಾಗಿ

ಒಂದು ತೊಟ್ಟು ಕೂಡ ಹೆಚ್ಚು ಹಿಂಡದೇ, ಉಳಿದ ಹಾಲನ್ನೆಲ್ಲ ಕರುವಿಗಾಗಿ ಬಿಡುವರು. ಅದೆಷ್ಟು ವಿಶಾಲಹೃದಯ ಅವರದು!

ವಿಂಧ್ಯ, ಸಾತಪುಡಾ ಮತ್ತು ಬಸ್ತರದ ಪರ್ವತಾವಳಿಗಳಲ್ಲಿ ದಟ್ಟವಾದ ಕಾಡುಗಳು ಇದ್ದುದರಿಂದ ಅಲ್ಲಿ ವನ್ಯಪ್ರಾಣಿಗಳ ಆಗರವೇ ಆಗಿದೆ. ಕರ್ನಾಟಕದ ಪಕ್ಷಿ-ಪ್ರೇಮಿಗಳಿಗೆ ರಂಗನತಿಟ್ಟು, ವನ್ಯ ಪಶುಗಳಿಗಾಗಿ ಬಂಡೀಪುರ, ದಾಂಡೇಲಿಗಳು ಹೆಸರಾದಂತೆ ಮಧ್ಯಪ್ರದೇಶದಲ್ಲಿ ಪ್ರಾಣಿಸಂಪತ್ತಿಗಾಗಿ ಕಾದಿಟ್ಟ ಅರಣ್ಯಗಳಿವೆ. ಗ್ವಾಲೇರದ ಹತ್ತಿರ ಇರುವ ಶಿವಪುರಿ, ಮಾಂಡ್ಲಾದ ಹತ್ತಿರ ಕಾನ್ಹಾ ಮತ್ತು ಸಾತ್ನಾದ ಬಳಿಯ ಬಾಯೋಹಾರಿ ರಾಷ್ಟ್ರೀಯ-ಪಾರ್ಕುಗಳು ಭಾರತೀಯ ಮತ್ತು ವಿದೇಶಿ-ಪ್ರವಾಸಿಗಳನ್ನು ಹೆಚ್ಚೆಚ್ಚಾಗಿ ಆಕರ್ಷಿಸುತ್ತಿವೆ. ಆದರೆ ದುರ್ದೈವದಿಂದ ಉಳಿದೆಲ್ಲ ಪ್ರವಾಸಿ-ಸ್ಥಳಗಳಂತೆ ಈ ನೈಸರ್ಗಿಕ ಪ್ರಾಣಿಸಂಗ್ರಹಾಲಯಗಳೂ ಕೇವಲ ಧನಿಕರ ಸೊತ್ತಾಗಿವೆ, ಬರುವವರೆಲ್ಲ ಮಹಾರಾಜರೆಂದು ಭಾವಿಸಿದ್ದರಿಂದಲೋ ಏನೋ ವಾಹನಸೌಕರ್ಯ, ವಸತಿ ಸೌಕರ್ಯ, ಊಟ-ಉಪಚಾರದ ವ್ಯವಸ್ಥೆ, ಕಾಡಿನಲ್ಲಿ ಓಡಾಡುವ ಏರ್ಪಾಡುಗಳೆಲ್ಲ ಮಧ್ಯಮವರ್ಗದವರಿಗೆ ಎಟಕುವಂತಿಲ್ಲ. ಪಶು-ಪಕ್ಷಿಗಳ ಛಾಯಾಚಿತ್ರಗಳನ್ನು ತೆಗೆಯಲು ಬೇರೆಯಾಗಿ ಹಣ ಸುರಿಯಬೇಕು. ಆದರೆ ಈ ರಾಜ್ಯದಲ್ಲಿ ಪ್ರಾಣಿಗಳು ಕೇವಲ ರಾಷ್ಟ್ರೀಯ-ಪಾರ್ಕುಗಳಿಗಷ್ಟೇ ಸೀಮಿತವಾಗದೇ ಬೇರೆ ಕಡೆಯಲ್ಲೂ ನೋಡಸಿಗುವದರಿಂದ, ಸ್ವಲ್ಪ ತಾಳ್ಮೆ ಮತ್ತು ಕಷ್ಟಸಹಿಷ್ಣುತೆಗಳಿದ್ದರೆ ಅವುಗಳನ್ನು ಸ್ವಾಭಾವಿಕ ಪರಿಸರದಲ್ಲೇ ಕಾಣಬಹುದು. ಬಾರಸೂರ್, ಮೊಡಂಸಾರ್, ಭೋಟೆಡೊಂಗರ, ಛಾಂಕಾರಿ, ಪಚಮಟಿ, ಮಾಂಡು, ಭೀಮ-ಬೆಟಕಾ ಮೊದಲಾದ ಸ್ಥಳಗಳು ಪ್ರಾಣಿಗಳ ನಿರೀಕ್ಷಣೆಗೆ ಯೋಗ್ಯವಾದವುಗಳು.

ಈ ಕಾಡುಗಳಲ್ಲಿ ಬೇಟೆಗಾರನ ಬದಲಾಗಿ, ಸೌಂದರ್ಯೋಪಾಸಕನಾಗಿ, ಪ್ರಾಣಿಗಳ ಸಹಜೀವಿಯಾಗಿ, ಮಾರಿಯಾ, ಮುರಿಯಾ, ಭಿಲ್ಲರಂತೆ ಅಲೆದರೆ ಬೇರೊಂದು ಪ್ರಪಂಚದ ಪರಿಚಯವಾಗುವದು. ಎಲ್ಲಕ್ಕೂ ಮೊದಲು ಹೆಣ್ಣಿಗೆ ಸಹಜವಾದ ಚಂಚಲಮತಿಯರಾದ ಪಾತರಗಿತ್ತಿಯರು ಹಾರುತ್ತ ಜಿಗಿಯುತ್ತ ಸ್ವಾಗತಕೋರುವವು. ಇವೆಲ್ಲ ಕೈಗೆ ಸಿಗದ ಯಕ್ಷಿಣಿಯರಂತೆ ದೂರದಿಂದ ನೋಡಿಯೇ ಸಂತೋಷಪಡಬೇಕು. ಮುಟ್ಟಿಹೋದರೆ ಮುದುಡಿಯಾಗಿ ರಜಪೂತ-ರಮಣಿಯರಂತೆ ಆತ್ಮಹತ್ಯೆ ಮಾಡಿಕೊಳ್ಳುವವು. ಮಹಾರಾಷ್ಟ್ರ

ವಾಗಲಿ, ಮಧ್ಯಪ್ರದೇಶವಿರಲಿ ನಮಗೇನಾಗಬೇಕಾಗಿದೆ? ಎಂದು ಮಂಗಗಳೆಲ್ಲ ಚೇಷ್ಟೆಯಲ್ಲಿ ಮೈಮರೆತಿರುತ್ತವೆ. ಸಮೃದ್ಧವಾದ ಕಾಡಿನಲ್ಲಿ ಇದ್ದ ಸಸ್ಯಾಹಾರ ಸಾಲದೆಂಬಂತೆ ರೇಶಿಮೆ-ಹುಳಗಳು ಬೆನ್ನುಮುರಿದು ದುಡಿದು ಕಟ್ಟಿದ ಗೂಡು ಗಳನ್ನು ಹಾಳುಗೆಡವಿ ಒಳಗಿನ ಹುಳಗಳನ್ನು ತಿಂದು ತೇಗುತ್ತವೆ. ಜೇನ್ನೊಣ ಗಳು, ಭ್ರಮರಗಳು ಈ ಕಾಡಿನ ಸುಖ ಎಷ್ಟು ದಿನಗಳದ್ದೋ ಎಂದು ಗೊಣ ಗುತ್ತ ದಿನಚರಿ ನಡೆಸಿರುತ್ತವೆ. ಹತ್ತಿರದ ಪೊದೆಯೊಳಗೆ ಮರಿಗೆ ಮೊಲೆ ಯುಣಿಸುತ್ತಿರುವ ಮೊಲದಮ್ಮ ಈ ಆಗಂತುಕನೆಲ್ಲಿ ತನ್ನ ಮೇಲೆ ದಾಳಿ ಮಾಡುವನೋ ಎಂದು ಕಾತರತೆಯಿಂದ ಹಾದುಹೋಗುವವನನ್ನು ಕಾಯು ತ್ತಿರುತ್ತಾಳೆ. ತನ್ನ ಸ್ವಸ್ಥಾನಕ್ಕೆ ಹಿಂದಿರುಗುವ ಮೊದಲೇ ಬೆಳಕುಹರಿದಿದ್ದರಿಂದ ಹಿಂಡೊಂದರಲ್ಲಿ ಅವಿತು ಕುಳಿತ ನರಿಯೊಂದು ಮುಂದೆ ಎಂದೂ ಇಂಥ ಪರಿಸ್ಥಿತಿ ತಂದುಕೊಳ್ಳಬಾರದೆಂದು ಪರಿತಪಿಸುತ್ತ ಅಡಗಿಕೊಂಡಿರುತ್ತದೆ. ದೂರದ ಮರ ಒಂದಕ್ಕೆ ಸುತ್ತು ಹಾಕಿದ ಹೆಬ್ಬಾವು, ಬೇಟೆ, ರುಚಿಗೆ ಚೆನ್ನಾಗಿದೆಯೆಂದು ಪೂರ್ತಿ ನುಂಗಬಾರದಾಗಿತ್ತು ಎಂದು ಹೊಟ್ಟೆ ಕರಗಿಸಿಕೊಳ್ಳುವದರಲ್ಲಿ ಮೈ ಮರೆತಿರುತ್ತದೆ. “ಈ ಕ್ಷುದ್ರಮಾನವನು ನಮ್ಮ ವಿಷವನ್ನೂ ಲೆಕ್ಕಿಸದೇ ವಂಶಧ್ವಂಸ ನಡೆಸಿದ್ದಾನಲ್ಲ” ಎಂದು ವಿಸ್ಮಯಪಡುತ್ತ ಮುಂದೇನು ಗತಿ ಯೆಂದು ಹಾವುಗಳು ವಿಚಾರವಿನಿಮಯಕ್ಕೆ ತೊಡಗಿದ್ದವು.

ರಾತ್ರೆಯಿಡೀ ಕಾಡನ್ನು ಅಲೆದು ಬಂದ ಕಾಡುಹಂದಿ ಅರೆನಿದ್ರೆಯಲ್ಲಿ ಹೂಂಕರಿಸುತ್ತಿದ್ದಾಗ ಮರಿಗಳೆಲ್ಲ ಬಿಡದೇ ಹಾಲು ಹೀರುತ್ತವೆ. ಹಗಲಿನಲ್ಲಿ ಅಲೆದು ಹುಲಿ-ಚಿರ್ಚುಗಳಿಂದ ಸಂರಕ್ಷಿಸಿಕೊಳ್ಳಬೇಕೇ ಅಥವಾ ನಿಶಾಚರರಾಗಿ ಮಾನವನಿಂದ ರಕ್ಷಿಸಿಕೊಳ್ಳಬೇಕೇ ಎಂದು ತಿಳಿಯದ ಕಾಡುಕೋಣಗಳು ಹಚ್ಚ ಹಸಿರು ಹುಲ್ಲನ್ನು ಮೇಯುತ್ತ ತಮ್ಮಷ್ಟಕ್ಕೆ ಇರುತ್ತವೆ. ವಂಶವೇ ಭರದಿಂದ ನಿರ್ನಾಮವಾಗುತ್ತಿರುವ ಕಪ್ಪು-ಜಿಂಕೆ, ನೀಲಗಾಯಿಗಳು, ತಮ್ಮ ಆಕರ್ಷಕ ಬಣ್ಣಗಳನ್ನು ಬದಲಿಸಿಕೊಳ್ಳಲು ಅಸಹಾಯರಾಗಿ ಅಪರೂಪಕ್ಕೆ ಸುಳಿದು ಮಾಯವಾಗುತ್ತವೆ. ಒಂದು ಕಾಲಕ್ಕೆ ಶ್ರೀರಾಮನು ತನ್ನ ಮುಳ್ಳುಗಳನ್ನೇ ಬಾಣಗಳನ್ನಾಗಿ ಬಳಸಿರಬಹುದೇ ಎಂದು ಮುಳ್ಳುಹಂದಿಯೊಂದು ಅರೆನಿದ್ರೆ ಯಲ್ಲಿ ಕನವರಿಸುತ್ತದೆ. ಬೇಟೆಯಾಡಿ ದಣಿದ ಚಿರತೆ ಮರದಲ್ಲಿ ವಿರಮಿಸಿದರೆ, ಬಿಟ್ಟು ಬಂದ ಬೇಟೆಯನ್ನು ತಿರುಗಿ ಎಂದು ತಿಂದೇನೆಂದು ಹುಲಿರಾಯ

ಗವಿಯಲ್ಲಿ ಜೊಲ್ಲುಸುರಿಸುತ್ತಿರುವ. ಬಿಟ್ಟು ಬಂದ ಬೇಟೆಯನ್ನೇ ತನ್ನ ಆಮಿಷ ಮಾಡಿ ತನ್ನನ್ನೇ ಬೇಟೆಯಾಡಲು ದುಷ್ಟಮಾನವ ಉಜ್ಜುಗಿಸುತ್ತಿದ್ದಾನೆಂದು ಅವನಿಗೇನು ಗೊತ್ತು? ತೋಳ, ಕತ್ತೆಕಿರುಬ, ಕರಡಿಗಳು ಹುಲಿರಾಯನ ಸ್ಥಿತಿಯೇ ಹೀಗಾದರೆ ತಮಗೇನು ಕಾದಿದೆಯೋ ಎಂದು ಚಿಂತಿಸುತ್ತಿರುತ್ತವೆ. ಇಂಥ ಯಾವ ಅಳುಕಿಗೂ ಆಸ್ಪದ ಕೊಡದ ಹಕ್ಕಿಗಳು ಕಾಡಿಗೆ ಜೀವಕಳೆ ತುಂಬುತ್ತವೆ. ಉದ್ದ ಚುಂಚಿನ ಚಿಕ್ಕ ಹಕ್ಕಿಗಳು, ಚಿಟ್ಟೆಗಳಂತೆ ಹೂವಿನಿಂದ ಹೂವಿಗೆ ಹಾರಿ ಮಧುಪಾನದಲ್ಲಿ ತೊಡಗಿದರೆ, ಹಾಡುವ ಹಕ್ಕಿಗಳು ತಮ್ಮ ಕಂಠವನ್ನು ಶ್ರುತಿಗೊಳಿಸುತ್ತಲೇ ಇರುತ್ತವೆ. ನವಿಲುಗಳು ವರ್ಷಾನೃತ್ಯದ ರಂಗತಾಲೀಮು ನಡೆಸಿದರೆ, ಗಿಳಿಗಳು, ಮೈನಾಗಳು ಮಾನವರನ್ನು ಬೇಕಾದಂತೆ ಅನುಕರಿಸಬಲ್ಲೆವೆಂದು ಜಂಬದಿಂದ ಹಾರಾಡುತ್ತವೆ. ಸರೋವರದಲ್ಲಿ ನೀರನಾಯಿ ನೀರಾಟಕ್ಕೆ ಇಳಿದರೆ, ಬೆಳ್ಳಕ್ಕಿ, ಹಂಸಗಳು ನೀರಿನ ಹುಳಗಳ ಬೇಟೆಯಾಡಿ ಮರಗಳಿಗೆ ಹಿಂತಿರುಗುತ್ತವೆ. ಇಂಥ ಸ್ಥಳಗಳಿಗೆ ಮಾನವನು ಕೋವಿಯ ಬದಲಾಗಿ ಕೆಮರಾದೊಂದಿಗೆ ಹೋಗಿ ಶೂಟ್‌ಮಾಡಲು ಕಲಿತಾಗ ಮಾತ್ರ ಪ್ರಾಣಿಪ್ರಪಂಚದೊಂದಿಗೆ ಸಹಜೀವನದ ಸಮತಾವಾದ ಸಾಧ್ಯ.

## ೪. ಭೀಮವೇಡಕಾ

ಕ್ರಿಸ್ತಶಕಪೂರ್ವ ಇಪ್ಪತ್ತೈದರಿಂದ ಐದು ಸಾವಿರ ವರ್ಷಗಳ ವರೆಗೆ, ಮಧ್ಯಭಾರತದಲ್ಲಿ ಆದಿಮಾನವನು ನೆಲೆಯಾಗಿ ನಿಂತ ಮೂರುನೂರಕ್ಕಿಂತ ಹೆಚ್ಚು ಶಿಲ್ಪಾಶ್ರಯಗಳನ್ನು ಮಧ್ಯಭಾರತದಲ್ಲಿ ಕಂಡುಹಿಡಿಯಲಾಗಿದೆ. ಮತ್ತು ಹೆಚ್ಚಿನವುಗಳಲ್ಲಿ ಆದಿಮಾನವನು ಬಿಡಿಸಿದ ವರ್ಣಚಿತ್ರಗಳಿವೆ ಎಂದರೆ ಉತ್ಸುಕತೆ ಕೆಳದೇ ಇದ್ದೀತೇ? ನಂತರದ ದಿನಗಳಲ್ಲಿ ಆ ಚಿತ್ರಗಳಲ್ಲಿ ಇರುವ ರೇಖಾವೈಖರಿ, ಬಣ್ಣಗಳ ಹೊಂದಾಣಿಕೆ, ತೀರ ಸುಲಭವೆಂದು ತೋರುವ ಚಿತ್ರಗಳಲ್ಲೂ ತುಂಬಿದ ಜೀವಕಳೆಯ ಬಗ್ಗೆ ವೃತ್ತಪತ್ರಿಕೆಗಳಲ್ಲಿ ಓದಿದಾಗ

ಲಂತೂ, ಎಂದಾದರೊಮ್ಮೆ ಸಾಧ್ಯವಾದಾಗ ಅವನ್ನು ನೋಡಿ ಆನಂದಿಸ ಬೇಕೆಂದು ಅನಿಸಿದ್ದು ಸಹಜ. ಮಧ್ಯಪ್ರದೇಶದಲ್ಲಿ ಕೆಲ ತಿಂಗಳು ಕಳೆದ ಮೇಲೆ ಭೆಟ್ಟಿಯಾದ ಸುಶಿಕ್ಷಿತರಿಗೆಲ್ಲ ಇವುಗಳ ಬಗ್ಗೆ ಏನೂ ಗೊತ್ತಿಲ್ಲದ್ದು ನೋಡಿ ನಿರಾಶೆಯಾಯಿತು. ಹಿಂದೊಮ್ಮೆ ಶಿವರಾಮ ಕಾರಂತರು ಖಜುರಾಹೋ ದೇವಾಲಯಗಳನ್ನು ನೋಡಹೋದಾಗ ಸ್ಥಾನೀಯ ಜನರಿಗೆ ಅದೆಲ್ಲಿ ಇದೆ ಎಂದು ವಿವರಿಸಲಾಗದ್ದರಿಂದ ಹಿಂತಿರುಗಿ ಬರಬೇಕಾದ ಸನ್ನಿವೇಶಗಳನು ಜ್ಞಾಪಿಸಿಕೊಳ್ಳುವಂತಾಯಿತು. ಇಂದಿಗೂ ಆ ಪರಿಸ್ಥಿತಿಯೇನು ಸುಧಾರಿಸಿಲ್ಲ. ಪರಿಚಯಸ್ಥರಲ್ಲಿ ಸ್ನಾತಕೋತ್ತರ ಪದವಿ ಪಡೆದು ಶಿಕ್ಷಣ-ಖಾತೆಯಲ್ಲಿದ್ದ ಪತಿ, ಪದವಿಧರೆ ಪತ್ನಿ, ಯುವಕರು ಇಡೀ ಆಯುಷ್ಯವನ್ನು ಅದೇ ರಾಜ್ಯದಲ್ಲಿ ಕಳೆದವರು, ಸಾಂಚಿ ಯಾವ ದಿಕ್ಕಿನಲ್ಲಿದೆ? ಖಜುರಾಹೋ ತಮ್ಮ ರಾಜ್ಯದಲ್ಲೇ ಇದೆಯೇ ಎಂದು ಕೇಳಿದ ಪ್ರಶ್ನೆಗೆ ನಗಬೇಕೋ ಅಳಬೇಕೋ ನನಗೆ ತಿಳಿಯ ದಾಯಿತು. ಕೊನೆಗೊಮ್ಮೆ ಈ ಶಿಲ್ಪಾಶ್ರಯಗಳು ಬೇತುಲ-ಭೋಪಾಲ ರಾಜಮಾರ್ಗದ ಮೇಲಿರುವ ಅಬ್ದುಲಗಂಜದ ಹತ್ತಿರ ಇವೆ ಎಂಬ ಸಮಾಚಾರ ಸಂಗ್ರಹಿಸಿದಾಗ ಆದ ಆನಂದ ಅಷ್ಟಿಷ್ಟಲ್ಲ.

ನಸುಕಿನಲ್ಲಿಯೇ ಹೊರಟ ಸರಕಾರಿ ಮೋಟಾರ ಸರ್ವಿಸ್ಸು, ಇರುವೆ ವೇಗದಿಂದ ಚಲಿಸಿ ಬೇತುಲ ಮುಟ್ಟಿಸುವದರಲ್ಲಿ ಎರಡು ಗಂಟೆಯಾಯಿತು. ಮುಂದೆ ಭೋಪಾಲದಿಂದ ನಾಗಪುರ-ಮುಲತಾಯಿಯ ವರೆಗೆ ಓಡುವ ಖಾಸಗಿ "ಕೆಪಿಟಲ್ ಮೋಟಾರ ಸರ್ವಿಸ್" ಬಳಸುವದು ಒಳ್ಳೆಯದೆಂದು ಯಾರೋ ಸೂಚಿಸಿದರು. ಎಲ್ಲರೂ ನನ್ನೊಡನೆ ಸಹಕರಿಸಲು ಯತ್ನಿಸಿದರೂ ಭೀಮಬೇಟಕಾ ಎಲ್ಲಿದೆ ಎಂಬು ಒಬ್ಬರಿಗೂ ತಿಳಿಯದು. ಸರಕಾರೀ ಪ್ರವಾಸ-ಖಾತೆಯ ನಕಾಶೆಗಳೂ ಯಾವ ನೆರವನ್ನೂ ನೀಡಲಿಲ್ಲ. ನಂತರ ಕಂಡಕ್ಟರನೊಬ್ಬನು ಹೊಶಂಗಾಬಾದ ರಸ್ತೆಯಲ್ಲಿ ದೊಡ್ಡ ದೊಡ್ಡ ಬಂಡೆಗಲ್ಲುಗಳಿವೆ. ಜನರು ಅವುಗಳಿಗೆ ಭೇಟಿ ಕೊಟ್ಟು ಬರುವದನ್ನು ಕಂಡಿದ್ದೇನೆ. ಅಲ್ಲಿಯೇ ಸಮೀಪದಲ್ಲಿ ಅದು ಇರಬಹುದು. ತಾನು ಅದೇ ಮಾರ್ಗವಾಗಿ ಹೋಗುತ್ತಿರುವದಾಗಿ ಹೇಳಿದ್ದರಿಂದ ಸಮಸ್ಯೆ ಬಗೆಹರಿಯಿತು. ಬಸ್ಸು ವೇಗವಾಗಿ ಭೋಪಾಲದತ್ತ ಹೋಗುವಾಗ ಸೂರ್ಯನು ದಿಗಂತದಲ್ಲಿ ಅಸ್ತನಾಗುವದರಲ್ಲಿದ್ದ. ಹೊಂಬಣ್ಣದ ಗಗನಮಂಡಲದ ಹಿನ್ನೆಲೆಯಲ್ಲಿ ಎತ್ತರವಾದ ಬಂಡೆಗಲ್ಲುಗಳು ಭೂತಾಕಾರವಾಗಿ

ಕಂಡವು. ರಸ್ತೆ ಅಂಚಿನಲ್ಲಿ ಪ್ರಾಚ್ಯ-ವಸ್ತು-ಸಂರಕ್ಷಣೆಯು ನೋಟೀಸಿನ ನೀಲಿ ಬೋರ್ಡು ಇದು ಯಾವುದೋ ಒಂದು ಐತಿಹಾಸಿಕ ಸ್ಥಳವೆಂದು ಸೂಚಿಸಿತು. ಊರಿಲ್ಲದ ಏಕಾಂತ ಸ್ಥಳದಲ್ಲಿ ಇಳಿಯದೇ ಹೊಶಂಗಾಬಾದಕ್ಕೆ ಹೋಗಿ ತಂಗಿದೆವು, ಮರುದಿನ ಸೂರ್ಯೋದಯಕ್ಕೆ ಮೊದಲೇ ಎದ್ದು, ಬಿಸಿಲಿನ ಪ್ರಖರತೆ ಹೆಚ್ಚುವ ಮುಂಚೆಯೇ ಆ ಸ್ಥಳಕ್ಕೆ ಹೋದರೆ ಅದು ಅಬ್ದುಲ್ ಗಂಜದ ಬದಲಾಗಿ ಆದಮ್‌ಗಡ ಎಂದು ಪತ್ತೆ ಹತ್ತಿದಾಗ ತಮಾಷೆಯೆನಿಸಿತು. ಕಂಡಕ್ಟರನಿಗೆ ಅಬ್ದುಲ್ ಮತ್ತು ಆದಮರ ನಡುವೆ ವಿಶೇಷ ಅಂತರ ಗೋಚರಿಸಲಿಲ್ಲವೋ ಏನೋ! ಅಲ್ಲಿಯೂ ಹನ್ನೊಂದು ಪಾಷಾಣಾಶ್ರಯ ಗಳಿದ್ದು ನಾಲ್ಕರಲ್ಲಿ ಚಿತ್ರಗಳಿದ್ದರಿಂದ ಹೋದದ್ದು ವ್ಯರ್ಥವೆನಿಸಲಿಲ್ಲ. ಅದಕ್ಕೂ ಆದ ಹೆಚ್ಚಿನ ಲಾಭವೆಂದರೆ ಅಲ್ಲಿಯ ಕಾವಲುಗಾರನು ಅಬ್ದುಲ್‌ಗಂಜ ಇನ್ನೂ ಮುಂದೆ ಭೋಪಾಲ ರಸ್ತೆಯಲ್ಲಿದ್ದು ಅಲ್ಲಿ ಉಳಿಯಲು ಬೇಕಾದ ಸೌಕರ್ಯವಿದೆ ಎಂದಾಗ ಆಶಾಕಿರಣ ಮೂಡಿತು.

ಇಳಿಯಬೇಕಾದ ಅಬ್ದುಲ್‌ಗಂಜ್ ಇದೇ ಎಂದು ಕಂಡಕ್ಟರನು ದೊಡ್ಡ ದೊಡ್ಡ ಕಟ್ಟಡಗಳಿದ್ದು ಚಕ್ಕಡಿ, ಟ್ರಕ್‌ಗಳು ರಸ್ತೆ ಅಂಚಿನಲ್ಲಿ ನಿಂತ ತಾವಿನಲ್ಲಿ ಇಳಿಸಿ ಬೀಳ್ಕೊಂಡ. ಅಂಗಡಿಕಾರರೆಲ್ಲ ಅಗರವಾಲ, ವರ್ಮಾ, ಶರ್ಮಾ, ಪವಾರ ಹೆಸರಿನ ಲಾಜಗಳೇನಾದರೂ ಇವೆಯೇ ಎಂದು ಊರೆಲ್ಲ ಸುತ್ತಾಡಿದರೂ ಒಂದೂ ಕಣ್ಣಿಗೆ ಬೀಳದ್ದರಿಂದ, ಅಂಗಡಿಕಾರನೊಬ್ಬನಿಗೆ ವಿಚಾರಿಸಿದಾಗ ಇಲ್ಲಿ ಊಟದ ವ್ಯವಸ್ಥೆಯಿದ್ದರೂ ಉಳಿಯಲು ಇಲ್ಲವೆಂದ. ದೂರದಿಂದ ಬಂದವರ ಅಸಹಾಯಕತೆ ಕಂಡು ಈ ಊರ ದೇವಾಲಯದ ಆವಾರದಲ್ಲಿ ಅಶ್ವತ್ಥದ ಕಟ್ಟೆ ಯಿದೆ. ಅಲ್ಲಿ ರಾತ್ರಿ ಕಳೆಯಬಹುದೆಂದು ಸೂಚಿಸಿದ. ಸೂಚನೆ ಏನೋ ಮಾನ್ಯ ವಾಗಿದ್ದರೂ ಜೊತೆಯಲ್ಲಿದ್ದ ಕ್ಯಾಮರಾ ಮತ್ತು ಕಾಸು ತಾವು ಅಂಥಲ್ಲಿ ಅರಕ್ಷಿತರೆಂದು ಗೋಳಿಟ್ಟವು. ಮನುಷ್ಯರು ಸ್ವತಃಕ್ಕಿಂತ ಸಾಮಾನಿನ ಸುರಕ್ಷಿತತೆಗೆ ಹೆಚ್ಚು ಲಕ್ಷ್ಯ ಪೂರೈಸಬೇಕಾಗುತ್ತದೆಂದು ಇಂಥ ಸಂದರ್ಭದಲ್ಲಿ ಮನದಟ್ಟಾಗು ತ್ತದೆ. ಅಂಗಡಿಕಾರನು ನಾವು ಬಂದ ಉದ್ದೇಶವನ್ನು ತಿಳಿದುಕೊಂಡು ತನ್ನ ವ್ಯವಹಾರ-ಬುದ್ಧಿಯನ್ನು ಬಳಸಿ "ನೀವು ಹೀಗೆ ಮಾಡಿ: ಇಲ್ಲಿಂದ ಒಂಭತ್ತು ಮೈಲು ದೂರದಲ್ಲಿ ಬಿನೇಕಾ ಎಂಬ ಹಳ್ಳಿಯಿದೆ. ಅಲ್ಲೊಬ್ಬ ಸತ್‌ಪುರುಷರು ತಮ್ಮದೊಂದು ಆಶ್ರಮ ಕಟ್ಟಿಕೊಂಡು ಹಾಯಾಗಿದ್ದು ಬಂದವರಿಗೆಲ್ಲ ಆದರಾತಿಥ್ಯ

ತೋರುತ್ತಾರೆ. ಅಲ್ಲಿಗೆ ಹೋದರೆ ಆಹಾರ, ಆಶ್ರಮದ ಜೊತೆಗೆ ಸಂತರ ಆಶೀರ್ವಾದ, ಮಾರ್ಗದರ್ಶನಗಳೂ ಸಿಕ್ಕಾವು. ಭೀಮವೆಡಕಾಕ್ಕೆ ಅಲ್ಲಿಂದಲೇ ಬೆಟ್ಟ ಹತ್ತಿ ಹೋಗಬೇಕಾದ್ದರಿಂದ ನಸುಕಿನಲ್ಲೆ ಎದ್ದು ಹೊರಟರೆ ಬಿಸಿಲೇರುವ ಮೊದಲು ಅಲ್ಲಿರಬಹುದು" ಎಂದು ಸೂಚಿಸಿ, ಆ ದಾರಿಯಿಂದ ಹೊರಟ ಖಾಸಗಿ ಬಸ್ಸೊಂದನ್ನು ನಿಲ್ಲಿಸಿ, ಇವರು ಹೊಸಬರಾದ್ದರಿಂದ ಬಿನೇಕಾದಲ್ಲಿ ಇಳಿಸಿ ಮುಂದೆ ಹೋಗಿ ಎಂದು ಕಂಡಕ್ಟರನಿಗೆ ವಿವರಿಸಿದ.

ನಾಲ್ಕೆ ನಾಲ್ಕು ಕೋರ್ಕು ಆದಿವಾಸಿಗಳಿದ್ದ ಹಳ್ಳಿಗೆ ಹೊಸಬನೊಬ್ಬ ಬಂದದ್ದರಿಂದ ಎಲ್ಲ ಕಣ್ಣುಗಳೂ ನೋಡಹತ್ತಿದವು. ಕಸವನ್ನು ಒಗೆಯಲು ಹೊರಬಂದ ಬಿಚ್ಚೆದೆಯ ಜವ್ವನೆಯೊಬ್ಬಳು ಲಗುಬಗೆಯಿಂದ ತಿರುಗಿ ಮನೆ ಸೇರಿಕೊಂಡಳು. ಜಗಲಿಯಲ್ಲಿ ಕುಳಿತು ಚಿಲುಮೆ ಸೇದುತ್ತಿದ್ದ ಗಂಡಸರು ಹುಬ್ಬುಗಳನ್ನೆತ್ತಿ ಯಾರಿವರು ಎಂದು ಪ್ರಶ್ನಾರ್ಥಕವಾಗಿ ನೋಡಿದರು. ತೆನೆಗಳಿಂದ ಗೋದಿಯನ್ನು ಬೇರ್ಪಡಿಸುತ್ತಿದ್ದ ಮಧ್ಯವಯಸ್ಕನೊಬ್ಬನಿಗೆ ನಾನು ಸಾಧು ಮಹಾರಾಜನ ಆಶ್ರಮವೆಲ್ಲಿದೆ ಎಂದು ವಿಚಾರಿಸಿದಾಗ, "ನೀವು ಎರಡು ದಿನ ತಡಮಾಡಿ ಬಂದಿರಿ. ರಾಮನವಮಿಯ ದಿನ ಆ ಪರ್ವತಾವಳಿಯಲ್ಲಿ ಸಾಧು ಮಹಾರಾಜರ ಮುಖಂಡತ್ವದಲ್ಲಿ ಭಾರೀ ಮೇಲಾ (ಜಾತ್ರೆ) ಸೇರುತ್ತದೆ. ಎಷ್ಟೆಷ್ಟೋ ದೂರದಿಂದ ಭಕ್ತರು ಬರುತ್ತಾರೆ. ನೋಡುವಂತಹ ಜಾತ್ರೆ ತಪ್ಪಿಸಿಕೊಂಡಿರಿ" ಎಂದು ನಮ್ಮ ಹತಭಾಗ್ಯಕ್ಕಾಗಿ ಮರುಗಿದ. ಕಾಣಬೇಕಾದದ್ದು ಸಾಧುಗಳನ್ನು ಜಾತ್ರೆಯನ್ನಲ್ಲ, ಎಂದಾಗ ಪರ್ವತಕ್ಕೆ ಹೋದವರು ಹಿಂತಿರುಗಿದ್ದಾರೋ ಇಲ್ಲವೋ ಗೊತ್ತಿಲ್ಲ. ಅವರವು ಎರಡು ಆಶ್ರಮಗಳಿವೆ. ಅವುಗಳಲ್ಲಿ ಯಾವುದಾದರೊಂದರಲ್ಲಿ ಇರುತ್ತಾರೆ. ಹೋಗಿ ನೋಡಿ" ಎಂದು ಕಾಲುದಾರಿಯನ್ನು ತೋರಿಸಿದ.

ಬಿನೇಕಾ ಹಳ್ಳಿಯಿಂದ ಹಾದುಹೋಗುವ ಭೋಪಾಲ-ಇಟಾರಸಿ ರಾಜಮಾರ್ಗಕ್ಕೆ ಸಮಾಂತರವಾಗಿ ದಿಲ್ಲಿ-ಮದ್ರಾಸ ರೈಲುಮಾರ್ಗವೂ ಹತ್ತುತ್ತದೆ. ಅವೆರಡನ್ನೂ ದಾಟಿ, ಹೊಲಗಳೊಳಗಿಂದ ಹಾದುಹೋಗಿ ಪರ್ವತಾವಳಿಯ ಆಶ್ರಯದಲ್ಲಿದ್ದ ಆಶ್ರಮವನ್ನು ತಲುಪಿದಾಗ, ಸನ್ಯಾಸಿ ಅಲ್ಲಿಲ್ಲವೆಂದು ತಿಳಿದು ಇನ್ನೊಂದು ಆಶ್ರಮಕ್ಕೆ ಭರದಿಂದ ಕಾಲು ಸಾಗಿದವು. ದೊಡ್ಡ ಆವಾರಕ್ಕೆ ಮುಳ್ಳು ಬೇಲಿ ಹಾಕಿ, ಆಕರ್ಷಕವಾದ ಹೂಗಳನ್ನು, ತರತರದ ಕಾಯಿಪಲ್ಯಗಳನ್ನು ಬೆಳೆಸ

ಲಾಗಿತ್ತು. ವಿಶಾಲವಾದ ಹಂಚು ಹೊದಿಸಿದ ಆಶ್ರಮದ ಅಂಗಳವನ್ನು ಶುಭ್ರವಾಗಿ ಸಾರಿಸಲಾಗಿತ್ತು. ವಿರಾಮಖುರ್ಚಿಯೊಂದರ ಮೇಲೆ ಕೃಷ್ಣಾಜಿನ ಹಾಸಿ ಬಾಬಾಜಿಯೊಬ್ಬರು ಆರೂಢರಾಗಿದ್ದರು. ಐಷಾರಾಮಗಳಿಂದ ಕೊಬ್ಬಿದ ದೇಹ, ಉಬ್ಬಿದ ಹೊಟ್ಟೆಗಳಿಂದ ಬನಿಯಾ-ಸಾಧು ಎಂದು ಎಂತಹ ಬೆಪ್ಪನಿಗೂ ತಿಳಿಯುತ್ತಿತ್ತು. ಕೆಳಗೆ ಹಾಸಿದ ಚಾಪೆಯ ಮೇಲೆ ಕುಳಿತ ಭಕ್ತವೃಂದ, ಹತ್ತಿರವಿದ್ದ ಬಾವಿಯಿಂದ ನೀರು ಸೇದಿ ಕಾಲು ತೊಳೆದುಕೊಂಡು ಬರಲು ಸೂಚಿಸಿತು. ಸಾಂಸಾರಿಕ ಸಮಸ್ಯೆಗೆ ಸ್ವಾಮೀಜಿಯವರ ಆಶೀರ್ವಾದದ ನಿವಾರಣೋಪಾಯ ಪಡೆಯಲು ಬಂದ ಅಭಾಗಿ ನಾನೆಂದು ಆ ಗುಂಪು ತಿಳಿದುಕೊಂಡಂತೆ ಇತ್ತು. ನಾನು ಶಿರಸಾಷ್ಟಾಂಗ ನಮಸ್ಕಾರಮಾಡುವ ಬದಲಾಗಿ ಕೈಜೋಡಿಸಿ ನಮಸ್ಕರಿಸಿದ್ದರಿಂದ ಎಲ್ಲರಿಗೂ ಅಸಮಾಧಾನವಾಯಿತು. ಬಾಬಾಜಿಯವರ ಆಶೀರ್ವಾದದಿಂದ ಎಷ್ಟೆಲ್ಲ ಜನರಿಗೆ ಸಂತಾನಲಾಭವಾಗಿದೆ ಎಂದು ಒಬ್ಬ ವಿವರಿಸಿದರೆ, ಇನ್ನೊಬ್ಬ ಅವರ ಹಸ್ತಗುಣ ಬಹಳ ಚೆನ್ನಾಗಿದ್ದರಿಂದ ಎಂತೆಂತಹ ಕಾಹಿಲೆಗಳನ್ನು ವಾಸಿಮಾಡಿದ್ದಾರೆಂದ. ಇಂತಹ ಆಶೀರ್ವಾದ ಪಡೆಯಲೆಂದು ಬಂದಿಲ್ಲವೆಂದಾಗ ಬೇರೇನು ಕೆಲಸವಾಗಬೇಕೆಂದು ಬೇರೊಬ್ಬಾತ ಕೇಳಿದ. ಭೀಮವೆಡಕಾದ ಪಾಷಾಣಾಶ್ರಮಗಳನ್ನು ನೋಡಲು ಬಂದಿದ್ದೇನೆ ಎಂದಾಗ ಒಳ್ಳೆಯ ಪೋಷಾಕು ಧರಿಸಿದ ಪಟ್ಟಣದ ಭಕ್ತನೊಬ್ಬ ಉತ್ಸಾಹಭರಿತನಾಗಿ "ಅವುಗಳನ್ನೆಲ್ಲ ಕಂಡು ಹಿಡಿದವರು, ನಮ್ಮ ಗುರುದೇವರೇ. ಆದರೆ ಖ್ಯಾತಿ, ಶ್ರೇಯಸ್ಸಿನ ಆಸೆ ಇಲ್ಲದ್ದರಿಂದ ಅವನ್ನು ಪ್ರೊಫೆಸರ್ ಒಬ್ಬರಿಗೆ ತೋರಿಸಿದ್ದರಿಂದ ಅವರು ತಾವೇ ಅವೆಲ್ಲವನ್ನೂ ಸಂಶೋಧಿಸಿದವರಂತೆ ಜಂಭಕೊಚ್ಚಿಕೊಳ್ಳುತ್ತಾರೆ" ಎಂದು ಮಾತು ಮುಗಿಸಿದ.

ಮಾಯಾವಿದ್ಯೆ ಅರಿತ ದೇವತಾ-ಮನುಷ್ಯರಿಗೆ ತಮ್ಮನ್ನು ಅಳೆದು ನೋಡುವವರನ್ನು ಕಂಡರಾಗದು, ಅಂತೆಯೇ ಬಾಬಾಜಿ "ಸದ್ಯ ಆ ಪ್ರಾಧ್ಯಾಪಕರು ಬೆಟ್ಟದ ಮೇಲೆ ಠಾಣ್ಯ ಹಾಕಿದ್ದಾರೆ. ಈಗ ಅಲ್ಲಿ ಹೋದರೆ ಈ ಪಾಷಾಣಾಶ್ರಮಗಳನ್ನು ಬೆಳಿಗ್ಗೆ ನೋಡಲು ಅನುಕೂಲವಾಗುವದು." ಎಂದುಅಲ್ಲಿದ್ದ ಬಂಟನೋರ್ವನನ್ನು ಕರೆದು ರಸ್ತೆ ತೋರಿಸಲು ಹೇಳಿದರು. ಒಪ್ಪದವರೊಡನೆ ಇರುವದಕ್ಕಿಂತ ಆ ಪ್ರಾಧ್ಯಾಪಕರಿಗೆ ಶರಣುಹೋಗುವದೇ ಲೇಸೆಂದು, ಬಾವಿಯಿಂದ ಇನ್ನಷ್ಟು ನೀರು ಸೇದಿ ಕುಡಿದು ಮಾರ್ಗದರ್ಶಿ

ಯನ್ನು ಹಿಂಬಾಲಿಸಿದೆ. ದಾರಿಯಲ್ಲಿ ತಮ್ಮ ಗುರುದೇವರು ಎಂಥ ಮಹಾನ್ ವ್ಯಕ್ತಿಯೆಂದು ಆತ ವಿವರಿಸಲಾರಂಭಿದ. ಭೋಪಾಲ, ಇಂದೋರ, ಗ್ವಾಲೇರ, ದಿಲ್ಲಿಯಿಂದ ಕೂಡ ಭಕ್ತರು ಬಂದು ಅವರಿಗೆ ಸೇವೆ ಸಲ್ಲಿಸಿ, ಆಶೀರ್ವಾದ ಪಡೆದುಕೊಂಡು ಹೋಗುತ್ತಾರೆ. ಅಲ್ಲಿ ಕುಳಿತಿದ್ದರಲ್ಲ ಮೀಸೆ ಬಿಟ್ಟವರು? ಅಬ್ದುಲ್-ಗಂಜದಲ್ಲಿ ದೊಡ್ಡ ಸರಕಾರೀ ಅಧಿಕಾರದಲ್ಲಿದ್ದಾರೆ. ವಾರಕ್ಕೊಮ್ಮೆಯಾದರೂ ಬಂದು ಗುರುದರ್ಶನ ಪಡೆಯದಿದ್ದರೆ ಅವರಿಗೆ ನೆಮ್ಮದಿಯೇ ಇರುವದಿಲ್ಲವೆಂದು ಹೇಳುತ್ತಿದ್ದಾಗ ಕಂದಕದಲ್ಲಿ ಕರು ಒಂದು ಸತ್ತುಬಿದ್ದದ್ದು ಅವನ ಲಕ್ಷ್ಯಕ್ಕೆ ಹೋಯಿತು. ಅಲ್ಲಿ ಹೋಗಿ, ಅದನ್ನು ಚನ್ನಾಗಿ ಪರೀಕ್ಷಿಸಿ, 'ಚಿರತೆ ಆಹುತಿ ತೆಗೆದುಕೊಂಡಿದೆ' ಎಂದು ತೀರ್ಪು ಕೊಟ್ಟ.

"ಪ್ರಾಧ್ಯಾಪಕರು ಎಂಟು-ಹತ್ತು ಪಾಷಾಣಾಶ್ರಮಗಳನ್ನು ತೋರಿಸಬಹುದು. ಇಲ್ಲಿ ಸುಮಾರು ಮೂರುನೂರಾ ನಾಲವತ್ತು ಇವೆ. ಅವುಗಳಲ್ಲಿ ಪ್ರತಿಯೊಂದರ ಪರಿಚಯು ನನಗಿದೆ. ಭೋಪಾಲ ಕಾಲೇಜದ ವಿದ್ಯಾರ್ಥಿಗಳು ಬಂದಾಗ ನಾನೇ ಮಾರ್ಗದರ್ಶಕನಾಗಿದ್ದೆ. ಬೇಕಿದ್ದರೆ ನಿಮಗೂ ನಾನೇ ತೋರಿಸಬಲ್ಲೆ" ಎಂದ. ಅವನು ನಿರೀಕ್ಷಿಸಿದ ದಿನದ ಸಂಬಳ ಕೊಡಲು ಅಸಾಧ್ಯತೆ ವ್ಯಕ್ತಪಡಿಸಿದ್ದರಿಂದ ಅವನಿಗೆ ನಿರಾಶೆಯಾಗಿರಬೇಕು. ಅಂತೆಯೇ ತನಗೀಗ ಬೇರೆ ಕೆಲಸವಿದೆ. ಆದ್ದರಿಂದ "ಇಲ್ಲಿಂದ ಮುಂದೆ ನೀವೇ ಈ ಕಾಲುದಾರಿ ತುಳಿಯುತ್ತ ಹೋಗಿರಿ. ಒಮ್ಮೆ ಎಡಕ್ಕೆ ತಿರುಗಬೇಕು, ಇನ್ನೊಮ್ಮೆ ಬಲಕ್ಕೆ ತಿರುಗಿ ಗುಡ್ಡ ಇಳಿಯಬೇಕು. ಮರಗಳ ಆಶ್ರಯದಲ್ಲಿ ಪ್ರಾಧ್ಯಾಪಕರ ಡೇರೆ ಕಾಣುತ್ತದೆ. ನಾನು ಹೇಳಿದಂತೆ ಹೋಗದಿದ್ದರೆ ಕಾಡುಪಾಲಾಗಿ ರಾತ್ರೆಯೆಲ್ಲ ದಿಕ್ಕುಗಾಣದೇ ಕಳೆಯಬೇಕಾದೀತು" ಎಂದು ಎಚ್ಚರಿಸಿ ಬೀಳ್ಕೊಂಡ.

ಮುಂಜಾವಿನಿಂದ ಸ್ನಾನವಿಲ್ಲ. ಸರಿಯಾದ ಊಟವಿಲ್ಲ. ವಿಶ್ರಾಂತಿಯಿಲ್ಲದ ಪ್ರವಾಸ. ತಲೆಯ ಮೇಲೆ ಹೊತ್ತ ಭಾರವಾದ ಸಾಮಾನು ಬೇರೆ. ಆದಾಗಲೇ ಸೂರ್ಯಾಸ್ತವಾಗಿಹೋಗಿದ್ದರಿಂದ ಎಲ್ಲ ಕಡೆಗೂ ಮಸುಬೆಳಕು ಕಾಣುತ್ತಿದೆ. ಹೊರಟ ಕಾಡಿನ ಕಾಲುದಾರಿಗೆ ಹಲವಾರು ಕವಲುದಾರಿಗಳು. ಒಂದು ಹೆಜ್ಜೆ ತಪ್ಪಿ ಹಾಕಿದರೂ ಎಲ್ಲಿ ಮುಟ್ಟುತ್ತೇವೆಂದು ತಿಳಿಯದು. ಸಾಲದ್ದಕ್ಕೆ ಕಾಡುಪಶುಗಳು ಇಲ್ಲಿ ರಾಜ್ಯವಾಳುತ್ತವೆ ಎಂದು ಸತ್ತ ಕರು ಸಾಕ್ಷಿ ಹೇಳಿತ್ತು. ಈ ಕುರುಡು ಸಾಹಸ ಹೇಗೆ ಅಂತ್ಯಗೊಳ್ಳುವದೋ ಎಂದು ಅರಿಯದೇ ನಡಿಗೆಯ ವೇಗ ಹೆಚ್ಚ

ಪತ್ತಿತು.ಹತ್ತಿರದ ಮರದ ಮೇಲೆ ಸದ್ದಾಯಿತು. ಯಾವದೋ ರಾಕೆಟ್ ಹಾರಿಸಿದಂತೆ ಸದ್ದು. ಹೊಸಬನ ಆಗಮನದಿಂದ ಅಸಂತುಷ್ಟಗೊಂಡ ನವಿಲೊಂದು ಭುರ್‌ರ್ ಎಂದು ಹಾರಿ ಬೇರೊಂದು ಮರದ ಆಶ್ರಯ ಪಡೆಯಿತು. ತರಗೆಲೆಯ ಮೇಲೆ ಪ್ರಾಣಿಯ ಕಾಲು-ಹೆಜ್ಜೆ ಕೇಳಿಸಿದವು. ಸದ್ದು ಬಂದಲ್ಲಿ ಕಣ್ಣಿಟ್ಟು ನೋಡಿದಾಗ, ಗೊಲ್ಲನ ಕಣ್ಣು ತಪ್ಪಿಸಿಕೊಂಡ ಗೋವು ಎಂದು ತಿಳಿಯಿತು. ಕೋತಿಗಳು ಆ ರಾತ್ರಿಯನ್ನು ಯಾವ ಮರದ ಆಶ್ರಯದಲ್ಲಿ ಕಳೆಯಬೇಕೆಂಬ ನಿರ್ಧಾರಕ್ಕೆ ಬಾರದೇ ಅಲ್ಲಿಂದಿಲ್ಲಿ ಜಿಗಿದು ಕಾಡಿನ ಶಾಂತತೆಗೆ ಭಂಗ ತಂದಿದ್ದವು.

ದೂರದ ಗಿಡ, ಮರ, ಗುಡ್ಡಗಳು ಭೂತಾಕಾರವಾಗಿ ಕಾಣುತ್ತಿವೆ. ನಾಲ್ಕೈದು ಮೈಲು ದೂರ ನಡೆದರೂ ಮನುಷ್ಯನ ವಾಸದ ಲಕ್ಷಣಗಳು ಎಲ್ಲೂ ಕಾಣಿಸವು. ಇರುಳು ರಾಜ್ಯವಾಳಲಾರಂಭಿಸಿ ಸುಮಾರು ಹೊತ್ತಾಗಿರಬೇಕು. ನಿಶಾಚರ-ಪ್ರಾಣಿಗಳು ತಮ್ಮ ಬೇಟೆಗಾಗಿ ದೂರ ಕಾಡಿನಲ್ಲಿ ಅಲೆಯುತ್ತಿರಬೇಕು. ಮಿದುಳು ಅಲ್ಲ ಸಲ್ಲದ ವಿಚಾರಗಳನ್ನು ತಲೆಯಲ್ಲಿ ತುಂಬಿಕೊಳ್ಳಲಾರಂಭಿಸಿತು. ಪ್ರಾಧ್ಯಾಪಕರ ಡೇರೆ ಸಿಗದೇ ಹೋದರೆ...? ಇಲ್ಲವೇ ಆದಾಗಲೇ ಅವರು ಹೊರಟುಹೋಗಿದ್ದಿದ್ದರೆ ..? ವಿಚಾರಗಳಿಂದಲೇ ಮೈಯೆಲ್ಲ ಜುಮ್ಮೆಂದಿತು, ಗೊತ್ತಿಲ್ಲದ ಕಾಡಿನಲ್ಲಿ ಈ ಹೊತ್ತಿನಲ್ಲಿ ಹೊರಡಲೇಬಾರದಾಗಿತ್ತು ಎಂದು ವ್ಯವಹಾರ-ಬುದ್ಧಿ ನುಡಿದರೆ, ಎಲ್ಲವೂ ಸುರಕ್ಷಿತವಾಗಿರುವಲ್ಲಿ ಇದ್ದರೆ ಜೀವನದಲ್ಲಿ ಸಾಹಸ, ಸ್ವಾರಸ್ಯ ಎಲ್ಲಿಂದ ಬರಬೇಕು? ಎಂದು ಮನಸ್ಸು ಕೇಳಿತು. ದೂರದ ಮರಗಳ ಸಾಲಿನಲ್ಲಿ ಉರಿಯುವ ಮಂದ ಬೆಳಕಿನಲ್ಲಿ ಡೇರೆಯೊಂದು ಕಂಡಾಗ ಜೀವ ಬದುಕಿತು ಎಂದಿತು.

ಆಳೊಬ್ಬ ಹೊಂಡದ ಬಾವಿಯಿಂದ ನೀರು ಸೇದುತ್ತಿದ್ದ. ಶಿಬಿರದಲ್ಲಿ ಯಾರು ಇದ್ದಾರೆ ಎಂದು ಕೇಳಿದಾಗ 'ಭಾಟಿಯಾಬಾಬು' ಎಂದು ಉತ್ತರಿಸಿದ. ಅಲ್ಲಿ ಹೋದಾಗ ತೈಮೂರಲಿಂಗನನ್ನು ಹೋಲುವ ವ್ಯಕ್ತಿಯೊಬ್ಬ 'ಯಾರು ಬೇಕು?' ಎಂದು ವಿಚಾರಿಸಿದಾಗ, 'ಪ್ರೊಫೆಸರ್ ಇಲ್ಲವೇ' ಎಂದು ಕೇಳಿದ ಪ್ರಶ್ನೆಗೆ 'ಅವರು ಭೋಪಾಲಕ್ಕೆ ಹೋಗಿದ್ದಾರೆ' ಎಂಬ ಉತ್ತರ ಬಂದಿತು. 'ಹಾಗಾದರೆ ಬೇರೆ ಯಾರಿದ್ದಾರೆ?' ಎಂದಾಗ ತಾನೊಬ್ಬನೇ ಇದ್ದೇನೆ ಎಂದಿದ್ದರಿಂದ ಅವನೇ ಭಾಟಿಯಾಬಾಬು ಎಂದು ತಿಳಿಯಿತು. ಮಾತನಾಡುತ್ತ, 'ಊಟ-ಉಪಚಾರದ ಏರ್ಪಾಡು ಏನಾದರೂ ಮಾಡಿದ್ದೀರಾ?' ಎಂದು ವಿಚಾರಿಸಿದಾಗ, "ಪ್ರಾಧ್ಯಾಪಕರು

ತುಂಬ ಒಳ್ಳೆಯವರು, ಯಾರೇ ಬರಲಿ ತಮ್ಮ ರೊಟ್ಟಿಯಲ್ಲಿ ಅರ್ಧವನ್ನಾದರೂ ಕೊಟ್ಟು ಉಪಚರಿಸುತ್ತಾರೆ" ಎಂದು ಸಾಧು ಹೇಳಿಕಳಿಸಿದ್ದಾರೆ ಎಂದು ನಡೆದ ಘಟನೆ ವಿವರಿಸಿದಾಗ ನಕ್ಕು ಎಲ್ಲಿಂದಲೋ ಗೋದಿ-ಹಿಟ್ಟು ತೆಗೆದ. ಎರಡು ರೊಟ್ಟಿ, ಒಂದಿಷ್ಟು ಬೇಳೆ ಒದಗಿಸಿ "ಈ ಕಾಡಿನಲ್ಲಿ ಇದಕ್ಕೂ ಹೆಚ್ಚು ಕೊಡಲಾಗುವದಿಲ್ಲ" ಎಂದು ತನ್ನ ಅಸಹಾಯಕತೆಯನ್ನು ವ್ಯಕ್ತಪಡಿಸಿದಾಗ, "ಇಷ್ಟೊಂದು ರುಚಿಯಾಗಿ ಉಂಡ ದಿನವೇ ನನಗೆ ನೆನಪಿಲ್ಲ" ಎಂದು ಅವನಿಗೆ ಸಮಾಧಾನ ಹೇಳಬೇಕಾಯಿತು.

ಪ್ರಾಧ್ಯಾಪಕರು ಇಲ್ಲದ್ದರಿಂದ ಯಾವ ಹೆಚ್ಚಿನ ಚಟುವಟಿಕೆ ಇಲ್ಲದೇ ಕುಳಿತವನು ಒಮ್ಮೆಲೆ ಎದ್ದು ಗ್ಯಾಸ್-ಲಾಯಿಟ್ ಹೊತ್ತಿಸಿದ. ಅದರ ಬೆಳಕಿನಲ್ಲಿ ಕ್ಯಾಂಪಿಗೆ ಹೊಸ ಜೀವಕಳೆ ಬಂದಿತು. ಕಾಡು ಕಡಿದು ಬಯಲುಮಾಡಿ ಡೇರೆಯನ್ನು ನಿಲ್ಲಿಸಲಾಗಿದೆ. ಅವರು ಬಂದ ಕೆಲಸ ಮುಗಿಯುತ್ತ ಬಂದಿದ್ದರಿಂದ ಎರಡೇ ಡೇರೆಗಳಿದ್ದು ಉಳಿದವನ್ನು ಬಿಡಿಸಿ ಒಂದೆಡೆ ಒಟ್ಟಿದ್ದರು. ಕಡಿದ ಮರಗಳ ಬೊಡ್ಡೆ, ತರಗೆಲೆಗಳನ್ನೆ ಬಳಸಿ ಚಪ್ಪರದ ಅಡಿಗೆ-ಮನೆ ನಿಲ್ಲಿಸಲಾಗಿತ್ತು. ಒಂದೆಡೆ ಕುಡಿಯುವ ನೀರಿನ ಮಡಕೆಗಳು, ಇನ್ನೊಂದೆಡೆ ಮೂತ್ರವಿಸರ್ಜನೆಗೆ ಎಂದು ತೋಡಿದ ಹೊಂಡ ಮುಂತಾದವು ಸೈನಿಕ-ಶಿಬಿರವನ್ನು ನೆನಪಿಗೆ ತರುವಂತೆ ಇದ್ದವು. ಎದುರಿಗಿದ್ದ ಬೃಹದಾಕಾರದ ಕಟ್ಟಿಗೆಯ ಪೆಟ್ಟಿಗೆಯಲ್ಲಿ ಏನು ಇದ್ದಿರಬಹುದು ಎಂದು ಯೋಚಿಸುತ್ತಿದ್ದಾಗ, ಅದರ ಮೇಲೆ ಬರೆದ ಡಾ। ವಾಕಣಕರ ಎಂಬ ಹೆಸರು ಕಣ್ಣಿಗೆ ಬಿದ್ದಾಗ ತಲೆಯಲ್ಲಿ ಪ್ರಕಾಶ ಬಿದ್ದಂತಾಯಿತು. ಹೆಸರನ್ನು ಹಿಂದೆ ಕೇಳಿದ್ದೆ. ಎಲ್ಲಿ, ಯಾವ ಸಂದರ್ಭದಲ್ಲಿ ಎಂದು ನೆನಪು ಮಾಡಿಕೊಳ್ಳುತ್ತ ಹೋದಂತೆ ಆನಂದವಾಯಿತು. "ಉಜ್ಜಯನಿಗೆ ಹೋದಾಗ ಅಲ್ಲಿಯ ವಿಕ್ರಮ ವಿಶ್ವವಿದ್ಯಾಲಯದ ಡಾ। ವಿ. ಎನ್. ವಾಕಣಕರರನ್ನು ಭೆಟ್ಟಿಯಾಗಿ; ಶಿಲಾಯುಗದ ಚಿತ್ರಕಲೆಯಲ್ಲಿ ಅವರು ವಿಶ್ವತಜ್ಞರು" ಎಂದು ಯಾರೋ ಸೂಚಿಸಿದ್ದರು. ಆ ಮಹಾವ್ಯಕ್ತಿಯ ಕ್ಯಾಂಪಿಗೇ ನಾನು ಅನಿರೀಕ್ಷಿತವಾಗಿ ಬರುವಂತಾದ್ದರಿಂದ ಇನ್ನೂ ಹೆಚ್ಚಿನ ಆನಂದವಾಯಿತು.

ವಿರಮಿಸುತ್ತ ಕುಳಿತಾಗ, ಹಿಂದಿನ ಕಾಡಿನಲ್ಲಿ ಏನೋ ಸದ್ದಾಯಿತು. ದೊಣ್ಣೆಯ ಸಪ್ಪಳ, ಅದರ ಹಿಂದೆ ಹೆಜ್ಜೆಯ ಸಪ್ಪಳ, ಕೇಳಿಬಂದದ್ದರಿಂದ ಅತ್ತ ಕಣ್ಣು ಓಡಿಸಿದಾಗ ಶರೀರವೆಲ್ಲ ಮಾಂಸಖಂಡಗಳಿಂದ ತುಂಬಿಕೊಂಡ,

ಗಡ್ಡ, ತಲೆಗೂದಲುಗಳನ್ನು ಬೆಳೆಸಿದ ನಟ, ಕಬೀರ್ ಬೇಡಿಯನ್ನು ಹೋಲುವ ತರುಣನೋರ್ವ ಲಾರಿಯೊಂದಿಗೆ ಪ್ರವೇಶಿಸಿದ. ಪರಿಚಯವನ್ನು ಹೇಳಿ ಡಾ| ಪಾಕಣಕರರನ್ನು ಕಾಣಲು ಬಂದಿದ್ದೇನೆಂದಾಗ ಪುಲಕಿತನಾಗಿ ತಾನು ಗಿರಿರಾಜ-ಕುಮಾರ್, ಅವರ ನಿರ್ದೇಶನದಲ್ಲಿ ಡಾಕ್ಟರೇಟ ಅಭ್ಯಾಸ ನಡೆಸಿದ್ದೇನೆಂದ. ದಿನವೆಲ್ಲ ಮೈಮುರಿ ದುಡಿದು ದಣಿದು ಬಂದಿದ್ದರಿಂದ ತಣ್ಣೀರಿನ ಸ್ನಾನ ಮುಗಿಸಿ ಚಹಾ ಸೇವಿಸಿ ಮಾತಿಗೆ ಆರಂಭಿಸಿದ. ಅಲ್ಲಿ ಒಂದೆಡೆ ರಾಶಿಯಾಗಿ ಹಾಕಿದ ಶಿಲೆಯ ತುಂಡುಗಳನ್ನು ನನಗೆ ತೋರಿಸುತ್ತ ಇವುಗಳೆಲ್ಲ ಆದಿಮಾನವನು ಬಳಸುತ್ತಿದ್ದ ಆಯುಧಗಳೆಂದು ವಿವರಿಸಿದ. ಇಪ್ಪತ್ತೈದು ಸಾವಿರ ವರ್ಷಗಳ ಹಿಂದೆ ಮಾನವನು ಹೇಗೆ ಜೀವಿಸುತ್ತಿದ್ದ ಎಂದು ಕಂಡುಹಿಡಿಯಲು ತಾವು ಹೇಗೆ ಶ್ರಮಿಸುತ್ತಿದ್ದೇವೆಂದು ಹೇಳಿದ.

ಡೇರೆಗಳನ್ನೆಲ್ಲ ಬಿಡಿಸಿ ಹಾಕಿದ್ದರಿಂದ ಚಿಕ್ಕದೊಂದು ಕಟಿಯಾ(ಕಿರುಮಂಚ)ದ ಮೇಲೆ, ಮಹುವಾ-ಮರವನ್ನೇ ಆಶ್ರಯಮಾಡಿಕೊಂಡು ಪವಡಿಸಿದಾಗ ಬೇರೆಯೇ ಲೋಕಕ್ಕೆ ಬಂದ ಅನುಭವವಾಯಿತು. ತಡಮಾಡಿ ಉದಯಿಸಿದ ಚಂದ್ರನೊಂದಿಗೆ ಗ್ಯಾಸ್‌ದೀಪ ಸ್ಪರ್ಧಿಸುತ್ತಿದ್ದರಿಂದ ಅದನ್ನು ಆರಿಸಲಾಯಿತು. ಮಂದವಾದ ಬೆಳದಿಂಗಳಲ್ಲಿ ಅಲ್ಲಿಯ ವಾತಾವರಣ ಇನ್ನೂ ಹಿತವಾಗಿ ಕಂಡಿತು. ಮಹುವಾ-ಮರಗಳಲ್ಲಿ ಹೂವುಗಳು ಆದೇ ಅರಳಿ ನಿಂತಿದ್ದವು. ಅವುಗಳ ಸುವಾಸನೆ ಆಪ್ಯಾಯಮಾನವಾಗಿತ್ತು. ಆಗೊಮ್ಮೆ ಈಗೊಮ್ಮೆ ನನ್ನ ಮಂಚದ ಮೇಲೆ ಹೂಮಳೆಯಾಗುತ್ತಿತ್ತು. ಮಂದಮಾರುತ ಸುಖವಾಗಿ ಬೀಸುತ್ತಿದ್ದ. ಹಿಂದಿನ ರಾತ್ರೆ ಹಣ ಕೊಟ್ಟು ತಿಗಣೆ, ಸೊಳ್ಳೆಗಳಿಂದ ಕಚ್ಚಿಸಿಕೊಳ್ಳುತ್ತ ಹೊಸಂಗಾಬಾದದ ಗಾಳಿಯಾಡದ ಹೋಟೆಲಿನ ಖೋಲಿಯಲ್ಲಿ, ಪಂಖ ಹಚ್ಚಿದರೂ ಪ್ರಯೋಜನವಾಗದೇ ನಿದ್ದೆ ಬಾರದೇ ಒದ್ದಾಡಿದ್ದಕ್ಕೂ, ನಿಸರ್ಗದ ಮಡಿಲಲ್ಲಿ ಈಗ ಮಲಗಿ ವಿರಮಿಸುತ್ತಿದ್ದ ಈ ರಾತ್ರಿಗೂ ಅಂತರವನ್ನು ನೆನೆದು, ಪೆಚ್ಚಿನ ನೆಮ್ಮದಿಯೆನಿಸಿತು,

ಕಣ್ಣಿಗೆ ಕಣ್ಣು ಹತ್ತುವಷ್ಟರಲ್ಲಿ ಅಡಿಗೆಮನೆಯ ಹಿಂದೆ ದೊಡ್ಡ ಸಪ್ಪಳವಾಯಿತು. ಭಾಟಿಯಾ ದೊಡ್ಡ ಲಾಠಿ, ಪ್ರಖರವಾದ ಬ್ಯಾಟ್ರಿ ದೀಪದೊಂದಿಗೆ ಕುಂಟುತ್ತ ಹೋಗಿ ಕಾಡುಪ್ರಾಣಿಯೊಂದನ್ನು ಓಡಿಸಿ ಬಂದ. ಅರ್ಧತಾಸಿನಲ್ಲಿ ಕಾಡಿನಿಂದ ಚೀತ್ಕಾರವೊಂದು ಕೇಳಿಬಂದಿತು. ಐದು ನಿಮಿಷದಲ್ಲಿ ಅದು

ಒಮ್ಮೊಂದೊಮ್ಮೆ ನಿಂತಿತು. ಕಾಡುಹಂದಿಯು ಮರಿಯನ್ನು ಕಿರುಬು ಬೇಟೆಯಾಡಿ ತಿಂದಿತು ಎಂದು ಭಾಟಿಯಾ ಮತ್ತು ಗಿರಿರಾಜರು ತೀರ್ಮಾನಕ್ಕೆ ಬಂದರು. ಪರವಾಯಿಲ್ಲ ಇಲ್ಲಿ ಇನ್ನೂ ಕಾಡುಪ್ರಾಣಿಗಳು ಉಳಿದುಕೊಂಡಿವೆ ಎಂದು ಸಮಾಧಾನವಾಯಿತು. ಕೆಲವೇ ನಿಮಿಷಗಳಲ್ಲಿ ಗಾಢನಿದ್ರೆ ನಮ್ಮನ್ನಾವರಿಸಿತು.

ಮರುದಿನ ಕಣ್ಣು ಬಿಡುತ್ತಿದ್ದಂತೆ ಸೂರ್ಯ-ಚಂದ್ರರ ದರ್ಶನ ಏಕಕಾಲಕ್ಕೆ ಆಯಿತು. ಮಲಗಿದ ಹಾಸಿಗೆ ಮಹುವಾ-ಹೂಗಳಿಂದ * ತುಂಬಿಹೋಗಿತ್ತು. ಸುತ್ತಲಿನ ನೆಲವೆಲ್ಲ ಹೂ-ಹಾಸಿಗೆಯಾಗಿತ್ತು. ಹೂವಿನ ಸುವಾಸನೆಯಷ್ಟೇ ಅದರ ಬಣ್ಣವೂ ಆಕರ್ಷಕ. ರುಚಿಗೂ ಮಧುರವಾಗಿರುತ್ತದೆ. ಕೊರ್ಕು ಗೃಹಿಣಿಯರು ಆಗಲೇ ಮಹುವಾ-ಹೂಗಳನ್ನು ಸಂಗ್ರಹಿಸುವದಕ್ಕಾಗಿ ನಮ್ಮ ತಾಣ್ಯದ ವರೆಗೆ ಬಂದಿದ್ದರು. ರಾತ್ರಿ ಬಿದ್ದ ಹೂಗಳನ್ನೆಲ್ಲ ಬುಟ್ಟಿಗೆ ಸೇರಿಸಿ, ನೆಲವನ್ನು ಗುಡಿಸಿ ಒಂದೆಡೆ ಕುಳಿತು ಹೇನು ಹೆಕ್ಕುತ್ತ, ಹರಟೆ ಹೊಡೆಯುತ್ತ ಇನ್ನಷ್ಟು ಹೂ ಬೀಳಲೆಂದು ಕಾಯಹತ್ತಿದರು.

## ೮. ಮುನ್ನಿಮಾ

ಸಾರ್ವಜನಿಕರ ಹಣ ಬಳಸಿ, ಪ್ರವಾಸಿ-ಮಂದಿರ, ವಿಶ್ರಾಂತಿ-ಗೃಹಗಳನ್ನು ದೇಶದ ಮೂಲೆಮೂಲೆಯಲ್ಲಿ ಕಟ್ಟಿಸಿದರೂ ಅವು ಸಾರ್ವಜನಿಕರ ಬಳಕೆಗೆ ಸಿಗುವದು ತೀರ ಅಪರೂಪ. ರಾಜಕಾರಣಿಗಳು, ಅವರ ಆಪ್ತೇಷ್ಟರು, ಪ್ರಣಯಿಗಳು, ಅಧಿಕಾರಿಗಳು, ಅವರ ಪರಿಚಯದವರು ಇಂತಹ ಸೌಲಭ್ಯಗಳನ್ನು ಸದಾಕಾಲ ತಮ್ಮವನ್ನಾಗಿ ಮಾಡಿಕೊಳ್ಳುವದರಿಂದ ಇತರರಿಗೆ ಅಲ್ಲಿ ಅವಕಾಶವೇ

---

* ಮಹುವಾ-ಮರ. ಆದಿವಾಸಿಗಳಿಗೆ ಕಲ್ಪವೃಕ್ಷದಂತೆ. ಅವರ ಹೂಗಳು ಆಹಾರದಂತೆ. ಅವುಗಳಿಂದ ಉತ್ಕೃಷ್ಟವಾದ ಸೆರೆ ತಯಾರಾಗುತ್ತದೆ. ಬೀಜಗಳಿಂದ ದಿನಬಳಕೆಯ ಎಣ್ಣೆ ದೊರೆಯುತ್ತದೆ. ಮರ ಒಳ್ಳೆಯ ಕಟ್ಟಿಗೆ ಪೂರೈಸುತ್ತದೆ.

ಇಲ್ಲ. ಎಂದಾದರೊಮ್ಮೆ ಅದು ಖಾಲಿ ಇದ್ದರೂ ಅದರಲ್ಲಿ ಪ್ರವೇಶ ದೊರಕಿಸಲು ಮುಖ್ಯಕಚೇರಿಯಲ್ಲಿರುವ ಇಂಜಿನಿಯರರನ್ನೋ, ಇತರ ಅಧಿಕಾರಿಗಳನ್ನೋ ಭೆಟ್ಟಿಯಾಗಿ, ಕಾದು, ಮುಕ್ಕಾಲುಸಂದರ್ಭಗಳಲ್ಲಿ 'ಇಲ್ಲ' ಅನಿಸಿಕೊಂಡೇ ಬರುವ ದಾಗುವದರಿಂದ ಜೇಬುಗಳನ್ನು ಬರಿದುಮಾಡಿ ಕಳಿಸುವ ಹೊಟೆಲುಗಳಿಗೇ ಶರಣುಹೋಗಬೇಕಾಗುತ್ತದೆ. ವಿವಿಧ ಖಾತೆಯವರು ತಮ್ಮವೇ ವಾಹನ ಸೌಕರ್ಯ, ಶಾಲೆ, ಆಸ್ಪತ್ರೆಗಳನ್ನು ನಿರ್ಮಿಸಿಕೊಳ್ಳುವಂತೆ, ಇಂದಿನ ದಿನಗಳಲ್ಲಿ ವಿಶ್ರಾಂತಿ-ಗೃಹಗಳನ್ನೂ ಕಟ್ಟಿಕೊಳ್ಳಲಾರಂಭಿಸಿದ್ದಾರೆ. ಇಡೀ ವರ್ಷ ಅವು ಧೂಳು ತಿನ್ನುತ್ತ ಬಿದ್ದಿದ್ದರೂ ಇತರರಿಗೆ ಅಲ್ಲಿ ಸುತರಾಂ ಪ್ರವೇಶವಿಲ್ಲ.

ಗಿರಿಧಾಮವಾದ ಪಚಮಡಿಯಲ್ಲಿ ಇಂಥ ಅನೇಕ ವಸತಿ-ಗೃಹಗಳಿದ್ದರೂ ಯಾರೂ ಸ್ವಾಗತಿಸದಿದ್ದುದರಿಂದ ಮುಂದೇನು ಮಾಡಬೇಕೆಂದು ತಿಳಿಯದೇ ಇದ್ದ ಚಿಕ್ಕಮನೆಯನ್ನೇ ಚಹಾದಂಗಡಿ, ಭೋಜನಾಲಯ, ವಸತಿ-ಗೃಹವನ್ನಾಗಿ ಏರ್ಪಡಿಸಿದ್ದ ಕೇದಾರನನ್ನು ವಿಚಾರಿಸಿದಾಗ, "ತನ್ನ ಎಲ್ಲ ಖೋಲಿಗಳೂ ತುಂಬಿ ಹೋಗಿವೆ" ಎಂದು "ಇವರಿಗೆ ನೀವೇನಾದರೂ ಸಹಾಯಮಾಡುವಂತೆ ಇದ್ದೀರಾ ದಾದಾ?" ಎಂದು ಕೆಮ್ಮುತ್ತ, ಚಹ ಕುಡಿಯುತ್ತ ಜಗಲಿಯ ಮೇಲೆ ಕುಳಿತ ಮುದಿಯನನ್ನು ವಿಚಾರಿಸಿದ. ಕಪ್ಪು ಕೆಳಗಿಟ್ಟು ಎರಡು ಸಲ ಜೋರಾಗಿ ಕೆಮ್ಮಿ, "ನೀವೆಷ್ಟು ಜನ ಇದ್ದೀರಿ?" ಎಂದು ಮುದಿಯ ವಿಚಾರಿಸಿದ. ಕೊಟ್ಟ ಉತ್ತರದಿಂದ ತೃಪ್ತಗೊಂಡು, "ಮುನ್ನಿಮಾಳ ಕೋಣೆ, ಇವರಿಗೆ ಹೇಳಿ ಮಾಡಿಸಿ ದಂತೆ ಇದೆ" ಎಂದು ಕೇದಾರನನ್ನು ಉದ್ದೇಶಿಸಿ ಹೇಳುತ್ತ, ಹತ್ತಿರದ ಹಿಟ್ಟಿನ ಗಿರಣಿಯಲ್ಲಿ ಕೆಲಸಮಾಡುತ್ತಿದ್ದ ಹುಡುಗನೊಬ್ಬನನ್ನು ಕರೆದು, "ನೋಡು, ಇವರಿಗೆ ಮುನ್ನಿಮಾಳ ಖೋಲಿ ತೋರಿಸು" ಎಂದು ಕಳುಹಿಸಿದ. "ಮನೆಯಲ್ಲಿ ಯಾರೂ ಇಲ್ಲದ್ದರಿಂದ ಈಗ ಅವಳನ್ನು ಕರೆದು ತರುತ್ತೇನೆ" ಎಂದು ಹೋದವನು ಅರ್ಧತಾಸಿನ ನಂತರ ಸುಮಾರು ಇಪ್ಪತ್ತೈದು ವರ್ಷದ ಗೃಹಿಣಿಯೊಬ್ಬಳನ್ನು ಕರೆದುಕೊಂಡು ಬಂದ. "ಎಷ್ಟು ಹೊತ್ತು ಕಾಯಬೇಕಾಯಿತಲ್ಲವೆ ಭಯ್ಯಾss?" ಎನ್ನುತ್ತ ಮುಂದೆ ಮಾಡಿದ ಬಿದಿರಿನ ಬಾಗಿಲನ್ನು ಹಿಂದೆ ಸರಿಸಿ ಮನೆಯನ್ನು ಹೊಕ್ಕಳು.

"ತಲೆಯನ್ನು ಸಂಭಾಳಿಸಿಕೊಳ್ಳಿ. ಇಲ್ಲಿ ತಗ್ಗು ಇದೆ. ಅಲ್ಲಿ ಮೆಟ್ಟಲಿದೆ." ಎಂದು ಅವಳೇ ಮಾರ್ಗದರ್ಶನ ಮಾಡಿ, ಹವೆಯಾಡಲು ಒಂದು ಕಿಂಡಿ ಕೂಡಾ

ಇಲ್ಲದ ಖೋಲಿ ತೋರಿಸಿದಳು. ಒಪ್ಪಿಗೆಯಾದರೆ ಬಟ್ಟೆ-ಬರೆ ತೆಗೆದು ಗುಡಿಸಿ ಕೊಡುವೆನೆಂದಳು. ದನದ ವಾಸಕ್ಕೆ ಕೂಡ ಯೋಗ್ಯವಿರದ ಸ್ಥಾನವನ್ನು ಜನರಿಗೆ ಬಾಡಿಗೆ ಕೊಡುತ್ತಿದ್ದಳು ಅವಳು. ಅಲ್ಲಿಯ ಸಾಮಾನ್ಯ ಜನರ ಹೃದಯದ ಬಡಿತವನ್ನು ತೀರ ಸಮೀಪದಿಂದ ಕೇಳಲು ಇದೊಂದು ಸದವಕಾಶವೆಂದು, ಒಪ್ಪಿಗೆ ಸೂಚಿಸಿ, "ಬಾಡಿಗೆ ಎಷ್ಟು?" ಎಂದು ವಿಚಾರಿಸಿದಾಗ, "ಅದೆಲ್ಲವನ್ನೂ ದಾದಾನೇ ನಿರ್ಧರಿಸುವವನು, ಅವನ ಮಾತೇ ನಮಗೆಲ್ಲ ವೇದವಾಕ್ಯ" ಎಂದು ದಾದಾನಲ್ಲಿಯ ತನ್ನ ವಿಶ್ವಾಸವನ್ನು ವ್ಯಕ್ತಪಡಿಸಿದಳು. ಹುಲುಸಾಗಿ ಬೆಳೆಸಿದ ಗಡ್ಡ, ಮೀಸೆ, ತಲೆಕೂದಲು ಶ್ವೇತವರ್ಣ ತಾಳಿ ಕವಿ ರವೀಂದ್ರರನ್ನು ನೆನಪಿಗೆ ತರುತ್ತಿದ್ದ ದಾದಾನು, "ಬಾಡಿಗೆ ಎಷ್ಟ?" ಎಂದು ನಾನು ಕೇಳಿದಾಗ, "ನೀವೆಷ್ಟು ಕೊಡಬಲ್ಲಿರಿ?" ಎಂದು ಮರುಸವಾಲು ಹಾಕಿದ. "ಸಾಮಾನಿನ ಬೆಲೆಯನ್ನು ಅಂಗಡಿಕಾರನು ಹೇಳುತ್ತಾನೆಯೇ ಹೊರತು, ಗಿರಾಕಿ ನಿರ್ಧರಿಸುವದಿಲ್ಲವಲ್ಲ" ಎಂದು ನಕ್ಕು ಹೇಳಿದಾಗ, "ನೀವು ನಿಲ್ಲಬಯಸುವಾಗ ನಾಲ್ಕು ದಿನಕ್ಕೆ ಹತ್ತು ರೂಪಾಯಿಗಳು ಹೆಚ್ಚಾದವೇ?" ಎಂದು ವಿಚಾರಿಸಿದ. ಇಂಥ ಅವಕಾಶಕ್ಕಾಗಿ ಎಷ್ಟೇ ಕೊಡಬಹುದೆಂದು ಮನಸ್ಸಿನಲ್ಲಿ ಅಂದುಕೊಂಡು, ಅವನ ಬಾಡಿಗೆ ಒಪ್ಪಿ ಕೊಂಡು, ಮುನ್ನಿಮಾ ತೋರಿಸಿದ ಖೋಲಿ ಹೊಕ್ಕಾಗ ಗುಡಿಸಿದ ಧೂಳು ಎಲ್ಲ ಕಡೆಗೆ ತಾಂಡವವಾಡುತ್ತಿತ್ತು.

ಕೂಡ್ರಲು ಒಂದೂ ಆಸನವೂ ಇರಲಿಲ್ಲ. ನಿಂತಲ್ಲೇ ತಾನು ಕೊಡಮಾಡಿದ ಸೌಕರ್ಯಗಳನ್ನು ಆಕೆ ವಿವರಿಸಿದಳು: "ತಾತ್ಪೂರ್ತಿಕವಾಗಿ ವಿದ್ಯುತ್-ಜೋಡಣೆ ಯಿದೆ. ಬಲ್ಬ ಮಾತ್ರ ಕೆಟ್ಟುಹೋಗಿದೆ. ನೀರಿಗಾಗಿ ನಮ್ಮ ಹಿಂದಿನ ರಸ್ತೆಯಲ್ಲಿ (ಸಾರ್ವಜನಿಕ) ನಲ್ಲಿಯಿದೆ. ಅಕ್ಕಾ, ಎದುರಿಗೆ ಆ ಸಣ್ಣ ಕಟ್ಟಡ ಇದೆಯಲ್ಲ, ಅದೇ ನಾವೆಲ್ಲ ಬಳಸುವ (ಸಾರ್ವಜನಿಕ) ಕಕ್ಕಸ. ಸುತ್ತಮುತ್ತ ಬೇಕಾದಷ್ಟು ಮಳೀ-ನೀರಿನ ಪ್ರವಾಹಗಳಿವೆ. ಸ್ನಾನಕ್ಕೇನೂ ಸಮಸ್ಯೆಯಿಲ್ಲ. ಊಟ-ತಿಂಡಿಗಂತೂ ಕೇದಾರನ ಅಂಗಡಿಯಿದೆ. ಬೇರೇನಾದರೂ ಬೇಕಿದ್ದರೆ ಹಿಂಜರಿಯಬೇಡಿ. ಈಗ ಒಂದು ಕಪ್ಪು ಚಹಾ ಮಾಡಿಕೊಡಲೇ?" ಎಂದಳು. ಕಡಿಮೆಯ ಬಾಡಿಗೆಯಲ್ಲಿ ಆಕೆ ಕೊಡಮಾಡಿದ ಸವಲತ್ತುಗಳ ವಿವರಣೆಯನ್ನು ಅಚ್ಚರಿಯಿಂದ ಕೇಳುತ್ತ ಒಂದು ವಿದ್ಯುತ್ ಬಲ್ಬ ಇದ್ದರೆ, ಏನಾದರೂ ಓದಬಹುದು, ಬರೆಯಬಹುದು ಎಂದು ಒಂದನ್ನು ಕೊಂಡುತಂದರೆ, "ತಂತಿಯಲ್ಲಿ ವಿದ್ಯುತ್ ಹರಿಯದೇ ಆರು

ತಿಂಗಳಾದವು" ಎಂದು ಆಕೆ ಹೇಳಿದಳು. "ಹಣ ಕೊಟ್ಟರೂ ಈ ವಿದ್ಯುತ್ ಇಲಾಖೆಯವರು ಈ ರೀತಿ ಕೆಲಸಮಾಡುತ್ತಾರೆ ನೋಡು ಭಯ್ಯಾऽऽ" ಎಂದು ಅಸಮಾಧಾನ ವ್ಯಕ್ತಪಡಿಸಿದಳು.

ಮನೆಯಲ್ಲಿದ್ದ ಒಂದೇ ಕಂದೀಲನ್ನು ಉರಿಸಿ, ನೆರೆಯ ಹುಡುಗರನ್ನು ಕರೆದು, ಇದ್ದ ಕಟಿಯಾ (ಹುರಿಕತ್ತದ ಮಂಚ)ವನ್ನು ಜಗಲಿಗೆ ಹಾಕಿಸಿ, ಕೂಡ್ರ ಹೇಳಿ ತಾನು ನೆಲದ ಮೇಲೆ ಕುಳಿತಾಗ ಎಲ್ಲಿಂದಲೋ ಎರಡು ವರ್ಷದ ಮಗು ಬಂದು ತಾಯ ಮೊಲೆಹಾಲನ್ನು ಹೀರಲಾರಂಭಿಸಿತು. ಹಿರಿಮಗಳು, ಎರಡನೆಯವಳನ್ನು ಗುದ್ದಿ ಅಳಿಸಿದ್ದರಿಂದ, "ನೀನು ಸ್ವಾರ್ಥಿ ಕಮೀನ್" ಎಂದು ಬೈದು ಅವಳನ್ನು ಥಳಿಸಿದಳು. ಮಕ್ಕಳನ್ನು ಹಾಗೆ ಹೊಡೆಯಬಾರದು ಎಂದಾಗ "ನಿನಗೆ ಗೊತ್ತಿಲ್ಲ ಭಯ್ಯಾ, ಇವರು ರಾಕ್ಷಸವರ್ಗದವರು" ಎಂದು ಮಕ್ಕಳ ತಾಯಿ ಮುನ್ನಿಮಾ ಎಂದು ಬಿರುದು ಪಡೆದಾಕೆ ಹೇಳಿದಾಗ ವಿರೋದಾಭಾಸವೆನಿಸಿತು. ಆಮೇಲೆ ಮಗಳನ್ನು ಸಮಾಧಾನಪಡಿಸಲು ತಿಂಡಿಗೆ ಹತ್ತುಪೈಸಾ ಕೊಟ್ಟು ಆಗಂತುಕನ ಊರು, ಕುಟುಂಬ, ವೃತ್ತಿ, ಬಂದ ಕೆಲಸಗಳನ್ನೆಲ್ಲ ವಿಚಾರಿಸಿದರೂ ಅವನೆಲ್ಲ ಆಕೆ ಅರ್ಥಮಾಡಿಕೊಳ್ಳುವ ಗೋಜಿಗೆ ಹೋದಂತೆ ಅನಿಸಲಿಲ್ಲ.

ಅಡಿಗೆ, ಮನೆಗೆಲಸ ಎಲ್ಲವನ್ನೂ ಮರೆತು ತನ್ನ ವೃತ್ತಾಂತವನ್ನು ಏಕಪ್ರಕಾರವಾಗಿ ಹೇಳಲಾರಂಭಿಸಿದ್ದರಿಂದ, ಮುನ್ನಿಮಾಗಿಂತ 'ಮಾತಿನಮಲ್ಲಿ' ಹೆಸರು ಆಕೆಗೆ ಸಮಂಜಸವಾಗಿತ್ತು ಅನಿಸಿತು. "ನಾಗಪೂಜೆಗೆ ದೂರದೂರದಿಂದ ನಾಗದ್ವಾರಕ್ಕೆ ಭಕ್ತರು ಬರುವದರಿಂದ, ಅಲ್ಲಿ ನಡೆಯುವ ಒಂದು ವಾರದ ಜಾತ್ರೆಯಲ್ಲಿ ನನ್ನವರು ಚಹಾದಂಗಡಿಯಿಟ್ಟಿದ್ದಾರೆ. ಅವರು ಆದರಾತಿಥ್ಯಗಳಿಗೆ ಹೆಸರುವಾಸಿ. ಈಗ ಇಲ್ಲಿದ್ದರೆ ಎಷ್ಟು ಆನಂದಿಸುತ್ತಿದ್ದರೋ ಏನೋ !" ಎಂದು ಪತಿಯಲ್ಲಿರುವ ತನ್ನ ವಿಶ್ವಾಸವನ್ನು ವ್ಯಕ್ತಪಡಿಸಿದಳು. ಪತಿಯ ಹೆಸರು ರಮಣಯ್ಯ. ದಕ್ಷಿಣದ ಈ ಹೆಸರು ಇಲ್ಲಿಯೂ ಪ್ರಚಲಿತವಿದೆಯೇ ಎಂದು ವಿಚಾರಿಸಿದಾಗ, ಆಕೆ ತಮ್ಮ ವಿವಾಹದ ಹಿನ್ನೆಲೆಯನ್ನು ವಿವರಿಸಿದಳು: "ನಾನು ಮೇಲುಜಾತಿಯ ಬ್ರಾಹ್ಮಣಳು. ಅವರು ಕಲಾಲ-ಜಾತಿಯವರು. ನಮ್ಮದು ಪ್ರೇಮ-ವಿವಾಹ. ಅವರು ಆಂಧ್ರಪ್ರದೇಶದ ನೆಲ್ಲೂರಿನವರು. ಹೈದರಾಬಾದದಲ್ಲಿ, ಸೈನ್ಯದಲ್ಲಿ ಅಡಿಗೆಯವರೆಂದು ಕೆಲಸಮಾಡುತ್ತಿದ್ದರು. ವರ್ಗವಾಗಿ

ಇಲ್ಲಿ ಬಂದರು. ಆಗಿನ್ನೂ ನಾನು ಹದಿನೈದು ವರ್ಷದವಳು. ನನ್ನ ರೂಪರಾಶಿಗೆ ಅವರು ಮೋಹಿತರಾದರು. ನನ್ನ ಪೂಜಾರಿ-ತಂದೆ ಅವರನ್ನು ವಿರೋಧಿಸಿ, ಮನೆಯಿಂದ ನನ್ನನ್ನು ಹೊರಗೆ ಹಾಕುತ್ತೇನೆಂದು ಬೆದರಿಸಿದರೂ ಪಟ್ಟು ಹಿಡಿದು ಅವರನ್ನೇ ಮದುವೆಯಾದೆ. ಅವರ ಹೃದಯವೈಶಾಲ್ಯ ಸಾಮಾನ್ಯ ವಾಗಿ ಯಾರಿಗೂ ಇರುವದಿಲ್ಲ. ತಾನು ಸ್ವತಃ ಕಲಿಯದಿದ್ದರೂ ಇನ್ನೊಬ್ಬರಿಗೆ ಕಲಿಯಲು ಸಹಾಯಮಾಡುವದು ಅವರಿಗೆ ಪಂಚಪ್ರಾಣ. ಅವರ ಸಹಾಯ ದಿಂದ ಕಲಿತು ಮುಂದೆ ಬಂದವರು ಅದೆಷ್ಟೋ ಮಂದಿ! ಒಂದೊಮ್ಮೆ ಅವರಿಗೆ ಫೋಟೋ ತೆಗೆಸಿಕೊಳ್ಳುವದು, ಒಳ್ಳೆ ಬಟ್ಟೆ-ಬರೆ ತೊಡುವದು ಬಹಳ ಸೇರು ತ್ತಿತ್ತು. ಆದರೆ ವಿದ್ಯಾರ್ಥಿಗಳಿಗೆ ಸಹಾಯಮಾಡುವದಕ್ಕೋಸ್ಕರ ಅದನ್ನು ಬಿಟ್ಟುಬಿಟ್ಟರು. ಆದರೆ ಅಯೋಗ್ಯರಿಗೆ ಸಹಾಯಮಾಡುವದೂ ಪಾಪವಂತೆ. ನಮ್ಮಿಂದ ಸಹಾಯಪಡೆದು ಮುಂದೆ ಬಂದವರು ಇಂದು ನಮಗೆ ಯಾವದೇ ಕೃತಜ್ಞತೆ ಸಲ್ಲಿಸುವದಿರಲಿ, ಮಾತನಾಡಿಸಲೂ ಸಿದ್ಧರಿಲ್ಲ. ಎಂತಹ ಕೃತಘ್ನರು ! ನಮಗೆ ಎರಡು ಗಂಡು, ಎರಡು ಹೆಣ್ಣು ಮಕ್ಕಳಿದ್ದವು. ಹಿರಿಯ ಮಗನನ್ನು ದೇವರು ಕೊಂಡೊಯ್ದ. ಈಗ ಮೂರೇ ಉಳಿದಿವೆ. ಮಕ್ಕಳಿಗೆ ವಿದ್ಯಾ-ಬುದ್ಧಿ ಕಲಿಸಿ ಮುಂದೆ ತರುವ ಒಂದೇ ಧ್ಯೇಯವನ್ನು ಅವರು ಇಟ್ಟುಕೊಂಡಿದ್ದರಿಂದ, ಮೊದಲು ವರ್ಷಕ್ಕೊಮ್ಮೆ ನೆಲ್ಲೂರಿಗೆ ಹೋಗಿಬರುತ್ತಿದ್ದವರು, ಹಣದ ಉಳಿತಾಯಕ್ಕಾಗಿ ಈಗ ಐದು ವರ್ಷಕ್ಕೊಮ್ಮೆ ಹೋಗಿಬರುತ್ತಾರೆ. ಅವರಿಗೆ ಸೈನ್ಯದ ನೌಕರಿ ಬಿಟ್ಟು ಸ್ವತಂತ್ರವನ್ನು ಉದ್ಯೋಗ ಮಾಡುವ ಮನಸ್ಸಿದ್ದರೂ ಕಮಾಂಡಂಟ್‌ಸಾಹೇಬರು ಬಿಡಲು ಸಿದ್ಧರಿಲ್ಲ..." ಎಂದು ಪತಿದೇವನ ಮಹಾತ್ಮೆ ಹೇಳುತ್ತಿದ್ದಾಗ, ನೆರಮನೆಯ ಹದಿನೆಂಟರ ಯುವಕನೊಬ್ಬ ಬಂದು "ಭಾಯಿ ಸಾಹೇಬ್ (ರಮಣಯ್ಯ) ಒಂದು ದೊಡ್ಡ ಪಾತೇಲಿ ಕಡ್ಲೆಹಿಟ್ಟು ಮತ್ತು ಸೇಂಗಾ ತರಲು ಹೇಳಿದ್ದಾರೆ. ನಾಳೆ ಬೆಳಿಗ್ಗೆ ಐದು ಗಂಟೆಗೇ ನಾನು ಹೊರಡ ಲಿದ್ದೇನೆ. ಅಷ್ಟರಲ್ಲಿ ಎಲ್ಲವನ್ನೂ ಸಿದ್ಧವಾಗಿಡಿ" ಎಂದು ನೆನಪಿಸಿ ಹೋದ.

ಕೇದಾರನ ಹೊಟೇಲಿನ ಊಟ ಕೇದಾರನಾಥಕ್ಕೆ ಹೋದಲ್ಲಿ ಅತ್ಯಮೂಲ್ಯ ವೆನಿಸಬಹುದೇನೋ ! ಆದರೆ ಪಚಮಡಿಯಲ್ಲಿ ತಮಗೆ ಏನೂ ರುಚಿಸದ್ದರಿಂದ ಅರೆಹೊಟ್ಟೆಯಲ್ಲಿ ಒಂತಿರುಗಬೇಕಾಯಿತೆಂದು ಮುನ್ನಿಮಾಳಿಗೆ ಹೇಳಿದಾಗ, "ಅವನಿಗೆ ಧನಲೋಭ ಬಹಳವಾಗಿದೆ. ಆದ್ದರಿಂದ ಬಲಿತ, ಕೊಳೆತ ತರಕಾರಿ,

ದುಡ್ಡಿಗೆ ಪುಂಥೇರು ತಂದು ಹಸಿದು ದಣಿದ ಗಿರಾಕಿಗಳಿಗೆಲ್ಲ ಬಡಿಸಿ ಹಣ ಸಂಪಾದನೆಯಲ್ಲಿ ತೊಡಗಿದ್ದಾನೆ" ಎಂದು ಅವನ ಭರ್ತ್ಸನೆಗೆ ತೊಡಗಿದಾಗ, ದಾದಾ ಬಂದು 'ಕೇದಾರನು ನಿನ್ನನ್ನು ನೆನೆಸಿಕೊಳ್ಳುತ್ತಿದ್ದ' ಎಂದ. ಆಕೆ ಲಗು ಬಗೆಯಿಂದ ಸೀರೆ ಬದಲಿಸಿ, ಮಕ್ಕಳನ್ನು ನೆರೆಮನೆಯಲ್ಲಿ ಆಡಲು ಬಿಟ್ಟು ಹೊರಟೇಬಿಟ್ಟಳು. ಎರಡು ತಾಸಿನ ನಂತರ ಹಿಂತಿರುಗಿ, "ಈಗ ಬಹಳ ದಣಿದಿದ್ದೇನೆ. ಅಡಿಗೆ ಮಾಡುವ ಗೋಜಿಗೆ ಹೋಗುವದಿಲ್ಲ. ಮುಂಜಾನೆ ಮಾಡಿದ ರೋಟಿಗಳಿವೆ. ಎಲ್ಲಿಂದಾದರೂ ಪಲ್ಯವನ್ನು ತರಿಸುತ್ತೇನೆ" ಎನ್ನುತ್ತ ತನ್ನ ಹಿರಿಯ ಮಗಳನ್ನು ಕರೆದು, ಪಾತ್ರೆಯೊಂದಿಗೆ ಕೇದಾರನ ಅಂಗಡಿಗೆ ಕಳುಹಿಸುತ್ತ "ಎಂಟಾಣೆಯ ಪಲ್ಯ ಕೊಡಲು ಹೇಳು. ಹಣವನ್ನು ನಾಳೆ ಕೊಡುತ್ತೇನೆಂದು ಹೇಳು" ಅಂದಳು. ಆತ ಚಟ್ನಿಯಷ್ಟು ಪಲ್ಯ ಕಳುಹಿಸಿದ್ದನ್ನು ನೋಡಿ, "ಎರಡು ತಾಸು ಸತತವಾಗಿ ಪೂರಿಗಳನ್ನು ಲಟ್ಟಿಸಿ ಕೊಟ್ಟರೆ, ಪಲ್ಯಕ್ಕೆ ಹಿಂದೆ ಮುಂದೆ ನೋಡುತ್ತಾನೆ! ಹಣಕ್ಕೆ ಪಲ್ಯ ಕೊಡೆಂದರೆ ಪುಕ್ಕಟೆ ಕೊಟ್ಟಂತೆ ಮಾಡುತ್ತಾನೆ" ಎಂದು ಮನಸ್ಸೀ ಬೈದಳು. ಉದ್ರಿ ಕೊಟ್ಟು ಪಲ್ಯದ ಕಾಸು ಎಂದೂ ವಸೂಲ ಆಗುವದಿಲ್ಲವೆಂದು ಕೇದಾರನು ಚೆನ್ನಾಗಿ ಮನಗಂಡಿರಬೇಕು!

ಅವೇಳೆಯಲ್ಲಿ ನಡುಮನೆಯಿಂದ ಕುಕ್ಕುಟದ ಆರ್ತನಾದ ಕೇಳಿತು. ಒಳಗಡೆ ಕಣ್ಣುಹಾಯಿಸಿದಾಗ ಯಾವದೋ ಕ್ಷುಲ್ಲಕ ಕಾರಣಕ್ಕಾಗಿ ಕುಕ್ಕುಟ-ಮಾತೆ ಪತಿಯೊಡನೆ ಜಗಳ ಕಾದು ನಿದ್ರಾಲೋಕದಿಂದ ಭೂಮಿಗೆ ಇಳಿದು ಬಂದಿದ್ದಳು. "ಇವುಗಳ ಮನೆ ಹಾಳಾಗ! ಇಡೀ ದಿನ ಕಾಡುತ್ತಿವೆ. ಅಲ್ಲದೇ ಮನೆತುಂಬ ಹೇಸಿಗೆ ಮಾಡುತ್ತವೆ. ರಾತ್ರಿಯೂ ಸುಖವಾಗಿ ಮಲಗಲು ಬಿಡವು" ಎಂದು ಶಾಪಹಾಕುತ್ತ ಅವುಗಳ ಹಿಂದೆ ಮುಂಟ್ಟಾಟವಾಡಿ, ಕೊನೆಗೊಮ್ಮೆ ರೆಕ್ಕೆಗಳನ್ನು ಹಿಡಿದು ಮಾಡಿನ ಜಂತೆಗೇರಿಸಿದಳು. ಹುಂಜ ಇನ್ನೂ ಕೆಂಗಣ್ಣಿನಿಂದಲೇ ನೋಡುತ್ತಿತ್ತು. ಹೇಂಟೆ ದೂರ ಕುಳಿತು ತೂಕಡಿಸಲಾರಂಭಿಸಿತು.

"ಭಯ್ಯಾ, ನೀನು ಹಾಸಿಗೆ-ಪಾಸಿಗೆ ಏನೂ ತಂದಂತೆ ಇಲ್ಲ. ಈ ನೆಲದ ಬದಲಾಗಿ ಕಟಿಯಾದ ಮೇಲೆಯೇ ಮಲಗು, ಖೋಲಿ ಮನಸ್ಸಿಗೆ ಬರದಿದ್ದರೆ ಈ ಜಗುಲಿಯ ಮೇಲೆಯೇ ನಿದ್ರಿಸು," ಎಂದು ಎಲ್ಲಿಂದಲೋ ಒಂದು ಹರಕು ಗೋಣಿ-ತಟ್ಟು ತಂದು ಚಾರಪಾಯಿಯ ಮೇಲೆ ಹಾಸಿದಳು. ರಾತ್ರಿಯೆಲ್ಲ ಅಬ್ಬರದ ಗಾಳಿ ಬೀಸುತ್ತದೆ ಎಂದು ಹರಿದು ಚಿಂದಿಯಾದ ಒಂದು ಸೀರೆ

ಯನ್ನು ಗಳಗಳಿಗೆ ಕಟ್ಟಿ ಇಳಿಬಿಟ್ಟಳು. ತಂದಿದ್ದ ಎರಡೇ ಸಾಮಾನುಗಳನ್ನು ಬೋಲಿಯಲ್ಲಿ ಇಟ್ಟು ಬಾಗಿಲು ಮುರುಕಾದರೂ, ಸಮಾಧಾನಕ್ಕೆಂದು ಬೀಗ ಜಡಿದು, ಜಗಲಿಯಲ್ಲಿ ಮಲಗುವ ತಯಾರಿಯಲ್ಲಿದ್ದಾಗ ಯಾರೋ ಕರೆದಂತೆ ಆಯಿತು. ಹಣ್ಣುಮುದುಕಿಯೊಬ್ಬಳು ನಡುಮನೆಗೆ ಬಂದಳು. ಆಕೆ ಯಾರು ಎಂದು ವಿವರಿಸಲು ಮಾತಿನಮಲ್ಲಿ ಇನ್ನೊಂದು ಅರ್ಧ ತಾಸು ವ್ಯಯ ಮಾಡಿದಳು. "ಇಬ್ಬರು ಹುಡುಗರು, ಒಬ್ಬ ಮಗಳು, ಇವಳಿಗಿದ್ದರೂ ಬುದ್ಧಿಭ್ರಂಶವಾಗಿದ್ದರಿಂದ ಯಾರೂ ಹತ್ತಿರಮಾಡಿಕೊಳ್ಳುವದಿಲ್ಲ" ಎನ್ನುತ್ತಿದ್ದಾಗ ಮುದುಕಿ "ನನ್ನ ಗೋಣಿಯ ತಟ್ಟು ಇತರ ಬಟ್ಟೆ ತೆಗೆಯಲು ನಿನಗೆ ಹೇಳಿದವರಾರು?" ಎಂದು ಜಗಳ ಕಾದು ಆ ರಾತ್ರೆಯಲ್ಲೇ ತನ್ನ ಸಾಮಾನಿನೊಂದಿಗೆ ಎಲ್ಲೋ ಹೋದಳು. ಇಷ್ಟಾದ ನಂತರ ಬಳಲಿದ ದೇಹಕ್ಕೆ ನಿದ್ರೆಯ ಸುಖ ಲಭಿಸಿತು.

ಹೊರಜಗಲಿಯಲ್ಲಿ ಮಲಗಿದ್ದರಿಂದ ಪೆಜ್ಜಿನ ಸ್ವಾತಂತ್ರ್ಯ ಲಭಿಸಿತ್ತು. ತೀರ ನಸುಕಿನಲ್ಲೇ ಎದ್ದು ಪ್ರಾತರ್ವಿಧಿಗಳನ್ನು ತೀರಿಸಿ, ತಿಂಡಿ-ತೀರ್ಥಗಳಿಗೆಂದು ಊರೆಲ್ಲ ಅಲೆದದ್ದಾಯಿತು. ಕೇರಳದವನೊಬ್ಬನ ಅಂಗಡಿ ಹೊಕ್ಕು ಅರ್ಧ ಗಂಟೆ ಕಾದ ನಂತರ ಬೇಯದ ಬಿಸಿಬಿಸಿ ಇಡ್ಲಿ, ಹಳಸಿದ ಸಾಂಬಾರ್ ಬಂದವು. ಅದನ್ನು ಹಾಗೇ ಬಿಟ್ಟು ಹಣ ಕೊಟ್ಟು ಬೇರೊಂದು ಅಂಗಡಿಗೆ ಹೋಗಿ ಚಹಾ ಕುಡಿದು ಹಿಂತಿರುಗಿದಾಗ ಮುನ್ನಿಮಾ ಎದ್ದು ಮೈಮುರಿಯುತ್ತಿದ್ದಳು. ನಾಶ್ತಾದ ಸಮಾಚಾರವನ್ನು ವಿಚಾರಿಸಿ, "ಹೇಳಿದರೆ ನಾನೇ ಮಾಡಿಕೊಡುತ್ತಿರಲಿಲ್ಲವೆ?" ಎಂದು ರಾಗವೆಳೆದಳು.

ದರ್ಪಣರಹಿತ ದಾಡಿ ಮಾಡಿಕೊಂಡು, ಕಂಕುಳಿಗೆ ಬಟ್ಟೆ ತುರುಕಿಕೊಂಡು ಮೂರು ಮೈಲು ದೂರದ ಜಟಾಯು-ಶಂಕರ ತೀರ್ಥದಲ್ಲಿ ಮಿಂದು ಹಿಂದಿರುಗುವಷ್ಟರಲ್ಲಿ ಮನೆಯಲ್ಲಿ ೮-೧೦ ಜನ ಸೇರಿ ತಮಗೆ ಮನಸ್ಸಿಗೆ ಬಂದಂತೆ ಮಾತನಾಡುತ್ತಿದ್ದರು. ನನ್ನನ್ನು ನೋಡಿ ಮುನ್ನಿಮಾ, "ಇವರು ಮಾಸ್ಟರ್ ಸಾಹೇಬರು ನಮ್ಮ ಅತಿಥಿಗಳು" ಎಂದು ನೆರೆದವರಿಗೆ ಪರಿಚಯಮಾಡಿಕೊಟ್ಟಳು. ಅಂದು ಮುಂಜಾನೆ ಯಾತ್ರಿಕನೊಬ್ಬ ಸಾರ್ವಜನಿಕ-ಬಾವಿಯ ಮೇಲೆ ತನ್ನ ಬಟ್ಟೆಗಳನ್ನೆಲ್ಲಾ ಕಳಚಿಟ್ಟು, ತನ್ನ ಮಗಳನ್ನು ಕಾವಲು ಕೂಡ್ರಿಸಿ, ಸ್ನಾನಮಾಡುತ್ತಿದ್ದಾಗ ಯಾವನೋ ಒಬ್ಬ ಹತ್ತುರೂಪಾಯಿ ನೋಟು ನೆಲದ ಮೇಲೆ ಬಿದ್ದಿರು

ವದನ್ನು ಕಾವಲಗಾತಿಗೆ ತೋರಿಸಿ, ಅವಳು ಅತ್ತ ನೋಡಿದಾಗ ಅಂಗಿಯ ಕಿಸೆಯಲ್ಲಿದ್ದ ಏಳುನೂರು ರೂಪಾಯಿಗಳನ್ನು ಹಾರಿಸಿ ಪರಾರಿಯಾದನಂತೆ. ಆನಂತರ ಪೋಲಿಸರು ನಾಲ್ಕಾರು ಪೋಲಿಗಳನ್ನು ಬಂಧಿಸಿದರಂತೆ. ಅವರಲ್ಲಿ ಮುನ್ನಿಮಾಳ ತಮ್ಮನೂ ಒಬ್ಬನಿದ್ದನಂತೆ. ಬಂಧಿತರು ಯಾರೆಂದು ನೋಡಲು, ಪೋಲಿಸ-ಠಾಣೆಗೆ ತನ್ನವರೊಬ್ಬರನ್ನು ಓಡಿಸಿದಳು. ಅವಳ ಹಿರಿಯ ತಮ್ಮ, ಬಂಧಿತನಾದ ಕಿರಿಯನನ್ನು ಬಿಡಿಸಿ ತರಲು ಏನೂ ಪ್ರಯತ್ನಮಾಡದ್ದರಿಂದ, ಬೇರೆ ಯಾರಿಗೋ ಹೇಳಿ ಹಿರಿಯನ ಪೂಜೆಮಾಡಿಸುತ್ತೇನೆ ಎಂದಳು. ಪೋಲಿಸರು ಕೂಡಲೇ ತನ್ನ ತಮ್ಮನನ್ನು ಬಿಡುಗಡೆಮಾಡದಿದ್ದರೆ, ತನಗೆ ಸಿನೇಮಾ ಮಾಲಕರಾದ ಪ್ರೇಮ್‌ನಾರಾಯಣರ ಒಳ್ಳೇ ಪರಿಚಯವಿದೆ. ಅವರಿಂದ ಮೇಲಧಿಕಾರಿಗೆ ಹೇಳಿಸಿ ಪೋಲಿಸರ ಮಂಗಳಾರತಿ ಮಾಡಿಸುತ್ತೇನೆಂದು ಒದರಾಡಿದಳು. ಆ ಕಳವನ್ನು ಭಕ್ತರೇ (ಭಗತ್ ಲೋಗ್) ಮಾಡಿದ್ದಾರೆಯೋ ಹೊರತು ಪಚಮಡಿಯವರು ಅಲ್ಲವೇ ಅಲ್ಲವೆಂದು ಅವಳ ವಾದ.

ಮುನ್ನಿಮಾಳನ್ನು ನೋಡಿದಾಗ ಅವಳೊಬ್ಬ ಕಾದಂಬರಿಯ ನಾಯಿಕಿಯಾಗಲು ತುಂಬ ಯೋಗ್ಯಳು ಅನಿಸುತ್ತಿತ್ತು. ಅಲ್ಲಿಯವರ ಜೀವನ ಅವಳ ಸುತ್ತ ಹೆಣೆದುಕೊಂಡಿದೆ. ಅವಳ ಸೊಗಸಿನ ಮಾತುಗಾರಿಕೆಯಿಂದಾಗಿ ಚಿಕ್ಕ ಮಕ್ಕಳು, ಪ್ರಾಯದವರು, ಮುದಿಯರು, ಎಲ್ಲರಿಗೂ ಅವಳೆಂದರೆ ಪಂಚಪ್ರಾಣ. ದಾದಾನ ಮನೆ ಆ ಕೇರಿಯ ಇನ್ನೊಂದು ಮೂಲೆಯಲ್ಲಿ ಇದ್ದರೂ, ಇವಳ ಮನೆಗೆ ಬಂದು ಗಂಟೆಗಟ್ಟಲೆ ಊರ ಸಮಾಚಾರ ಮಾತನಾಡಿ, ಅವಳು ಕೊಟ್ಟ ಚಹಾ ಕುಡಿದು ಹೋಗುತ್ತಿದ್ದ. ನೆರೆಮನೆಯ 'ಬನಿ' ಇದನ್ನೆ ತನ್ನ ಮನೆಯಾಗಿ ಮಾಡಿಕೊಂಡಿದ್ದ. ಆಚೆಮನೆಯ ಫಿರೋಜ ಮತ್ತು ಅವಳ ಯೌವನಭರಿತ ತಂಗಿ, ಬಿಡುವಾದಾಗಲೆಲ್ಲ ಮುನ್ನಿಮಾಳ ದರ್ಶನ ಪಡೆದು ಹೋಗುವರು. ಅವಳ ಆಪ್ತರು, ಬಳಗದವರಂತೂ ಬಂದುಹೋಗುವದಕ್ಕೆ ಮಿತಿಯೇ ಇರಲಿಲ್ಲ. ಬೇರೆ ಯಾರೂ ಮಾತನಾಡಲು ಸಿಗದಾಗ, 'ದುಷ್ಮನ್' ಚಿತ್ರದ ಕಥೆಯನ್ನು ಪೂರ್ಣವಾಗಿ ಈ ಅತಿಥಿಗೆ ಕೇಳಿಸಿದಳು ! ನಂತರ ಪಚಮಡಿಯ ಸುತ್ತಮುತ್ತಲ ಭೂತ-ಪಿಶಾಚಿಗಳ ದಂತ-ಕಥೆಗಳನ್ನು ಹೇಳಿದಳು, ಅವಳ ಮನೆಯಿಂದ ಎರಡು ಮೈಲು ದೂರದಲ್ಲಿ ತಡಸಲೊಂದು ಇದೆಯಂತೆ. ಆಂಗ್ಲರಿಗೆ ಅಂತಹ ಸುಂದರ ತಾಣಗಳು ಬಹಳ ಸೇರುತ್ತವಲ್ಲವೇ? ಆದರೆ

ಆತ್ಮಹತ್ಯೆಮಾಡಿಕೊಳ್ಳುವವರಿಗೂ ಅದು ಆಕರ್ಷಕ ಸ್ಥಳ. ಆಂಗ್ಲ ಪ್ರೇಮಿಯೊಬ್ಬನಿಂದ ಮೋಸಹೋದ ಗೃಹಿಣಿಯೊಬ್ಬಳು ತನ್ನ ಎರಡು ಮಕ್ಕಳೊಂದಿಗೆ ಅಲ್ಲಿ ಬಂದು ಆತ್ಮಹತ್ಯೆಮಾಡಿಕೊಂಡಳು. ಇಂದಿಗೂ ಅವಳ ರೋದನ ಅಲ್ಲಿ ಕೇಳಬರುತ್ತದೆ, ಮೊನ್ನೆಮೊನ್ನೆ ಸಾಹುಕಾರನ ಮಗನೊಬ್ಬನ ಪ್ರೇಮಭಿಕ್ಷೆಯನ್ನು ಬಡ ಶಾಲಾ-ಹುಡುಗಿಯೊಬ್ಬಳು ನಿರಾಕರಿಸಿದ್ದರಿಂದ ಅವರೆಲ್ಲ ಹೊಂಚು ಹಾಕಿ ಅವಳನ್ನು ಅಲ್ಲಿಯೇ ಕೊಂದರಂತೆ. ಇನ್ನಿಬ್ಬರು ಸಹಪಾಠಿಗಳು, ಫಿತೂರಿ ನಡೆಸಿ, ಆತ್ಮಹತ್ಯಮಾಡಿಕೊಳ್ಳುವದೆಂದು ನಿರ್ಧರಿಸಿ ತಡಸಲಿಗೆ ಹೋದರಂತೆ. ಅಲ್ಲಿ ಹುಡುಗ, ಹುಡುಗಿಯನ್ನು ಕೆಳಗೆ ದೂಡಿ ಹಿಂತಿರುಗಿದ. ನಿಜ ಸಂಗತಿ ಊರಿಗೆಲ್ಲ ಗೊತ್ತಾದರೂ ಸಾಹುಕಾರರು ಧನಬಲದಿಂದ ಎಲ್ಲವನ್ನೂ ಅಡಗಿಸಿಬಿಟ್ಟರಂತೆ.

ಮರುದಿನ ನಾಗರಪಂಚಮಿ ಇದ್ದದರಿಂದ ಅಂದು ಉರಿಸಲು ತಂದೆಯಿಂದ ಉಡುಗೊರೆಯಾಗಿ ಬಂದ ಬೆಳ್ಳಿಯ ನೀಲಾಂಜನವನ್ನು ಟ್ರಂಕಿನಲ್ಲಿ ಹುಡುಕುತ್ತಾಳೆ – ಇಲ್ಲವೆ ಇಲ್ಲ ! ಇದು ತಮ್ಮನದೇ ಕೆಲಸವೆಂದು ದೃಢವಾಗಿ ನಂಬಿ, 'ಅವನ ಚಾಳಿಯೆಲ್ಲ ನನಗೆ ಗೊತ್ತಿದೆ. ಮನೆಗೆ ಬರಲಿ ಪೂಜೆಮಾಡಿಸುತ್ತೇನೆ' ಎಂದು ಚೀರಾಡಿದಳು. ತಮ್ಮನು ಎಲ್ಲ ದೇವರ ಆಣೆ ಹಾಕಿ ತಾನು ತೆಗೆದಿಲ್ಲವೆಂದು ಹೇಳಿದಾಗ, ವಿಚಾರಿಸಲು ಫಕೀರನ ಹತ್ತಿರ ಧಾವಿಸಿದಳು. ಒಂಬತ್ತು ವರ್ಷದ ಮಗು ಅದನ್ನು ತೆಗೆದು ಹಿರಿಯರ ಕೈಗೆ ಕೊಟ್ಟಿದೆಯೆಂದು ಫಕೀರನಿಂದ ತಿಳಿದುಕೊಂಡು ಇಂಥ ಮಗು ಯಾರು ಇರಬಹುದು ಎಂದು ನೆರೆಹೊರೆಯವರೊಡನೆ ವಿಚಾರ-ವಿಮರ್ಶೆ ನಡೆಸಿದಳು. ಒಂಬತ್ತು ವರ್ಷದ ತೊಂಭತ್ತು ಮಕ್ಕಳು ಅವಳ ಮನೆಗೆ ಎಡತಾಕುವದರಿಂದ ಯಾರ ಮೇಲೂ ದೃಢವಾದ ಸಂಶಯ ಬರಲು ಸಾಧ್ಯವೇ ಇರಲಿಲ್ಲ. ಮೋಜಿನ ಮಾತೆಂದರೆ ಪ್ರಾರಂಭಕ್ಕೆ ಆ ನೀಲಾಂಜನದ ಬೆಲೆ ಇಪ್ಪತ್ತು ರೂಪಾಯಿ ಇದ್ದರೆ, ಅದು ತಿರುಗಿ ಸಿಗುವ ಸಾಧ್ಯತೆಯಿಲ್ಲವೆಂದಾಗ ಅದರ ಬೆಲೆ ಇನ್ನೂರುರೂಪಾಯಿಗೆ ಏರಿತ್ತು !

ಮುನ್ನಿಮಾಳ ಜೀವನವನ್ನು ಹತ್ತಿರದಿಂದ ನೋಡುವದು ಮೋಜಿನದೆನಿಸಿದರೂ ಮಾರನೆಯ ದಿನವೇ ಹೊರಟು ನಿಂತೆ. ಅವಳ ಖೋಲಿಯ ಬಾಡಿಗೆ, ದಾದಾನ ದಲಾಲಿ, ಕೊಟ್ಟು ಹೊರಟುನಿಂತಾಗ, ಈತ ಯಾವ ಕೆಲಸದ ಮೇಲೆ ಬಂದಿದ್ದ, ಯಾವ ಕೆಲಸದ ಮೇಲೆ ಹೊರಟಿದ್ದಾನೆ ಒಬ್ಬರಿಗೂ ತಿಳಿಯಲಿಲ್ಲ

ಎಂದು ಇಂಥ ವಿಚಿತ್ರ-ಅತಿಥಿ ಸಿಕ್ಕುವದು ಅಪರೂಪವೆಂದು ಅರಿತುಕೊಂಡು ಬಸ್-ನಿಲ್ದಾಣದ ತನಕ ಬೇಡವೆಂದರೂ ಬಂದು ಬೀಳ್ಕೊಟ್ಟಳು.

## ೯. ಕಲಾಕಾರರು

ಮಧ್ಯಪ್ರದೇಶದ ಪರಿಸರ, ಕಲಾಕಾರರಿಗೆ ತುಂಬ ಪ್ರೇರಕವಾಗಿದೆ. ಅಂತೆಯೇ ರಾಜ-ಮಹಾರಾಜರ ಆಶ್ರಯವನ್ನು ಪಡೆದ ಕಲಾಕಾರರು ಉತ್ತಮ ಕೃತಿಗಳನ್ನು ನಿರ್ಮಿಸಿದ್ದಾರೆ. ಸ್ವಾತಂತ್ರ್ಯದ ನಂತರ ಈ ರಾಜಾಶ್ರಯ ತಪ್ಪಿದ್ದರಿಂದ ಕಲಾಕಾರರಿಗೆ ದೊಡ್ಡ ಆಘಾತವಾದಂತಾಯಿತು. ಆದರೆ ನಂತರದ ದಿನಗಳಲ್ಲಿ ಚಿತ್ರಕಲೆಯ ವಿವಿಧ ಅಂಗಗಳಲ್ಲಿ ತರಬೇತಿ ಹೊಂದಿದವರು, ಅನೇಕ ಸಂಸ್ಥೆಗಳಲ್ಲಿ ಆಶ್ರಯಪಡೆದು, ಕಲಾನಿರ್ಮಾಣದಲ್ಲಿ ತೊಡಗಿದ್ದಾರೆ. ಕೆಲವರು ಉದರ ನಿರ್ವಹಣೆಗೆ ಬೇರೊಂದು ವೃತ್ತಿಯನ್ನು ಕೈಕೊಂಡು ಕೇವಲ ಹವ್ಯಾಸಕ್ಕಾಗಿ ಚಿತ್ರರಚನೆಯಲ್ಲಿ ತೊಡಗಿದ್ದಾರೆ. ನಿಸರ್ಗ, ಸೃಷ್ಟಿ-ಸೌಂದರ್ಯ, ಆದಿವಾಸಿಗಳು, ಭಾವಚಿತ್ರ ಮುಂತಾದವು ಅವರು ಆರಿಸಿಕೊಳ್ಳುವ ವಸ್ತು.

ಸಂಗಮ್ ಹೊಟೇಲಿನಲ್ಲಿ ಊಟಕ್ಕೆ ಕುಳಿತಾಗ ಅಲ್ಲಿ ತೂಗ ಹಾಕಿದ ತೈಲ ಮತ್ತು ಜಲವರ್ಣ ಚಿತ್ರಗಳು ಲಕ್ಷ್ಯವನ್ನು ಸೆಳೆದವು. ನೀರಿಗೆ ಹೊರಟ ಹೆಂಗಳೆಯರು, ಜೋಕಾಲಿಯ ಮೇಲೆತೂಗಿಕೊಳ್ಳುವ ಗೆಳತಿಯರು, ಕೈ ಕೈ ಹಿಡಿದು ಹೊರಟ ಸಖಿಯರು ಮುಂತಾದವರನ್ನು ಕಣ್ಣುಕೋರೈಸುವಂತೆ ಚಿತ್ರಿಸಲಾಗಿತ್ತು. ಅವುಗಳ ಅಡಿಯಲ್ಲಿ 'ಕೌಸಲ' ಎಂದು ಕಲಾಕಾರನ ಹೆಸರನ್ನು ನಮೂದಿಸಲಾಗಿತ್ತು. ಈ ಕೌಸಲರ ಬಗ್ಗೆ ವಿವರ ಪಡೆಯಲು ವ್ಯವಸ್ಥಾಪಕರ ಬಳಿ ಹೋದಾಗ, ಅವರು ಹಾಳೆಯೊಂದರ ಮೇಲೆ ಸ್ತ್ರೀ-ಚಿತ್ರದ ರೂಪ ರೇಷೆಗಳನ್ನು ಹಾಕುವದರಲ್ಲಿ ಮಗ್ನರಾಗಿದ್ದರು. ವಿನೋ ಹೇಳಿದಂತೆ, "ಇಲ್ಲಿ ತೂಗಹಾಕಿದ ಚಿತ್ರಗಳ ಕಲಾಕಾರ ಕೌಸಲರು ನೀವೇ?" ಎಂದು ಕೇಳಿದಾಗ, ಅವರಿಗಾದ ಆಶ್ಚರ್ಯ, ಆನಂದ ಅಷ್ಟಿಷ್ಟಲ್ಲ. ಚಿಕ್ಕವಯಸ್ಸಿನಿಂದ ತಾನೆಷ್ಟೋ

ಚಿತ್ರಗಳನ್ನು ಬಿಡಿಸುತ್ತ ಬಂದಿದ್ದರೂ, ಅಪರಿಚಿತರೊಬ್ಬರು ತನ್ನ ಕೃತಿಗಳಲ್ಲಿ ಇಷ್ಟೊಂದು ಆಸಕ್ತಿಯನ್ನು ತೋರಿಸಲಿಲ್ಲವೆಂದರು. ನಂತರ ವಾಸಸ್ಥಾನಕ್ಕೆ ಕರೆದು ಕೊಂಡು ಹೋಗಿ ಇನ್ನುಳಿದ ಕೃತಿಗಳನ್ನು ತೋರಿಸಿದರು. ಅವರ ಕೃತಿಗಳಲ್ಲಿ ಶಾಲೆ-ಕಾಲೇಜುಗಳ ಕ್ರಮಬದ್ಧ ತರಗತಿಯ ರೇಖಾ-ವಿನ್ಯಾಸಗಳು ಇಲ್ಲದಿದ್ದರೂ, ಕಾಡಿನಲ್ಲಿ ಅರಳಿ ನಿಂತ ಕುಸುಮದ ನಿಸರ್ಗ-ಸಹಜ-ಸೌಂದರ್ಯ-ಸುಗಂಧದ ಸ್ಪರ್ಶವಿತ್ತು. ಅವರು ತಮ್ಮ ಬಗ್ಗೆ ಹೇಳಿಕೊಳ್ಳುತ್ತ "ಚಿತ್ರಕಲೆಯಲ್ಲಿ ಹೆಚ್ಚಿನ ಆಸಕ್ತಿಯಿದ್ದರೂ, ಅದು ವ್ಯಾವಹಾರಿಕವಲ್ಲದ್ದರಿಂದ ಕೇವಲ ಬಿಡುವಿನ ಸಮಯ ಮಾತ್ರ ಅದಕ್ಕೆ ಮೀಸಲು. ಈ ಹೊಟೇಲು ಅಲ್ಲದೇ ನಾನು ಕಾಂಟ್ರ್ಯಾಕ್ಟ್ ಮಾಡುತ್ತೇನೆ. ಇವುಗಳಿಂದಾಗಿ ನಾಲವತ್ತು ಸಾವಿರ ಖರ್ಚು ಮಾಡಿ ಮನೆ ಕಟ್ಟಿಸಿದ್ದೇನೆ. ಚಿತ್ರಗಳನ್ನು ಬಿಡಿಸಿ, ಮಾರಿ, ಎಂದಾದರೂ ಇಂಥ ಸಾಹಸ ಸಾಧ್ಯವಿತ್ತೆ? ಕಲೆಗೆ ಇನ್ನೂ ಹೆಚ್ಚು ವೇಳೆ ಮೀಸಲಿಡಬೇಕೆಂದೇನೊ ಮನಸ್ಸು ಆದರೆ ಸಾಂಸಾರಿಕ ಜವಾಬ್ದಾರಿಗಳು ವಿಪುಲವಾಗಿದ್ದರಿಂದ ವೇಳೆ ಸಿಗುವದಿಲ್ಲ. ಆದರೆ ಆದಷ್ಟು ಬೇಗ ಜವಾಬ್ದಾರಿಗಳನ್ನು ಮಕ್ಕಳಿಗೆ ವಹಿಸಿ, ಉಳಿದ ಜೀವನ ವೆಲ್ಲ ಕಲೆಗಾಗಿ ಮುಡುಪಿಡಬೇಕೆಂದಿದ್ದೇನೆ" ಎಂದು ಹೇಳಿದರು. ಬೇಡ ಬೇಡ ವೆಂದರೂ ಚಹಾ ತರಿಸಿಕೊಟ್ಟರು. "ಪಾನ್ ತರಿಸಲೇ?" ಎಂದು ವಿಚಾರಿಸಿದರು.

ಕಪ್ಪು ಬಸಿ, ಎನೆಮಲ್ ಕಾಜಿನ ಸಾಮಾನು, ಇನ್ನಿತರ ಸರಕು ಮಾರುವ ಖಜಾಂಚಿವಾಲರೂ ಒಬ್ಬ ಕಲಾಕಾರರೆಂದು ತಿಳಿದಾಗ ವಿಸ್ಮಯವಾಯಿತು. "ಅವರು ಮುಂಬಯಿಯ ಜೆ.ಜೆ. ಸ್ಕೂಲ-ಅಫ್-ಆರ್ಟ್ಸ ಸಂಸ್ಥೆಯಲ್ಲಿ ಕಲಿತು ಬಂದಿದ್ದಾರೆ. ಆದರೆ ವ್ಯಾಪಾರದತ್ತ ಹೆಚ್ಚಿನ ಒಲವೂ ಇದೆ. ಹೀಗಾಗಿ ವೃತ್ತಿಯ ಜೊತೆಗೆ ಕಲೆಯ ಕ್ಲಾಸು ನಡೆಸುತ್ತಾರೆ. ವಿದ್ಯಾರ್ಥಿಗಳು ತಯಾರಿಸಿದ ಚಿತ್ರ ಗಳನ್ನು ಅಂಗಡಿಯಲ್ಲಿಟ್ಟು ಮಾರಿ ಹಣ ಸಂಪಾದಿಸುತ್ತಾರೆ. ಅವರ ರಚನೆಗಳಲ್ಲಿ ಕಲೆಗಿಂತ ಹೆಚ್ಚು ಗಿರಾಕಿಗಳನ್ನು ಆಕರ್ಷಿಸುವ ಏಕಮಾತ್ರ ಧ್ಯೇಯವಿದ್ದಂತೆ ಅನಿಸಿತು. ಅಂತೆಯೇ ಅವರ ರಚನೆಗಳಲ್ಲಿ ಗೋಡೆಗಳಿಗೆ ತೂಗಹಾಕಬಹು ದಾದಂತಹ ಪ್ರಣಯಿಗಳ, ಪ್ರೇಮ-ಕಾಮದ ಚಿತ್ರಗಳಿಗೇ ಪ್ರಾಧಾನ್ಯ. ತಮ್ಮ ಕ್ಲಾಸಿನ ವಿದ್ಯಾರ್ಥಿಗಳಲ್ಲಿ, ವಿದ್ಯಾರ್ಥಿನಿಯರೇ ಒಳ್ಳೆಯ ಕಲಾಕಾರರಾಗಿದ್ದಾರೆ. ಅದರಲ್ಲೂ ಮಹಾರಾಷ್ಟ್ರದ ಕುಮಾರಿಯರಲ್ಲಿ ಕಲ್ಪನಾಶಕ್ತಿ ಉತ್ತಮವಾಗಿದೆ." ಎಂದು ಖಜಾಂಚಿವಾಲರ ಖಚಿತವಾದ ಅಭಿಪ್ರಾಯ. ಔಷಧದ ಅಂಗಡಿಯನ್ನು

ನಡೆಸುವ ವರ್ಮಾರು, ಬಿಡು-ಸಮಯದಲ್ಲಿ ಚಿತ್ರಕಲೆಯಲ್ಲಿ ತೊಡಗಿರುತ್ತಾರೆ. ಭಾವಚಿತ್ರಗಳು, ಸೃಷ್ಟಿಸೌಂದರ್ಯದ ವಿಷಯಗಳನ್ನು ಹೆಚ್ಚು ಚಿತ್ರಿಸುತ್ತಾರೆ. ಶಿಕ್ಷಕರಾಗಿದ್ದ ಎ.ಕೆ. ವರ್ಮಾರು ತಮ್ಮ ಉತ್ಪನ್ನ ಹೆಚ್ಚಿಸುವದಕ್ಕೆ ಕಲೆಯನ್ನು ಬಳಸುತ್ತಿದ್ದಾರೆ.

ರುದ್ರಕುಮಾರ ಶ್ಯಾರು ಜೈಪುರ ಹೈದ್ರಾಬಾದಗಳಲ್ಲಿ ತರಬೇತಿ ಪಡೆದು ಆದಿವಾಸಿ-ಕಲಾಕೇಂದ್ರದಲ್ಲಿ ಕಲಾಕಾರರೆಂದು ನೇಮಕಹೊಂದಿದ್ದಾರೆ. ಅಂತೆಯೇ ಆದಿವಾಸಿಗಳ ದೈನಂದಿನ ಜೀವನವನ್ನು ಕಲಾತ್ಮಕವಾಗಿ ತೈಲ ಮತ್ತು ಜಲವರ್ಣ ಗಳಲ್ಲಿ ಹೆಚ್ಚು ಚಿತ್ರಿಸಿದ್ದಾರೆ. ಮುರಿಯಾ ಯುವಕನು ತನ್ನ ಗೆಳತಿಗೆ ಬಾಚಣಿಕೆ ಯೊಂದನ್ನು ತಯಾರಿಸಿ ಕೊಡುವದು ಆಕರ್ಷಕವಾಗಿದ್ದಂತೆ, ಕಾಡಿನ ಕುವರಿ ಯೊಬ್ಬಳು, ಮುಡಿಯಲು ದಾಸಾಳದ ಹೂ ಕೊಯ್ಯುವದು ಮೋಹಕವಾಗಿದೆ. ಒಂದು ಚಳಿಗಾಲದ ಸಂಜೆ ಮಾರಿಯಾ ಕುಟುಂಬ ಬೆಂಕಿಯ ಸುತ್ತಲೂ ಕುಳಿತು ಹರಟುತ್ತಿರುವ ಚಿತ್ರ ಕಲಾಪೂರ್ಣವಾಗಿದೆ. ಗೊಂಡ, ಮಾವಶಿಯಾ, ದೊರ್ಲಾ, ಹಲಬೀ ಆದಿವಾಸಿ ಜನಾಂಗಗಳ ವೈವಿಧ್ಯಮಯ ಜೀವನದ ಹಲವಾರು ಮುಖ ಗಳನ್ನು ಚಿತ್ರಿಸಿದ್ದಾರೆ. ಅವರ ಕೆಲವು ಕೃತಿಗಳನ್ನು ಭೋಪಾಲ, ಗ್ವಾಲ್ಹೇರ, ದಿಲ್ಲಿಗಳ ಸಂಗ್ರಹಾಲಯಗಳಲ್ಲಿ ಇಟ್ಟಿದ್ದಾರೆ. ಇಪ್ಪತ್ತೊಂದು ವರ್ಷಗಳ ಅವರ ಸೇವೆಯಲ್ಲಿ ಅವರಿಂದ ನಿರ್ಮಿತವಾದ ಚಿತ್ರಗಳು ಇಷ್ಟೆಯೇ ಎಂದು ಕೇಳಿದಾಗ, “ಕಲೆಯ ನಿರ್ಮಾಣಕ್ಕೆ ಸ್ಫೂರ್ತಿ, ಪ್ರೋತ್ಸಾಹಗಳು ಬೇಕು. ಅವು ಇಲ್ಲಿ ಇಲ್ಲವೇ ಇಲ್ಲ. ಅಲ್ಲದೇ ಕಲಾಕಾರನೆಂದರೆ ಹೆಸರಿನ ಪಾಟಿ ಬರಿಸುವಲ್ಲಿಂದ, ಮಂತ್ರಿಗಳ ಸ್ವಾಗತಕ್ಕೆ ಬೇಕಾದ ಸ್ವಾಗತದ ಕಮಾನು ನಿಲ್ಲಿಸುವತನಕ ಎಲ್ಲವನ್ನು ಬಿಟ್ಟಿ ಯಾಗಿ ಮಾಡಬೇಕು” ಎಂದು ವಿವರಿಸಿದರು. ಆದರೆ ನಿಯಮಿತವಾಗಿ ಬರುವ ಸಂಬಳದಿಂದಾಗಿ, ತಮ್ಮ ನೌಕರಿಯ ಸುಭದ್ರತೆಯಿಂದಾಗಿ, ಚಿತ್ರರಚನೆಯಲ್ಲಿ ತೊಡಗಲೇಬೇಕು ಎಂಬ ಕಡ್ಡಾಯವಿಲ್ಲದಿರುವದು ಅವರ ಕಲಾಕೃತಿಗಳ ರಚನೆ ಕುಂಠಿತವಾಗಿರುವದಕ್ಕೆ ಮುಖ್ಯ ಕಾರಣವೆಂದು ಇನ್ನಿತರರಿಗೆ ಅನಿಸದೇ ಇರದು. ಅವರು ಕೃತಿಗಳಿಗೆ ವರ್ಣಗಳನ್ನು ಅಭಿರುಚಿಯಿಂದ ಆರಿಸುತ್ತಾರೆ. ಪ್ರತಿ ಯೊಂದು ವಿವರಕ್ಕೆ ಸೂಕ್ಷ್ಮವಾಗಿ ಲಕ್ಷ್ಯ ಪೂರೈಸುತ್ತಾರೆ. ಹೀಗಾಗಿ ಮೊದಲ ನೋಟಕ್ಕೇ ಅವು ಅತಿ ಆಕರ್ಷಕವಾಗಿ ಕಾಣಿಸುತ್ತವೆ. ಆದರೆ ಆಳವಾಗಿ ಅಭ್ಯಾಸ ಮಾಡಿದರೆ, ಅವರ ಕೃತಿಗಳಲ್ಲಿ ಕೇವಲ ಕಲ್ಪನಾಶಕ್ತಿಯಿಂದ ಇಲ್ಲವೇ ನಿರೀಕ್ಷಣೆ

ಯಿಂದ ರಚಿತವಾಗಿದ್ದವು ಇರದೇ ಗ್ರಂಥಗಳು, ಇಲ್ಲವೇ, ಛಾಯಾಚಿತ್ರಗಳ ಆಧಾರದಿಂದ ಬಿಡಿಸಿದವು ಎಂಬುದು ಗೋಚರಿಸುವದು. ಅವರು ಕೇವಲ ಕಲೆಗೆ ಹೆಚ್ಚು ಪ್ರಾಧಾನ್ಯ ಕೊಡುವದರಿಂದ ಎಷ್ಟೋ ಕೃತಿಗಳು ನೈಜವಾಗಿರುವದಿಲ್ಲ.

ಝಾರು ನಿವಾಸದಲ್ಲಿ ತಮ್ಮ ಖಾಸಗಿ ಕೃತಿಗಳ ಸಂಗ್ರಹ ಇಟ್ಟುಕೊಂಡಿದ್ದಾರೆ. ವಿದ್ಯಾರ್ಥಿ-ಜೀವನದಿಂದ ರಚಿಸಿದ ಕೃತಿಗಳಾದ ಟಾಗೋರ, ರಾಣಿ ದುರ್ಗಾವತಿ, ಸರಸ್ವತಿಗಳ ಚಿತ್ರಗಳೆಲ್ಲ ಅದರಲ್ಲಿ ಸೇರ್ಪಡೆಯಾಗಿವೆ. ಇವುಗಳಲ್ಲಿ ಮುಖ್ಯ ಕೃತಿಗಳೆಂದರೆ ಕಾಳಿದಾಸನ ಮೇಘದೂತ ಕಾವ್ಯವನ್ನು ಆಧರಿಸಿ ರಚಿಸಿದ ಯಕ್ಷ-ಯಕ್ಷಿಣಿಯರ ಚಿತ್ರಗಳು. ಇವುಗಳಲ್ಲಿ ಅಂಗಾಂಗಗಳು, ಹಾವ-ಭಾವಗಳು ಕಲಾತ್ಮಕವಾಗಿ ರೂಪುಗೊಂಡರೂ ಬುದ್ಧನ ಜೀವನದ ವಿವಿಧ ಹಂತಗಳನ್ನು ಆಧರಿಸಿ ತೆಗೆದ ಅಜಂತಾ-ಶೈಲಿಯು ಛಾಯೆ ಅವುಗಳ ಮೇಲೆ ಇದ್ದದ್ದು ಎದ್ದುಕಾಣುತ್ತದೆ. ಶಿವಸ್ತೋತ್ರವನ್ನು ಆಧರಿಸಿ ಕೆಲ ಚಿತ್ರಗಳನ್ನು ಬರೆದಿದ್ದಾರೆ. ಝಾರು ವೈಯಕ್ತಿಕ ಜೀವನದಲ್ಲಿ ತುಂಬ ಅಚ್ಚುಕಟ್ಟುತನ, ಮಡಿವಂತಿಕೆ ಉಳ್ಳವರು. ಇದು ಅವರ ಕೃತಿಗಳಲ್ಲೂ ಕಂಡುಬರುತ್ತದೆ. ತಮ್ಮ ಕಲೆಯ ಬಗ್ಗೆ ಅವರಿಗೆ ಅಭಿಮಾನ ಬಹಳ. ಅಂತೆಯೇ ತಮ್ಮ ಕೃತಿಗಳನ್ನು ಮಾರುವದಿರಲಿ, ವಿನಂತಿಯ ಪ್ರಕಾರ ನಿರ್ಮಿಸಿದರೂ ಕಡಿಮೆಯೆಂದರೆ ಎರಡು ಸಾವಿರ ರೂಪಾಯಿಗಳನ್ನು ಅವರು ನೀರಿಕ್ಷಿಸುತ್ತಾರಂತೆ! ಆದ್ದರಿಂದ ಮಧ್ಯಮವರ್ಗದವರಿಗೆ ನಿಲುಕದ ಕಲಾಕಾರರು ಇವರು ಎಂದು ಬೇರೆ ಹೇಳಬೇಕಿಲ್ಲ. ತಾವಿನ್ನೂ ಅಧಿಕಾರದಲ್ಲಿ ಇರಬೇಕಾದರೆ ತಮ್ಮ ಕೃತಿಗಳ ಸಂಗ್ರಹಕ್ಕಾಗಿ ಒಂದು ಇವಶಾರತ್ತಿ ಕಟ್ಟುವ ಸಲುವಾಗಿ ಒಂದು ಪ್ಲಾಟು ಮತ್ತು ಧನಸಹಾಯವನ್ನು ಸರಕಾರದಿಂದ ಪಡೆಯುವ ಹವಣಿಕೆಯಲ್ಲಿದ್ದಾರೆ. ಪಾಶ್ಚಾತ್ಯದೇಶಗಳಲ್ಲಿ ತಮ್ಮ ಕಲೆಗೆ ಬಹಳ ಬೆಲೆಯಿದೆ ಎಂದು ಅವರು ದೃಢವಾಗಿ ನಂಬಿದಂತೆ ಇದೆ. ಅಂತೆಯೇ ಹೇಗಾದರೂ ಮಾಡಿ, ಕೆಲ ಕೃತಿಗಳು ಆ ದೇಶಗಳಿಗೆ ಹೋಗುವಂತಾದರೆ, ತಮ್ಮ ಕನಸಿನ ಕಲಾಕೇಂದ್ರಕ್ಕೆ ಧನಸಹಾಯವಾಗುವದೆಂದು ಯೋಚಿಸುತ್ತಿದ್ದಾರೆ. ಅದಕ್ಕೆ ಸಹಾಯವಾಗುವಂತೆ ಇಟಾಲಿಯ ಫ್ಲೊರೆನ್ಸ ನಗರದಲ್ಲಿ ನಡೆಯಲಿದ್ದ ಅಂತರ್‍ರಾಷ್ಟ್ರೀಯ ಕಲಾ-ಸಮ್ಮೇಳನಕ್ಕೆ ಅವರಿಗೆ ಆಮಂತ್ರಣ ಬಂದಿತು. ಅಲ್ಲಿ ಅವರ ಕೃತಿಯೊಂದಕ್ಕೆ ಐದುಸಾವಿರ ಡಾಲರುಗಳು ಸಹಜವಾಗಿ ಬರಬಹುದೆಂದು ಗೆಳೆಯರೊಬ್ಬರು ಅಭಿಪ್ರಾಯ ಪಟ್ಟದ್ದರಿಂದ, ಮೂರು ಕೃತಿಗಳನ್ನು ಒಯ್ದು

ಪದಿನೈದು ಸಾವಿರ ಡಾಲರು ಸಿಗುವಂತಾದರೆ, ಭಾರತಕ್ಕೆ ಅವನ್ನು ತಂದಾಗ ಒಂದುವರೆ ಲಕ್ಷ ರೂಪಾಯಿಗಳಾಗುವವೆಂಬ ಕಲ್ಪನೆಯಿಂದಲೇ ಗೆಲುವಾದರು. ತಾವು ಅಂತರ್ರಾಷ್ಟ್ರೀಯ ಕಲಾಕಾರರ ಸಮ್ಮೇಳನಕ್ಕೆ ಹೊರಟದ್ದರಿಂದ ಅದು ತಮ್ಮ ಸಂಸ್ಥೆಗೆ ಗೌರವ ತರುವಂತಹ ಮಾತಾಗಿದ್ದರಿಂದ ತಮ್ಮ ಪಾಸಪೋರ್ಟ, ವೀಸಾಗಳ ವಿಪರ್ಯಾಡನ್ನು ಸರಕಾರವೇ ಮಾಡಬೇಕಲ್ಲದೇ ಖರ್ಚಿಗೆಂದು ಹದಿನೈದು ಸಾವಿರ ರೂಪಾಯಿ ಮಂಜೂರ ಮಾಡಬೇಕೆಂದು ಅರ್ಜಿ ಹಾಕಿದರು. ದುರ್ದೈವ ದಿಂದ ರಾಜ್ಯದ ಸರಕಾರಕ್ಕೆ ಆಗ ಗಾಲಿ ಬಂದಿದ್ದರಿಂದ ಇವರ ಬಿನ್ನಹಕ್ಕೆ ಯಾರೂ ಲಕ್ಷ್ಯ ಪೂರೈಸಲಿಲ್ಲ.

ರೇವಾದ ಅರಸುಮನೆತನದ ಸೇವೆಯಲ್ಲಿದ್ದ ಚಿತ್ರಕಾರರು ಈಗ ಜನತಾ ಸೇವೆಯಲ್ಲಿ ಹೆಚ್ಚು ತೊಡಗಿದ್ದಾರೆ. ಚರಣಸಿಂಹ ಬಾವಾಡಿ ಇಂತಹ ಭಾವಚಿತ್ರ ಕಲಾವಿದ. ಬಿಪರಿಯಾದ ಎಚ್.ಎಸ್. ಮಾಲವೀಯರೂ ಮಕ್ಕಳು, ಮುದಿಯರ ಭಾವಚಿತ್ರಗಳನ್ನು ಬಿಡಿಸುವದರಲ್ಲಿ ತಜ್ಞರು. ಛಾಯಾಗ್ರಹಣವೂ ಕಲೆಯ ಒಂದು ಮುಖವೆಂದು ಒಪ್ಪಿದರೆ, ಹಲವಾರು ಉತ್ತಮ ಛಾಯಾಚಿತ್ರಕಾರರು ಮಧ್ಯಪ್ರದೇಶದಲ್ಲಿದ್ದಾರೆ. ಆದಿವಾಸಿಗಳ ನಿತ್ಯಜೀವನವನ್ನು ಕ್ಯಾಮರಾದಲ್ಲಿ ಸೆರೆಹಿಡಿದವರಲ್ಲಿ ರಾಮಚಂದ್ರರಾವ್ ಅವರು ಅಗ್ರಗಣ್ಯರು. ಅವರ ಚಿತ್ರ ಗಳನ್ನು ನೋಡಿದಾಗ ಆಗುವ ಆನಂದ ಅನುಭವಿಸಿಯೇ ತಿಳಿಯಬೇಕು. ಇಂಥ ಪ್ರತಿಭಾಶಾಲಿಗಳು ಹಣಕಾಸಿನ ತೊಂದರೆಗಾಗಿಯೋ, ಏನು ಸಾಂಸಾರಿಕ ಕಾರಣ ಕ್ಕಾಗಿಯೋ ಆತ್ಮಹತ್ಯೆಮಾಡಿಕೊಂಡಾಗ ಕಲಾಪ್ರೇಮಿಗಳಿಗೆ ಹೆಚ್ಚಿನ ಆಘಾತ ವಾಯಿತು. ರಘುನಾಥ ಪಾರೀಕರು ಇನ್ನೊಬ್ಬ ಹೆಸರಾಂತ ಕಲಾವಿದರು. ನಾರಾಯಣಪುರದ ರಾಮಸಿಂಗ್ ಠಾಕೂರರು ಛಾಯಾಗ್ರಹಣದಲ್ಲಿ ಅಷ್ಟೊಂದು ಪರಿಣತರಲ್ಲದಿದ್ದರೂ ಆದಿವಾಸಿಗಳ ಪರಿಸರದಲ್ಲಿ ಸದಾ ಇರುವ ಅವಕಾಶ ದೊರೆತದ್ದರಿಂದ, ಉಳಿದವರಿಗೆ ಅಸಾಧ್ಯವಾದ ಚಿತ್ರಗಳನ್ನು ತೆಗೆದು ಸಂಗ್ರಹಿ ಸಿದ್ದಾರೆ.

ರಾಜ್ಯದ ಜನಸಾಮಾನ್ಯರೂ ಕಲೆಯಲ್ಲಿ ಆಸಕ್ತಿ ವಹಿಸುತ್ತಿರುವಂತಿದೆ. ಜಗದಲಪುರದ ಚಿಕ್ಕ ಹೊಟೇಲೊಂದರಲ್ಲಿ ಸುಂದರವಾದ ಆದಿವಾಸಿಗಳ ಚಿತ್ರ ಗಳನ್ನು ತೂಗಹಾಕಿದ್ದನ್ನು ನೋಡಿ ನನಗೆ ಆಶ್ಚರ್ಯವಾಯಿತು. ನಮ್ಮ ಮೆಚ್ಚಿಗೆ ನೋಡಿ, ಹೊಟೇಲ ಮಾಲಿಕನು ಆ ಚಿತ್ರಗಳೆಲ್ಲ ತನ್ನವೇ ಕೃತಿಗಳೆಂಬಂತೆ ಮಾತ

ನಾಡಿದನು. "ಅವರಿಗೆ ಇವೇ ಮಾತು ಆಡಿ ರೂಢಿ. ನಿಜಕ್ಕೂ ಅವರು ಬರೆಯಿಸಿ ಕೊಂಡು ತಂದ ಚಿತ್ರಗಳು" ಎಂದು ಮಾಣಿಯೊಬ್ಬ ಬಂದು ಕಿವಿಮಾತು ಹೇಳಿದ. ಉಜ್ಜಯನಿಯಲ್ಲಿ ಛಾಯಾಚಿತ್ರಗಳನ್ನು ನೋಡಿ ಶೀಘ್ರ-ಚಿತ್ರಗಳನ್ನು ಸಿದ್ಧ ಮಾಡಿಕೊಡುವ ವ್ಯಾಪಾರಿ-ಕಲಾಕಾರರಿದ್ದಾರೆ. ಇಂದೋರಿನವರಿಗಂತೂ ಕಲೆಯೇ ಉಸಿರಾಗಿದೆ. ಅಂತೆಯೇ ಚಹಾದಂಗಡಿ, ಕಬ್ಬಿನಹಾಲು ಮಾರುವ ಅಂಗಡಿ, ಲಸ್ಸಿಯ ತಾತ್ಕಾಲಿಕ ಅಂಗಡಿ, ಹೊಟೇಲ್, ಲಾಜ್‌ಗಳಲ್ಲೆಲ್ಲ ಒಂದಿಲ್ಲೊಂದು ಕಲಾಕೃತಿಗಳಿರುತ್ತವೆ. ಅನೇಕರು ತಮ್ಮ ಈ ಕಮ್ಮಟವನ್ನು ಕಲಾತ್ಮಕವಾಗಿ ಅಲಂಕರಿಸುತ್ತಾರೆ, ಕಲಾಕಾರರ ಸೇವೆಯನ್ನು ಸ್ವೀಕರಿಸುತ್ತಾರೆ. "ಘಮಂಡ್ ಲಸ್ಸಿ" (ಕಡಿದ, ತೀವ್ರ-ಮಸಾಲೆಯ, ಸಿಹಿ-ಮೊಸರು) ಅಂಗಡಿಯವನು, ದಿಲೀಪ್‌ಕುಮಾರ ಸಾಯಿರಾಬಾನು ಲಸ್ಸಿ-ಗ್ಲಾಸು ಹಿಡಿದು ನರ್ತಿಸುವ ಚಿತ್ರ ಬರೆಸಿ ತೂಗು ಹಾಕಿ ಆನಂದಪಟ್ಟಿದ್ದ! ಕಾಳಿದಾಸನ ಉಜ್ಜಯನಿಯ ಪುರಾತನ ಭಾಗದ ಮನೆಗಳ ಗೋಡೆಗಳ ಮೇಲೆಲ್ಲ ಚಿತ್ರಗಳನ್ನು ಬಿಡಿಸುವ ಪರಿಪಾಠ ಬೆಳೆದುಬಂದಿದೆ. ಹಳದಿ, ಕೆಂಪು, ನೀಲಿವರ್ಣಗಳಲ್ಲಿ ಪೂಜೆಯ ದೃಶ್ಯಗಳು, ಆನೆ-ಕುದುರೆ-ಸವಾರರು, ವಿಷ್ಣು, ವಿಘ್ನೇಶ್ವರರ ಚಿತ್ರಗಳನ್ನು ಆಕರ್ಷಕವಾಗಿ ತೆಗೆದಿರುತ್ತಾರೆ. ಆ ಕೃತಿಗಳನ್ನೆಲ್ಲ ನೋಡಿದರೆ ಒಂದೇ ಕುಟುಂಬಕ್ಕೆ ಸೇರಿದವರು ಅವನ್ನು ಬಿಡಿಸಿರಬೇಕು ಇಲ್ಲವೇ ಒಂದು ವಿಶಿಷ್ಟ ಶೈಲಿಯನ್ನು ಬೆಳೆಸಿಕೊಂಡು ಬಂದಿರಬೇಕು ಎಂದು ಭಾಸವಾಗುತ್ತದೆ.

ರಾಜ್ಯದಲ್ಲಿ ಕಲಾವಿದರನ್ನು ತರಬೇತುಗೊಳಿಸುವ ಕೇಂದ್ರಗಳಿದ್ದಂತೆ, ಪುರಾತನ ಮತ್ತು ಇಂದಿನ ಚಿತ್ರಕಲೆಗಳನ್ನು ಪ್ರದರ್ಶಿಸುವ ಅನೇಕ ಶಾಲೆಗಳಿವೆ. ಛತ್ತರ್‌ಪುರ ಜಿಲ್ಲೆಯ ದುಬೆಲಾದಲ್ಲಿ ಹತ್ತೊಂಭತ್ತನೆಯ ಮತ್ತು ಇಪ್ಪತ್ತನೆಯ ಶತಮಾನದ ಹಲವಾರು ಒಳ್ಳೆ ಕಲಾಕೃತಿಗಳನ್ನು ನೋಡಬಹುದು. ಅದರಲ್ಲೂ ಸುವರ್ಣಲೇಪಮಾಡಿದ ವರ್ಣಚಿತ್ರಗಳು, ರಾಸಲೀಲೆಯ ಚಿತ್ರಗಳು ಮತ್ತು ಛತ್ರಪುರ ರಾಜನ ಜಂಬೂಸವಾರಿ, ಮತ್ತಿತರ ಕ್ರೀಡಾ-ಚಿತ್ರಗಳು ಆಕರ್ಷಕ ವಾಗಿವೆ. ಜಬಲ್‌ಪುರದಲ್ಲಿ ರಾಣಿ ದುರ್ಗಾವತಿಯ ಜೀವನ-ಸಾಧನೆಗಳನ್ನು ರೂಪಿಸುವ ಇತ್ತೀಚಿನ ಚಿತ್ರಗಳನ್ನು ಇಟ್ಟಿದ್ದಾರೆ. ಭೋಪಾಲ ಛಿಂದವಾಡಾಗಳಲ್ಲಿ ಆದಿವಾಸಿ-ಜೀವನ ರೂಪಿಸುವ ಇನ್ನೂ ಹಲವಾರು ಸುಂದರ ಕಲಾಕೃತಿಗಳಿವೆ. ಉಜ್ಜಯನಿಯ ವಿಕ್ರಮ-ವಿಶ್ವವಿದ್ಯಾಲಯದಲ್ಲಿ ಆದಿಮಾನವರ ಗುಹಾ-ಚಿತ್ರ

ಗಳ ಸಂಗ್ರಹವಿದ್ದಂತೆ, ಅಲ್ಲಿಯ ಭಾರತೀಯ ಕಲಾಕೇಂದ್ರದಲ್ಲಿ ಆಧುನಿಕ ಮತ್ತು ಪುರಾತನ ಮಾದರಿಯಲ್ಲಿ ತರಬೇತಿ ಕೊಡಲಾಗುತ್ತಿದೆ. ಗ್ವಾಲೇರ್, ಇಂದೋರ್, ಕವರ್ಧಾ, ರಾಯಪುರಗಳಲ್ಲಿರುವ ವಸ್ತು-ಸಂಗ್ರಹಾಲಯಗಲ್ಲಿಯೂ ಚಿತ್ರಕಲಾ ಪ್ರದರ್ಶನಕ್ಕೆ ಯೋಗ್ಯಸ್ಥಾನ ಕೊಡಲಾಗಿದೆ.

ಬಹುಶಃ ಅತಿ ಪುರಾತನ ಭಾರತೀಯ ಕಲಾಕಾರನು ಮಧ್ಯಪ್ರದೇಶ ದಲ್ಲಿಯೇ ಹುಟ್ಟಿರಬಹುದು ಎಂದರೆ ಅತಿಶಯೋಕ್ತಿಯಾಗಲಾರದು. ಕ್ರಿ. ಶ. ಪೂರ್ವ ಇಪ್ಪತ್ತೈದು ಸಹಸ್ರವರ್ಷಗಳಿಗೂ ಹಿಂದೆ ಬಿಡಿಸಿದ್ದವೆಂದು ನಂಬಲಾದ ಬಹುಸಂಖ್ಯಾತ ಗುಹಾಚಿತ್ರಗಳು ಈ ರಾಜ್ಯದಲ್ಲಿವೆ. ಇವುಗಳೆಲ್ಲ ಬೇಟೆಯಲ್ಲಿ ಯಶಸ್ಸು ಕೋರಿ, ಭೂತ, ದೆವ್ವಗಳನ್ನು ಓಡಿಸಲು ನಿರ್ಮಿತವಾಗಿದ್ದರೂ ಇಂದಿನ ಒಳ್ಳೆಯ ಯಾವ ಕಲಾಕಾರನ ರಚನೆಗಳೊಂದಿಗೂ ಸ್ಪರ್ಧಿಸಬಲ್ಲವು. ಇವು ಬಹಳ ಸರಳ, ಸುಲಭವಿದ್ದಷ್ಟೇ ಭಾವಪೂರ್ಣವಾಗಿವೆ. ಹೆಚ್ಚಾಗಿ ಹಸಿರು, ಕೆಂಪು, ಬಿಳಿ ಬಣ್ಣಗಳಿಂದ ನಿರ್ಮಿತವಾಗಿವೆ. ಹಸಿರು-ವರ್ಣ-ಚಿತ್ರಗಳು ಅತಿ ಪುರಾತನ ವೆಂದು ನಂಬಲಾಗಿದೆ. ಈ ಚಿತ್ರಗಳಲ್ಲಿ ಯುದ್ಧ, ದ್ವಂದ್ವ, ಕುದುರೆ-ಸವಾರರು, ಬೇಟೆಯ ಪಡೆ, ನರ್ತನ, ಹುಲಿ, ಜಿಗರೆ, ಕಾಡುಹಂದಿ, ಕಾಡುಕೋಣ ಮೊದ ಲಾದುವನ್ನು ಮೂಡಿಸಿರುವದು ತೀರ ಸಾಮಾನ್ಯ. ಆದಿ-ಕಲಾಕಾರರೆಲ್ಲ ದೇವರು-ದಿಂಡರನ್ನು ಮೆಚ್ಚಿಸುವದಕ್ಕಾಗಿಯೇ ಈ ಚಿತ್ರಗಳನ್ನು ಬಿಡಿಸುತ್ತಿದ್ದ ರೆಂಬುದರಲ್ಲಿ ಭಿನ್ನಾಭಿಪ್ರಾಯವಿಲ್ಲ. ಸ್ಫೂರ್ತಿ ಬಂದು ಕೆಲವರು ಇವನ್ನು ರಚಿಸುತ್ತಿದ್ದರೂ, ಪ್ರತಿಯೊಂದು ಕುಟುಂಬದಲ್ಲಿ ಚಿತ್ರಗಳನ್ನು ಹೆಚ್ಚು ಯಶಸ್ವಿ ಯಾಗಿ ಬಿಡಿಸಬಲ್ಲ ಒಬ್ಬಿಬ್ಬರು ಇದ್ದಿರಲೇಬೇಕು. ಇಂತಹ ನಿಷ್ಣಾತ ಹಿರಿಯರ ಕೃತಿಗಳನ್ನು ಅವಲೋಕಿಸಿ ಕಿರಿಯರು ಅನುಕರಣೆಯಿಂದ ಕಲಿಯುತ್ತಿದ್ದಿರಬೇಕು.

ಶತಮಾನಗಳ ನಂತರವೂ ಈ ಪ್ರದೇಶದ ಆದಿವಾಸಿಗಳು ಅಂತಹವೇ ಚಿತ್ರ ಗಳಿಂದ ತಮ್ಮ ಮನೆಗಳನ್ನು ಇಂದಿಗೂ ಅಲಂಕರಿಸುತ್ತಿರುವದು ಆಶ್ಚರ್ಯದ ಸಂಗತಿ. ಗೊಂಡರು ತಮ್ಮ ನಿವಾಸದ ಗೋಡೆಗಳನ್ನು ಹಳದಿ-ಮಣ್ಣು, ಸುಣ್ಣ ಇಲ್ಲವೇ ಸೆಗಣಿಯಿಂದ ಸಾರಿಸಿ ಅದರ ಮೇಲೆ ವಿವಿಧ ಪ್ರಾಣಿಗಳ ಚಿತ್ರಗಳನ್ನು ಬಿಡಿಸಿರುತ್ತಾರೆ. ಮನೆಗೆ ಕಲ್ಲು-ಮಣ್ಣಿನ ಗೋಡೆ ನಿಲ್ಲಿಸುವ ಆದಿವಾಸಿ-ಜನಾಂಗ ಗಳಲ್ಲಿ ಇಂಥ ಕಲೆ ಕಂಡುಬಂದರೂ ಹುಲ್ಲು ಪರ್ಣಗಳಿಂದ ಗುಡಿಸಲು ನಿರ್ಮಿಸು ವದರಲ್ಲಿ ಇದು ಕಂಡುಬರುವದಿಲ್ಲ. ಮಾರಿಯ, ಮುರಿಯರು ಎರಡನೇ ಗುಂಪಿಗೆ

ಸೇರಿದವರು. ಆದರೆ ಸ್ವರ್ಗಕ್ಕೆ ಸೇರಿದವರ ನೆನಪಿಗೆ ನಿಲ್ಲಿಸುವ ಮೃತ್ಯು-ಸ್ತಂಭಗಳ ಮೇಲೆ ವಿವಿಧ ಚಿತ್ರಗಳನ್ನು ಬಿಡಿಸುವ ಪರಿಪಾಠ ಇವರಲ್ಲಿದೆ. ಈ ಕಲೆ ವೈಶಿಷ್ಟ್ಯ ಪೂರ್ಣವಾದದ್ದು. ಮಾನವನ ಆಕೃತಿ ತೋರಿಸಬೇಕಾದರೆ ಒಂದು ತ್ರಿಕೋನ ಬಿಡಿಸಿ, ಅದಕೊಂದು ವರ್ತುಲ ಸೇರಿಸಿದರೆ ಶಿರವಾಯಿತು, ಕೈ ಕಾಲುಗಳನ್ನು ಗೀರುಗಳಿಂದಲೇ ತೋರಿಸಲಾಗುತ್ತದೆ. ಕುದುರೆ ಬಿಡಿಸಬೇಕಾದರೆ, ಎರಡು ತ್ರಿಕೋನಗಳನ್ನು ಜೋಡಿಸಿ ಅವಕ್ಕೆ ಮುಖ, ಬಾಲ, ಕಾಲುಗಳನ್ನು ಜೋಡಿಸಿದರಾಯಿತು. ಸ್ತ್ರೀ-ಪುರುಷ-ಭೇದ ತೋರಿಸಲು ಜನನೇಂದ್ರಿಯಗಳನ್ನು ಎದ್ದು ಕಾಣಿಸುವಂತೆ ತೋರಿಸುವದು ವಾಡಿಕೆಯಾಗಿದೆ. ಈ ಕಲೆಯನ್ನು ಆಳವಾಗಿ ಅಭ್ಯಾಸಮಾಡಿ ಅದು ಸಂಪೂರ್ಣ ನಾಶವಾಗಿಹೊಗುವ ಮೊದಲೇ ಬೆಳಕಿಗೆ ತರುವದು ಅತ್ಯವಶ್ಯವಾಗಿದೆ.

## ೧೦. ಭುಜಲಿಯಾ

ಭವಿಷ್ಯದ ಹವಾಮಾನ, ಮಳೆ, ಬೆಳೆಗಳನ್ನು ವೈಜ್ಞಾನಿಕವಾಗಿ ಗೊತ್ತು ಪಡಿಸುವದನ್ನು ಮಾನವನು ಇತ್ತೀಚೆಗೆ ಅರಿತುಕೊಂಡರೂ, ಅನಾದಿಕಾಲದಿಂದಲೂ ಮುಂದಾಗುವದನ್ನು ಅರಿಯುವದಕ್ಕೆ ವಿವಿಧೋಪಾಯುಗಳನ್ನು ಬಳಸುತ್ತ ಬಂದಿರುವನು; ವ್ಯಾಧ-ಆದಿಮಾನವನು ತನ್ನ ಈ ಯತ್ನಕ್ಕೆ ಯಶಸ್ಸು ಸಿಗುವದೋ ಇಲ್ಲವೋ ಎಂದು ಪರೀಕ್ಷಿಸಲು ಆಗ ಮಾಯಾ-ಮಂತ್ರಗಳ ಮೊರೆ ಹೊಕ್ಕಿದ್ದನು. ತನ್ನ ನಿವಾಸಸ್ಥಾನದಲ್ಲಿ ತಾನು ಬೇಟೆಯಾಡಬೇಕಾದ ಪ್ರಾಣಿಗಳ ಚಿತ್ರ ಬಿಡಿಸಿ ಅವು ತನಗೆ ಆಹುತಿಯಾಗುವಂತೆ ಜಪ-ತಪಮಾಡಿ, ತನ್ನ ಇಷ್ಟ ನೆರವೇರಿದರೆ, ದೇವರುದಿಂಡರಿಗೆ ಕಪ್ಪ-ಕಾಣಿಕೆ ಕೊಡುವದಾಗಿ ಹರಕೆ ಹೊತ್ತಿದ್ದ, ಯಶ ದೊರೆತಾಗ ತನ್ನ ಬೇಟೆಯ ಪಾಲು, ಸೆರೆಯೊಂದಿಗೆ ದೇವರಿಗೆ ಅರ್ಪಿಸಿದರೆ. ಶುಭಶಕುನವಾಗದೇ ಬೇಟೆಯಾಡಲು ಹೋಗಿ, ಏನಾದರೂ ತರುವ ಬದಲಾಗಿ ತನ್ನ ಕೈಕಾಲು ಇಲ್ಲವೇ ಸಂಗಡಿಗರನ್ನು ಕಳೆದುಕೊಂಡು ಹಿಂದಿರುಗಿದಾಗ ತಪ್ಪು

ಕಾಣಿಕೆಯನ್ನು ದೇವರಿಗೆ ಸಲ್ಲಿಸಿ ಕ್ಷಮೆ ಕೋರಲು ಹಿಂಜರಿಯುತ್ತಿರಲಿಲ್ಲ. ಕೃಷಿ-ಜೀವನ ಪ್ರಾರಂಭಿಸಿದ ನಂತರ, ಭವಿಷ್ಯದತ್ತ ಹೆಚ್ಚಿಚ್ಚು ಲಕ್ಷ್ಯ ಪೂರೈಸ ಬೇಕಾಯಿತು. ಭುಜಲಿಯಾ, ಶತಕಗಳ ಹಿಂದೆಯೇ ಆಚರಣೆಯಲ್ಲಿ ಬಂದ ಇಂತಹ ಒಂದು ಹಬ್ಬ.

ಸಾವನ್(ಶ್ರಾವಣ) ತಿಂಗಳದ ಶುಕ್ಲಪಕ್ಷದಲ್ಲಿ ಮುಂಬರುವ ಬೆಳೆಯು ಹೇಗಿರುತ್ತದೆಂದು ಗೊತ್ತುಪಡಿಸುವ ಈ ಹಬ್ಬವನ್ನು ಛಿಂದವಾಡಾ, ಬೇತುಲ, ಶಿವನಿ, ಮಾಂಡ್ಲಾ, ಬಾಲಾಘಾಟ, ಜಿಲ್ಲೆಗಳಲ್ಲಿ ಆಚರಿಸುವ ಪದ್ಧತಿಯಿದೆ. ಕಲ್ಲಿದ್ದಲಿ-ಖಣಿಗಳಿಗೆ ಹೆಸರಾದ ಪರಾಸಿಯಾ-ಚಾಂದಾಮೇಟಾಗಳಲ್ಲಿ ವೈಭವ ದಿಂದ ಆಚರಿಸಿದರೆ, ಸಾಗರದಲ್ಲಿ ವಿಜೃಂಭಣೆಯಿಂದ ನೆರವೇರಿಸುವರು. ಹಬ್ಬಕ್ಕೆ ಇನ್ನೂ ಎರಡು ವಾರ ಇರುವಾಗಲೇ ಜನರು ಧಾನ್ಯದ ಬೆಳವಣಿಗೆ ಹೇಗಾಗುವ ದೆಂದು ಪ್ರಾಯೋಗಿಕವಾಗಿ ಪರೀಕ್ಷಿಸಲು, ಅವುಗಳ ಸಸಿ ನೆಡಲು, 'ಭುರಕು' ತಯಾರಿಸುವರು. ತುಂಬ ಹಿಂದೆ ಭುರಕುಗಳನ್ನು ಎಲೆಗಳಿಂದಲೇ ಮಾಡುತ್ತಿ ದ್ದಿರಬೇಕು. ಇಂದಿಗೂ ಹಲವು ಗೊಂಡರು ಅದನ್ನೇ ಅನುಸರಿಸುತ್ತಾರೆ. ಸುಧಾರಿಸಿದವರು ಸೀಳು-ಬಿದಿರನ್ನು ತ್ರಿಕೋನಾಕಾರದ ಬುಟ್ಟಿಯಂತೆ ಹೆಣೆ ಯುತ್ತಾರೆ. ಹೆಚ್ಚು ತೊಂದರೆ ವಹಿಸಲು ಸಿದ್ಧರಿಲ್ಲದವರು ಕಾಗದದ ದೊನ್ನೆ ಗಳನ್ನು ಬಳಸುತ್ತಾರೆ. ತಮ್ಮ ಕುಟೀರಗಳನ್ನು ಶುಚಿಮಾಡಿ ತಾವು ನದಿ, ಕೆರೆಗಳಲ್ಲಿ ಮಿಂದು, ಭುರಕುಗಳಿಗೆ ಸೂಸುಮಣ್ಣು ಸೇರಿಸಿ ಆ ವರ್ಷದ ಹೋಳಿ ಸುಟ್ಟ ಸ್ಥಳಕ್ಕೆ ಮೆರವಣಿಗೆಯಲ್ಲಿ ಹೊರಡುವರು. ಅಲ್ಲಿ ಗೋದಿಯನ್ನು ವಿಧಿವತ್ತಾಗಿ ನೆಟ್ಟು, ನೀರು ಹನಿಸಿಕೊಂಡು ಹಿಂತಿರುಗುವರು. ಅವನ್ನು ಮಾಡು, ಗೋಡೆ, ಇಲ್ಲವೇ ಜಗಲಿಯ ಮೇಲಿಟ್ಟು. ಶ್ರದ್ಧೆಯಿಂದ ಪ್ರತಿದಿನ ನೀರು ಹನಿಸಿ, ಯೋಗಕ್ಷೇಮ ನೋಡಿಕೊಳ್ಳುವರು. ಈ ಬೀಜ ಚೆನ್ನಾಗಿ ಬೆಳೆದರೆ, ಸುಗ್ಗಿ ಚೆನ್ನಾಗಿ ಆಗುವದೆಂದು ಗ್ರಹಿಸಿ ಹಿಗ್ಗುವರು. ಇಲ್ಲದಿದ್ದರೆ ಹಾಹಾರಿ ಅನೇಕ ನಿವಾರಣೋಪಾಯದ ಹರಕೆಗಳನ್ನು ಹೊರುವರು.

ಈ ಹಬ್ಬಕ್ಕೆ ಒಂದು ನಿರ್ದಿಷ್ಟ ದಿನವಿಲ್ಲ. ಬೇರೆ ಬೇರೆ ಬೀದಿಯವರು, ಊರಿನವರು, ಬೇರೆ ಬೇರೆ ದಿನಗಳಲ್ಲಿ ಆಚರಿಸುವದರಿಂದ, ಒಂದು ವಾರದ ತನಕ ನಡೆದೇ ಇರುತ್ತದೆ. ಹಳ್ಳಿಯ ಮುಖಂಡರು ನಿರ್ಧರಿಸಿದ ದಿನ ಎಲ್ಲರೂ ತಮ್ಮ ಉತ್ತಮ ಪೋಷಾಕಿನಲ್ಲಿ, ಊರ ಪುರೋಹಿತನ ಹತ್ತಿರ ಸೇರಿ, ಗ್ರಾಮದೇವತೆಗೆ

ನಮಿಸಿ, ಡೋಲನ್ನು ಬಾರಿಸುತ್ತ, ಹಾಡುತ್ತ, ಕುಣಿಯುತ್ತ ಈ ಹಬ್ಬದ ಪ್ರಾರಂಭವನ್ನು ಆಚರಿಸುವರು. ಗಣೇಶಚತುರ್ಥಿ ಮತ್ತು ಮಹಾನವಮಿಯ ಹಬ್ಬಗಳನ್ನು ಸಾಂಘಿಕವಾಗಿ, ಸಾರ್ವಜನಿಕವಾಗಿ ಆಚರಿಸುವಂತೆ, ಬೇರೆ ಬೇರೆ ಕೇರಿಗಳಲ್ಲಿ ನಿರ್ದಿಷ್ಟ ಸ್ಥಳಗಳಲ್ಲಿ ಹಾಡುಗಾರಿಕೆಯನ್ನು ಏರ್ಪಡಿಸಲಾಗುತ್ತದೆ. ಸುತ್ತಮುತ್ತಲಿನವರು, ಚಂದಾ ಕೂಡಿಸಿ, ಚಪ್ಪರವೊಂದನ್ನು ನಿಲ್ಲಿಸಿ, ಹಾಡುಗಾರನಿಗೆ ವೇದಿಕೆ ನಿರ್ಮಿಸಿ, ಕೇಳುವವರಿಗೂ ಚಾಪೆ ಇತ್ಯಾದಿ ಹಾಸಿರುತ್ತಾರೆ. ಕವಾಲಿಹಾಡುವವರಂತೆ, ಭುಜಲಿಯಾ ಹಾಡುಗಳನ್ನು ಹಾಡುವ ಪಂಗಡದವರೇ ಇರುತ್ತಾರೆ. ಅವರಿಗೆ ಸಲ್ಲಬೇಕಾದ ವಿಶೇಷ ಗೌರವದೊಂದಿಗೆ ಆಮಂತ್ರಿಸಿದಾಗ, ಮನಸ್ವೀ ಸೆರೆ ಕುಡಿದು, ವೀಳ್ಯ ಜಗಿಯುತ್ತ ಕರ್ಕಶವಾದ ಧ್ವನಿಯಲ್ಲಿ ಸಾಂಪ್ರದಾಯಿಕವಾದ ಹಾಡುಗಳನ್ನು ಹಾಡುವರು. ಢೋಲಕ್‌ದವರು, ಎಡಕ್ಕೆ ಅಥವಾ ಬಲಕ್ಕೆ ಕೂಡ್ರದೇ, ತೀರ ಎದುರಿಗೇ ಕುಳಿತು, ಕೊರಳ ಸೆರೆ ಹಿಗ್ಗಿದಂತೆ ಏಕಪ್ರಕಾರವಾಗಿ ಬಾರಿಸುವರು. ಶ್ರೋತೃವರ್ಗವೂ ಮನಸ್ವೀ ಕುಡಿದಿರುವದರಿಂದಲೋ ಏನೋ, ಅವರ ಹಾಡುಗಾರಿಕೆಯನ್ನು ಅರ್ಥಮಾಡಿಕೊಂಡವರಂತೆ ಗೋಣು ಹಾಕುತ್ತಲೇ ಇರುತ್ತಾರೆ. ಹರಿಕೀರ್ತನೆಯಂತೆ ಇಲ್ಲಿಯೂ ಮೌನವಾಗಿ ಕುಳಿತಿರಬೇಕು. ಮೊದಲಿನಿಂದ ಕೊನೆಯ ವರೆಗೆ ಕೇಳಬೇಕೆಂಬ ಕಟ್ಟುನಿಟ್ಟು ಮಾತ್ರ ಇರದ್ದರಿಂದ ಜನಸ್ತೋಮ ಬರುತ್ತ-ಹೋಗುತ್ತಲೇ ಇರುತ್ತದೆ. ಹಾಡುಗಳ ವಸ್ತುವೂ ಇಂಥದೇ ಇರಬೇಕೆಂಬ ನೇಮವಿಲ್ಲ. ದೇವರನಾಮದಿಂದ ಕಾಮಿನಿಯರವರೆಗೆ ಏನು ಬೇಕಾದರೂ ಇರಬಹುದು.

ಜಾತ್ರಾದಿನಗಳಲ್ಲಿಯಂತೆ ಭುಜಲಿಯಾದ ಖರ್ಚಿಗೂ ಮಕ್ಕಳಿಗೆ ಹಣ ಕೊಡುವದರಿಂದ ಅವರಿಗೆ ಈ ಹಬ್ಬದಲ್ಲಿ ಆಸಕ್ತಿ ಹೆಚ್ಚು. ಅಂತೆಯೇ ಅವರ ಹಣವನ್ನು ಆಕರ್ಷಿಸುವಂತಹ ಸಾಮಾನುಗಳ ಅಂಗಡಿಗಳು ಎಲ್ಲೆಡೆ ತಲೆಯೆತ್ತಿ ನಿಂತಿರುತ್ತವೆ. ಮಣ್ಣಿನ ಗೊಂಬೆಗಳಿಗೆ ವಿಶೇಷ ಬೇಡಿಕೆ. ಮೂಗಿಗೆ ಪಟ್ಟಿ ಬಳಿ ಹಾಕಿಕೊಂಡ ಗಿಳಿ, ಬಣ್ಣಬಣ್ಣದ ಉಡುಪು ತೊಟ್ಟ ಕುದುರೆ-ಸವಾರ, ಬೀಸುವ ಕಲ್ಲು, ಅಡಿಗೆಯ ಪಾತ್ರೆಗಳು, ಮಕ್ಕಳ ತಿಜೋರಿ ಮುಂತಾದವೆಲ್ಲ ಬಂದಿರುತ್ತವೆ. ಇವೆಲ್ಲವನ್ನು ಹತ್ತು-ಹದಿನೈದು ಪೈಸೆಗಳಿಗೆ ಮಾರಲು ಹೇಗೆ ಪೂರೈಸುತ್ತದೋ ಏನೋ ! ಇವಲ್ಲದೇ ಎಲ್ಲೆಡೆ ದೊರೆಯುವ ಪೀಪಿ, ಬಲೂನು, ಮಿಠಾಯಿಗಳೂ ಇರುತ್ತವೆ. ಬಲಿತ ಗೊಂಡ ಆದಿವಾಸಿಗಳು ಅವನ್ನು ಕೊಂಡು ಮಕ್ಕಳಂತೆ

ಆನಂದಿಸುವದನ್ನು ನೋಡಿ ಮೋಜೆನಿಸಿತು.

ಸಾಮೂಹಿಕ ನರ್ತನ ಈ ಹಬ್ಬದ ವೈಶಿಷ್ಟ್ಯ. ಎಲ್ಲೋ ಮೂಲೆ ಮೂಲೆಗಳಲ್ಲಿ ಬಿದ್ದ ವಾದ್ಯಗಳನ್ನು ಹೊರಗೆಳೆದು, ನೆರೆಮನೆಯವರನ್ನೆಲ್ಲ ಕರೆಯುತ್ತ, ಗೆಳೆಯರನ್ನು ಎಳೆಯುತ್ತ ನೃತ್ಯಮೇಳಗಳನ್ನು ಹೊಂದಿಸುವರು. ಹಳ್ಳಿಯ ಪಟೇಲ, ಕೊತವಾಲ ಇನ್ನಿತರ ಪ್ರತಿಷ್ಠಿತರ ಮನೆಯ ಅಂಗಳಗಳಲ್ಲಿ, ಇಲ್ಲವೇ ಬಯಲಿನಲ್ಲಿ ನರ್ತಿಸುವದು ವಾಡಿಕೆ. ಎಲ್ಲಕ್ಕೂ ಮೊದಲು ಡೋಲಿನವನು ಒಂದೆಡೆಗೆ ಕುಳಿತು, ಢಮುಕ್-ಢಮುಕ್ ಎಂದು ನಾದ ಹೊರಡಿಸಿದೊಡನೆ ಕೊಳಲಿನವನು ಜೇಬಿನಿಂದ ತನ್ನ ವಾಲಾ (ಚಿಕ್ಕಕೊಳಲನ್ನು) ಹೊರಗೆಳೆದು ನುಡಿಸಲಾರಂಭಿಸುತ್ತಾನೆ. ಮಂಗರೆ(ತಾಳ)ಯವನು ಕೂಡಲೆ ಅವರನ್ನು ಅನುಕರಿಸುತ್ತಾನೆ. ಉಳಿದವರು ತಲೆಯ ರುಮಾಲನ್ನು ತೆಗೆದು ಸೊಂಟಕ್ಕೆ ಗಟ್ಟಿಯಾಗಿ ಬಿಗಿದುಕೊಂಡು ಈ ಮೂವರನ್ನೂ ಸುತ್ತುವರಿದು ನಿಲ್ಲುತ್ತಾರೆ. ಬಲಗೈಯಲ್ಲಿ ಬಡಿಗೆಯನ್ನು, ಎಡಗೈಯಲ್ಲಿ ಬಣ್ಣಬಣ್ಣದ ಕರವಸ್ತ್ರವನ್ನು ಹಿಡಿಯುವದು ಪದ್ಧತಿ. ಒಬ್ಬಿಬ್ಬರು ಬಟ್ಟೆಯ ಬದಲಾಗಿ ಚುಟುಕರ್ (ಚಿಪರಿ) ಹಿಡಿದಿರುತ್ತಾರೆ. ತಾಳದವನು ಗಂಟಲು ಸಡಲಿಸಿ, ಒಮ್ಮೆಲೆ ಧ್ವನಿ ಏರಿಸಿ, ಹಾಡಲಾರಂಭಿಸಿದಾಗ, ಕೊಳಲಿನವನು ನುಡಿಸಲಾರಂಭಿಸುತ್ತಾನೆ. ಡೋಲಕ್‌ದವನು ಹಿನ್ನೆಲೆಯಾಗಿ ಬಾರಿಸುತ್ತಾನೆ. ಇನ್ನಿತರರು ವರ್ತುಲಾಕಾರದಲ್ಲಿಯೇ ನಿಂತು ಬಲಕ್ಕೊಮ್ಮೆ ಎಡಕ್ಕೊಮ್ಮೆ ಕೋಲುಹಾಕುತ್ತ, ಹಾಡಲಾರಂಭಿಸುತ್ತಾರೆ. ಒಂದು ಗುಂಪು ಅರ್ಧವರ್ತುಲದಲ್ಲಿ ನಿಂತು, ಮೊಣಕಾಲೂರಿ ಹಾಡಿ ನಿಲ್ಲಿಸಿದ ನಂತರ ಇನ್ನೊಂದು ಅರ್ಧವರ್ತುಲಿನವರು ಅವರನ್ನು ಅನುಸರಿಸುತ್ತಾರೆ. ಪ್ರತಿ ಕೋಲಿನ ಬಡಿತಕ್ಕೆ ಒಂದು ಹೆಜ್ಜೆ ಬಲಕ್ಕೆ ಸರಿಯುವದರಿಂದ ಮಾನವ-ಚಕ್ರ ನಿಧಾನವಾಗಿ ಚಲಿಸಿದಂತೆ ಭಾಸವಾಗುತ್ತದೆ. ನೆರೆಯ ನಶೆ ಏರಿದಂತೆ ಹಾಡು ಚುರುಕಾಗುತ್ತದೆ; ವಾದ್ಯ ಜೋರಾಗುತ್ತದೆ; ನೃತ್ಯದ ರಭಸವೂ ಇನ್ನೂ ಹೆಚ್ಚುತ್ತದೆ. ಈಗ ಅವರು ಕೋಲು ಚೆಲ್ಲಿ ಭಾಂಗಡಾ-ನರ್ತಕರು ಕೈ ಮೇಲಕ್ಕೆತ್ತಿ ತತ್ವಜ್ಞಾನಿಗಳಂತೆ ಗಗನದತ್ತ ಮುಖಮಾಡಿ ಭಾವಪೂರ್ಣವಾಗಿ ಹಾಡುತ್ತಾರೆ. ಕೆಲವರು ನಿಂತಲ್ಲಿ ಗಗನದತ್ತ ಜಿಗಿದರೆ, ಮತ್ತೆ ಕೆಲವರು ಕುಳಿತಲ್ಲಿಂದಲೇ ಮೇಲಕ್ಕೆ ಹಾರಲು ಯತ್ನಿಸುವರು.

ನೃತ್ಯ-ಮುಂದಿರದಂತೆ ಪ್ರೇಕ್ಷಕರ ಸಂಖ್ಯೆಯೂ ಹೆಚ್ಚುತ್ತದೆ. ಹುರುಪು

ಇದ್ದವರು, ಎದ್ದುಬಂದು ನೃತ್ಯಕ್ಕೆ ಸೇರುತ್ತಾರೆ. ಐವತ್ತು ದಾಟಿದ ಮುದುಕಿಯೊಬ್ಬಳು, ಸೆಗಣಿ ಹೆಕ್ಕಲು ಬಂದವಳು ಎವೆಯಿಕ್ಕದೇ ನೃತ್ಯವನ್ನು ನೋಡುತ್ತಿದ್ದಳು. ಆಕೆಗೆ ತನ್ನ ಬಾಲ್ಯದ ನೆನಪಾಗಿರಬೇಕು. ತಾನೆಲ್ಲಿದ್ದೇನೆ, ಏನು ಮಾಡುತ್ತಿದ್ದೇನೆ ಎಂಬುದನ್ನೂ ಮರೆತು,ಆವೇಶದಿಂದ ಬಂದು ಕುಣಿಯಲಾರಂಭಿಸಿದಳು. ಆಗೊಮ್ಮೆ ಈಗೊಮ್ಮೆ ಶೃಂಗಾರ-ಮುದ್ರೆಗಳನ್ನು ತೋರಿದಾಗ ಜನಸ್ತೋಮ ನಗೆಗಡಲಿನಲ್ಲಿ ತೇಲಿತು. ಎರಡು ಮೇಳದವರು ಅಕ್ಕಪಕ್ಕದಲ್ಲಿ ಕುಣಿಯುವಾಗ ಪ್ರೇಕ್ಷಕರು ತುಲನಾತ್ಮಕ ದೃಷ್ಟಿಯಿಂದ ನೋಡುವುದರಿಂದ ಅವರಲ್ಲಿ ಸ್ಪರ್ಧಾ ದೃಷ್ಟಿ ಜಾಗೃತವಾಗಿ ಹಾಡು, ನೃತ್ಯ, ವಾದ್ಯಗಳಲ್ಲಿ ಹೆಚ್ಚಿನ ಜೀವಕಳೆ ತುಂಬುತ್ತದೆ. ರಸಿಕ-ಶಿರೋಮಣಿಗಳೂ ಕುಣಿತದಲ್ಲಿ ಸೇರ್ಪಡೆಯಾಗುತ್ತಾರೆ.

ಛಾಯಾಚಿತ್ರಗಳನ್ನು ತೆಗೆಯುತ್ತಿದ್ದಂತೆ ಇವರೆಲ್ಲ ಬೆಡಗಿನ ಸಮವಸ್ತ್ರ ಧರಿಸಿದ್ದರೆ ಇನ್ನೂ ಎಷ್ಟು ಆಕರ್ಷಣೀಯವಾಗಿರುತ್ತಿತ್ತು, ಎಂದು ಅನಿಸದೇ ಇರಲಿಲ್ಲ. ಅವರಿಗೆಲ್ಲ ತಮ್ಮ ಸುತ್ತಮುತ್ತಲಿನ ಪರಿವೆಯೇ ಇಲ್ಲದ್ದರಿಂದ ಛಾಯಾಗ್ರಹಣಕ್ಕೆ ಸುಲಭವಾಯಿತು. ಚಾರಪಾಯಿಯ ಮೇಲೆ ಕುಳಿತು ಕುಣಿತ ನೋಡುತ್ತಿದ್ದ ಪ್ರತಿಷ್ಠಿತರಿಗೆ ಈ ಹೊರಗಿನವನು ದೃಷ್ಟಿಗೆ ಬಿದ್ದಿರಬೇಕು. ಅಂತೆಯೇ ಬಂಟನೊಬ್ಬನನ್ನು ಕಳಿಸಿ ಕರೆಯಿಸಿಕೊಂಡು ಚಾರಪಾಯಿಯ ಮೇಲೆ ಕುಳಿತುಕೊಳ್ಳುವಂತೆ ನನಗೆ ವಿನಂತಿಸಿಕೊಂಡರು. ಬೀಡಿಯನ್ನು ಬೇಡವೆಂದಾಗ ಸಿಗರೇಟ ತರಿಸಿಕೊಡುವೆನೆಂದರು. ಎಲೆ-ಅಡಿಕೆಯನ್ನೂ ಸ್ವೀಕರಿಸದಿದ್ದಾಗ ಇವನು ಮನುಷ್ಯನು ಹೌದೋ ಅಲ್ಲವೋ ಎಂಬ ಸಂದೇಹದಿಂದ ನೋಡಿದರು. ನೃತ್ಯ ಮುಗಿದ ನಂತರ ಬೆವರು ಒರಿಸಿಕೊಳ್ಳುತ್ತ, ಅವರೆಲ್ಲ ಹರಟೆ-ನಗೆಚಾಟಿಕೆಗಳಲ್ಲಿ ಪಾಲುಗೊಂಡರು. ಮನೆಯ ಯಜಮಾನನಿಗೆ ಸಿಂಧೂರ ಹಚ್ಚಿ, ತಾವೂ ಹಚ್ಚಿಸಿಕೊಂಡು ನಮಿಸಿದರು. ನಂತರ ಅವರಿಗೆಲ್ಲ ತಿಂಡಿ-ತೀರ್ಥಗಳ ಜೊತೆಗೆ ಪಾನ್-ಬೀಡಿಗಳನ್ನೂ ಗೌರವಧನವನ್ನೂ ಕೊಡಲಾಯಿತು.

ಸೂರ್ಯನ ಪ್ರಖರತೆ ಕಡಿಮೆಯಾಗಿ ಅತ್ತ ಪಶ್ಚಿಮದಿಕ್ಕಿನಲ್ಲಿ ಇಳಿಯಲಾರಂಭಿಸಿದಾಗ, ಜನರು ನದಿ, ನಾವೆ, (ಕಾಲುವೆ)ಗಳ ದಂಡೆಗೆ ಸೇರಲಾರಂಭಿಸುತ್ತಾರೆ. ಅಲ್ಲಿ ಜಾತ್ರೆಯ ಸಂಭ್ರಮ ನಡೆದಿರುತ್ತದೆ. ಬಾಲಕರು ಆಟಿಗೆಗಳನ್ನು ಕೊಂಡರೆ, ಯುವಕರು ತಿರುಗು-ತೊಟ್ಟಿಲಲ್ಲಿ ಕುಳಿತು ಕೇಕೆ ಹಾಕುತ್ತಾರೆ. ಪ್ರೌಢರು ಜಲಜನಕವಾಯು ತುಂಬಿದ ಫುಗ್ಗಾ (ಬಲೂನು)ಕೊಂಡು ಗಗನದ

ಕಡೆಗೆ ಹಾರಿಸಿ ಸಂತೋಷಪಡುವರು. ಗೊಂಡ ಸ್ತ್ರೀಯರು ಪೆಟ್ಟಿಗೆಯಿಂದ ಒಳ್ಳೆ ಸೀರೆ-ಆಭರಣಗಳನ್ನು ಹೊರಗೆಳೆದು, ಸಿಂಗರಿಸಿಕೊಂಡು, ಗೆಳತಿಯರೊಡಗೂಡಿ ಭುಜಲಿಯಾದ ವೈಭವ ನೋಡಲು ಬಂದಿರುತ್ತಾರೆ. ಅವರ ಸೊಂಟದ ಡಾಬು, ಕಡಗಗಳು, ಕಾಲ್ಬಳೆಗಳ ವೈವಿಧ್ಯ ನೋಡುವದೇ ಒಂದು ಸೊಗಸು. ಅವರೆಲ್ಲ ತಿಳಿ-ಹೃದಯದವರಾದ್ದರಿಂದ ಸಣ್ಣಮಾತಿಗೂ ಕಿಲಿಕಿಲಿ ನಗುತ್ತಾರೆ.

ಸ್ಥಳ ಸಿಕ್ಕಲ್ಲಿ, ಬಂಡೆಗಲ್ಲು, ಮರಗಳ ಮೇಲೆಲ್ಲ ಜನರು ಕಿಕ್ಕಿರಿದು ತುಂಬು ವದರಿಂದ ಅವರನ್ನು ನಿಯಂತ್ರಿಸಲು ಪೋಲಿಸ-ಪಡೆಯು ಉಪಸ್ಥಿತವಿರುತ್ತದೆ, ಎಲ್ಲರೂ ತಮಗೆ ಮುಂದಿನ ಸ್ಥಾನ ಬೇಕೆಂದು ಅಪೇಕ್ಷಿಸಿ ಮುಂದೆ ಮುಂದೆ ಸರಿಯುತ್ತ ಹೋದಾಗ, ಪೋಲಿಸರು ಅವರನ್ನು ಎಬ್ಬಿಸಿ ಅತಿ ಹಿಂದಕ್ಕೆ ಕಳಿಸು ವದರಿಂದ ಗಲಿಬಿಲಿ ಉಂಟಾಗುತ್ತದೆ. ಎಲ್ಲಿಂದಲೋ ದೂರದಿಂದ ವಾದ್ಯ ಕೇಳಲಾರಂಭಿಸಿದಾಗ, ಜನಸ್ತೋಮ ಹೊಂದಿಸಿಕೊಂಡು ಕುಳಿತು ವಾದ್ಯ ಬರುವ ಕಡೆಗೆ ಕುತೂಹಲದ ಕಣ್ಣುಗಳಿಂದ ನೋಡುತ್ತಿರುತ್ತಾರೆ. ಎರಡು ಪಂಗಡ ದವರು ವಿರುದ್ಧ ದಿಕ್ಕಿನಿಂದ ಬರುತ್ತಿರುತ್ತಾರೆ. ವಾದ್ಯ-ಮೇಳದವರನ್ನು ಹಿಂಬಾಲಿಸಿ ಹೆಂಗಳೆಯರು ತಾವು ಬೆಳೆಸಿದ ಭುರಕುಗಳನ್ನು ತಲೆಯ ಮೇಲೆ ಹೊತ್ತುಕೊಂಡು ಹೊರಟಿರುತ್ತಾರೆ. ಲಾಠಿ ಹಿಡಿದ ಸ್ವಯಂಸೇವಕರು ಜನ ಸ್ತೋಮವನ್ನು ಇಬ್ಭಾಗಮಾಡಿ ಮೆರವಣಿಗೆ ಮುಂದುವರಿಯಲು ಸ್ಥಳ ಮಾಡಿಕೊಡುತ್ತಾರೆ. ಎರಡು ಬಣದವರೂ ವಿರುದ್ಧ ದಿಕ್ಕಿನಲ್ಲಿ ನಿಂತು ಹಲ್ಲು ಕಿರಿದು, ದವಡೆ ಕಚ್ಚಿ, ಲಾಠಿ ತೋರಿಸಿ, ನಿಮ್ಮನ್ನು ಥಳಿಸಿದಾಗಲೇ ನಮಗೆ ತೃಪ್ತಿ ಎಂದು ಹಾವಭಾವದಿಂದ ತೋರಿಸಿಕೊಳ್ಳುತ್ತಾರೆ. ಅವರೂ ಹಿಂದೆ ಬೀಳದೇ ಒಂದು ಹೆಜ್ಜೆ ಮುಂದೆ ಹಾಕಿದರೆ ಕಾಲುಮುರಿದು ಕೈಯಲ್ಲಿ ಕೊಡುವೆವೆನ್ನು ತ್ತಾರೆ. ಒಂದು ಪಕ್ಷ ಮೂದಲಿಸುವ, ಬೈಯುವ ಹಾಡು ಹಾಡಿದರೆ, ಇನ್ನೊಂದು ಪಕ್ಷದವರು ಅಶ್ಲೀಲ ಹಾಡುಗಳನ್ನು ಹಾಡಲಾರಂಭಿಸುತ್ತಾರೆ. ಈ ವಾಗ್ಯುದ್ಧ ವನ್ನು ಜನ ಮೆಚ್ಚಿಕೊಂಡು ಕೇಕೆಹಾಕಿ ನಗುತ್ತಾರೆ. ಇದರಿಂದ ಹುರುಪುಗೊಂಡ ಇತ್ತಂಡದವರು ಇನ್ನೂ ಕೆಟ್ಟಬೈಗಳನ್ನು ಪ್ರಾರಂಭಿಸುತ್ತಾರೆ. ಇದರಲ್ಲಿ ಹೆಂಗಳೆ ಯರದೇ ಪ್ರಧಾನಪಾತ್ರ. ಜೊತೆಗೆ ವೃದ್ಧೆಯರೂ ಬಂದು ಸೇರಿಕೊಳ್ಳುತ್ತಾರೆ. ವಿರುದ್ಧ ಪಂಗಡದವರನ್ನು ಅವಮಾನಗೊಳಿಸಬೇಕೆಂದು, ಗುಹ್ಯಾಂಗಗಳನ್ನು ಪ್ರದರ್ಶಿಸಲೂ ಹಿಂಜರಿಯುವದಿಲ್ಲ.

ಹೆಚ್ಚಿನ ಜನ ಕುಡಿದು ಬಂದಿರುತ್ತಾರೆ. ಪ್ರೇಕ್ಷಕರಾದರೋ ತಮಾಷೆ ನೋಡಲೆಂದೇ ಬಂದಿರುತ್ತಾರೆ. ಹೀಗಾಗಿ ಮಂಗನಿಗೆ ಸೆರೆಕುಡಿಸಿದಂತೆ ಆಗುತ್ತದೆ. ತಮಾಷೆ ವಿಕೋಪಕ್ಕೆ ಹೋದ ಸಂದರ್ಭಗಳೂ ಇವೆ. ಆದ್ದರಿಂದ ಪೋಲಿಸ ಅಧಿಕಾರಿಗಳು ಆದಷ್ಟು ಬೇಗ ಸಮಾರಂಭವನ್ನು ಮುಗಿಸುವ ಕಾತರತೆಯಲ್ಲಿ ಇರುವದರಿಂದ ಆಟ ಮುಗಿಸುವಂತೆ ಎಚ್ಚರಿಸುತ್ತಲೇ ಇರುತ್ತಾರೆ. ಆದರೆ ಅಲ್ಲಿ ಯಾರ ಆಜ್ಞೆಯನ್ನು ಯಾರೂ ಕೇಳುವ ಸ್ಥಿತಿಯಲ್ಲಿ ಇರುವದಿಲ್ಲ. ಆಚೆ ದಂಡೆಯವರು ನೀರನ್ನು ಹಾಯ್ದು ಬಂದು 'ನಿಮ್ಮೆಲ್ಲರ ಗೋಣು ಮುರಿದು ರಕ್ತ ಹೀರಬೇಕು ಎಂದು ಅನಿಸುತ್ತದೆ' ಎಂದಾಗ, ಇನ್ನೊಂದು ತಂಡದವರು ಬಂದೇ ಬರುವೆವು ಏನು ಮಾಡುತ್ತೀರಿ ಎಂದು ಹುಚ್ಚು-ಧೈರ್ಯದಿಂದ ಮುಂದರಿಯುವರು. ಎರಡೂ ತಂಡದವರು ನಡು-ನೀರಿನ ತನಕ ಬರುತ್ತಾರೆ. ಮುಂದೇನಾಗುತ್ತದೋ ಎಂದು ಕಾತರತೆಯಿಂದ ಕಾದಾಗ, ಅವರು ಕಾದಾಡುವ ಬದಲಾಗಿ ಒಬ್ಬರನ್ನೊಬ್ಬರು ಬಿಗಿದಪ್ಪಿ, ಸ್ನೇಹವನ್ನು ಯಾಚಿಸುವರು, ಅನಂತರ ಭುರಕು ಹೊತ್ತು ತಂದ ಹೆಂಗಳೆಯರೆಲ್ಲ ನೀರಿಗೆ ಇಳಿದು ತಾವು ಬೆಳೆಸಿದ ಗೋದಿಯ ಸಸಿಗಳನ್ನು ಸ್ವಚ್ಛವಾಗಿ ತೊಳೆದು, ನದಿಗೆ ಕುಂಕುಮ, ಹೂಗಳೊಂದಿಗೆ ಕೆಲವು ಸಸಿಗಳನ್ನೂ ಅರ್ಪಿಸಿ ಉಳಿದವನ್ನು ಹೊತ್ತು ಗೃಹಾಭಿಮುಖರಾಗುತ್ತಾರೆ. ದಸರೆಗೆ ಬಂಗಾರ ಕೊಡುವಂತೆ ಈ ಸಸಿಗಳನ್ನು ತಮ್ಮ ನೆರೆಹೊರೆಯವರಿಗೆ ಕೊಟ್ಟು ಒಳ್ಳೆ ಬೆಳೆಯನ್ನು ಕೋರುವರು.

# ೧೧. ಧೂಪ್‌ಗಡ

ಹಿಲೆರಿ, ತೇನ್‌ಸಿಂಗರಂತೆ ಕೈಲಾಸ-ಶಿಖರವೇರಲಾಗದಿದ್ದರೂ ಸೈಹ್ಯಾದ್ರಿ ಪರ್ವತಾವಳಿಯ ಕರಿಕಾಲಮ್ಮನ ಗುಡ್ಡ, ಮಿಸಿಸಿಪಿ ನದಿಯ ಪೂರ್ವಕ್ಕೆ ಅತಿ ಎತ್ತರವೆನಿಸಿಕೊಂಡ ಮಿಚೆಲ್-ಪರ್ವತಶಿಖರವನ್ನು ಹತ್ತಿ ಇಳಿಯುವ ಅವಕಾಶ ಸಿಕ್ಕಿತ್ತು. ಮಧ್ಯಭಾರತದ ಸಾತಪುಡಾ-ಪರ್ವತಾವಳಿಗಳಲ್ಲಿ ಧೂಪ್‌ಗಡ-ಶಿಖರ ಅತಿ ಎತ್ತರವೆನಿಸಿಕೊಂಡಿದೆಯಲ್ಲದೇ ಆಗುಂಬೆ-ಬೆಟ್ಟದಂತೆ ಸೃಷ್ಟಿಸೌಂದರ್ಯಕ್ಕೆ ಹೆಸರಾಗಿದೆ. ಸುಲಭವಾಗಿ ಏರಲಾಗದ್ದರಿಂದಲೋ ಏನೋ, ಜನಸಾಮಾನ್ಯರಲ್ಲಿ ಇದೇ ಕೈಲಾಸಪರ್ವತವೆಂದು ಭಾವಿಸುವವರಿದ್ದಾರೆ. ಶಿವನು ಉಮೆಯೊಂದಿಗೆ ಈ ಶಿಖರದಲ್ಲಿ ವಾಸಿಸುವನೆಂಬ ಪ್ರತೀತಿಯಿದ್ದುದರಿಂದ ಇದಕ್ಕೆ ಮಹಾದೇವ ಪರ್ವತಾವಳಿಯೆಂಬ ಹೆಸರೂ ಬಂದಿದೆ. ಅಲ್ಲದೇ ಶಿವನೊಂದಿಗೆ ಹೆಣೆದುಕೊಂಡ ಅನೇಕ ದಂತಕಥೆಗಳು ಇವರ ಪರಿಸರದಲ್ಲಿಯೇ ನಡೆದಿವೆ ಎಂದು ಭಕ್ತವೃಂದ ದೃಢವಾಗಿ ನಂಬಿದೆ. ಭೋಳಾಶಂಕರನನ್ನು ಮಹಿಷಾಸುರನು ಅತಿಯಾಗಿ ಪೀಡಿಸಿದಾಗ ಅವನು ಇಲ್ಲಿಯ ಜಟಾಯು-ಶಂಕರನಲ್ಲಿ ಬಂದು ಅಡಗಿದ್ದನೆಂದು ಅನ್ನುತ್ತಾರೆ. ನೀರಝರಿಯೊಂದು ದೊಡ್ಡದೊಡ್ಡ ಬಂಡೆಗಲ್ಲುಗಳ ಅಡಿಯಿಂದ ಹಾಯ್ದುಬಂದು ಇಲ್ಲಿಯೇ ಪ್ರತ್ಯಕ್ಷವಾಗುವದರಿಂದ, ಅದನ್ನು ಗುಪ್ತ-ಗಂಗಾ ಎಂದು ಕರೆದು ಅಲ್ಲಿಯೇ ಮಿಂದು ಪಾಪನಾಶಮಾಡಿಕೊಳ್ಳುತ್ತಾರೆ.

ನಡು-ಮಳೆಗಾಲದಲ್ಲಿ ಮಹಾದೇವನ ಗುಡ್ಡವೇರಲು ಹೋಗಿದ್ದರಿಂದ, ಬೇಸಿಗೆಯಲ್ಲಿ ಬಂದಿದ್ದರೆ ಚೆನ್ನಾಗಿರುತ್ತಿತ್ತು ಎನಿಸಿತು. ಮಳೆಯಿಂದ ರಸ್ತೆ ಕಡಿದು ಹೋಗಿ ಅಲ್ಲಲ್ಲಿ ದೊಡ್ಡಮಡುವುಗಳಾದ್ದರಿಂದ ಪ್ರಯಾಣವು ತುಂಬಾ ಕಷ್ಟವೆಂದು ಸ್ಥಾನೀಯರು ಅಭಿಪ್ರಾಯಪಟ್ಟರು. ಆದರೆ ಧೂಪಗಡ ನೋಡಬೇಕೆಂಬ ಹಂಬಲ ತೀವ್ರವಾಗಿದ್ದರಿಂದ ಮಳೆರಾಯನಿಂದಲೂ ನಮ್ಮ ಉತ್ಸಾಹ ಕುಗ್ಗಿಸಲಾಗಲಿಲ್ಲ. ಕೊರ್ಕು ಆದಿವಾಸಿಗಳು, ಮಾರ್ಗದರ್ಶಕರು ಬೇಕೇ ಎಂದು ವಿಚಾರಿಸಿದರು. ಅವರು ಸರಿಸಮಾನರಂತೆ, ಜೊತೆ ಕೊಡುವಂತಿದ್ದರೆ ಖಂಡಿತ ಒಪ್ಪಿಕೊಳ್ಳಬಹುದಾಗಿತ್ತು. ಆದರೆ ಅವರನ್ನು ಸಾಹಸಿಗಳ, ಯಾತ್ರಿಕರ ಸಾಮಾನುಗಳನ್ನು

ಹೊರುವ ಕೂಲಿಗಳಂತೆ ಬಳಸಿಕೊಳ್ಳುವ ಪರಿಪಾಠವಿದ್ದುದರಿಂದ, ಮತ್ತು ನನ್ನಷ್ಟಕ್ಕೇ ಪರ್ವತಾರೋಹಣ ಮಾಡಲು ನಾನು ಇಷ್ಟಪಟ್ಟದ್ದರಿಂದ ಅವರ ಸೇವೆ ಬೇಡವೆನ್ನಬೇಕಾಯಿತು. ಗಗನಕ್ಕೆ ಬಿರುಕು ಬಿದ್ದಂತೆ ಧೋಧೋ ಎಂದು ಮಳೆ ಬೀಳುತ್ತಿದ್ದರೂ, ನಸುಕಿನಲ್ಲೆದ್ದು ಬಿಮ್ಮನೆಯ ನಾಶ್ತಾ ಮುಗಿಸಿ, ಯಾವದೋ ಖಾಸಗಿ-ವಾಹನ, ನಾಲ್ಕು-ಐದು, ಮೈಲು ದೂರದ ಬಾರಾದರಿಗೆ ಬಂದು ತಲುಪಿದಾಗ ಮಳೆಯ ರಭಸ ಹೋಗಿ ಬಿಕ್ಕಳಿಕೆ ಮಾತ್ರ ಉಳಿದಿತ್ತು.

ಅದಾಗಲೇ ಮುಂಜಾವಿನ ಮಂಜು, ನಿಸರ್ಗದೊಡನೆ ಕಣ್ಣುಮುಚ್ಚಾಲೆಯ ಆಟದಲ್ಲಿ ಮೈಮರೆತ್ತಿತ್ತು. ಎದುರಿಗಿದ್ದ ಗಿಡ, ಬಳ್ಳಿ, ಮರ ದಿನ್ನೆಗಳು ಹಿಲಾಲಿನ ಬೆಳಕಿಗೆ ನಾಟಕದ ನಾಯಕ-ನಾಯಕಿಯರಂತೆ ಕಣ್ಣುತುಂಬಿವರೆ, ಮಂಜು ಮಯವಾದಾಗ ಹಿನ್ನೆಲೆ-ರಂಗಸಜ್ಜಿಕೆಯಂತೆ ಕಾಣುತ್ತಿತ್ತು. ಮುಂದೆ ಮುಂದೆ ನಡೆದಂತೆ, ಹೊಸ ಗಿಡಮರಗಳು ಪ್ರತ್ಯಕ್ಷವಾಗಿ, ಹಿಂದಿನವು ಮಾಯವಾಗಿ ಹೋಗಿಬಿಡುತ್ತಿದ್ದವು. ಬೀಡಿ, ಸಿಗರೇಟ ಸೇವದವರೂ ಬಾಯಿ-ಮೂಗು ಗಳಿಂದ ಏಕಪ್ರಕಾರವಾಗಿ ಹೊಗೆ ಬಿಡಲು ಅವಕಾಶ ಕೊಟ್ಟ ಹವೆ. ರವಿಕಿರಣಗಳು ಮಂಜಿನ ಪರದೆಯನ್ನು ಛೇದಿಸಿ ಧರೆಗೆ ತಲುಪಿದಾಗ ನಾಟಕದ ದೃಶ್ಯವೇ ಬದಲಾಗುತ್ತಿತ್ತು. ಆ ಕಿರಣಗಳಲ್ಲೆ ಜನ್ಮ ತಳೆದವೋ ಎಂಬಂತೆ ದೂರದ ಶಿಖರ ಗಳು ಈಗ ನಿಮಗೆ ಕಾಣಲಾರಂಭಿಸುವವು. ಗಿರಿಕಂದರಗಳಲ್ಲಿಯ ಗಿಡಮರಗಳು ಮುಂದೆ ಬಂದು, ನವಯುವತಿಯರಂತೆ ನಾಚುತ್ತ ಬಳಕುತ್ತ ಕಣ್ಣೆದಿರು ಸುಳಿದು ತಿರುಗಿ ಮಂಜಿನಲ್ಲಿಯೇ ಕಣ್ಮರೆಯಾಗುವವು. ನಾಚುವ ನಾರಿಯರಿಗಿಂತ ಈ ಸೌಂದರ್ಯ-ರಾಣಿಯರನ್ನು ಕ್ಯಾಮರಾದಲ್ಲಿ ಸೆರೆಹಿಡಿದಿಡುವದು ಅತಿ ಕಷ್ಟದ ಕೆಲಸವೆಂದು ಯತ್ನಿಸಿದಾಗಲೇ ನನಗೆ ತಿಳಿಯಿತು.

ಮಳೆಯ ನೀರಿನಿಂದಾಗಿ ಸವೆದು ಬೋಳಾಗಿ ನಿಂತ ಬಿದುಗಲ್ಲುಗಳು ಆಧುನಿಕ ಶಿಲ್ಪಗಳನ್ನು ನೆನಪಿಗೆ ತರುತ್ತಿದ್ದವು. ಮಣ್ಣಿನ ಬಣ್ಣದಿಂದಾಗಿ ಎಲ್ಲ ಕಡೆಯಲ್ಲಿ ಹಳದಿಬಣ್ಣದ ರಂಗೋಲಿ ಹಾಕಿದಂತೆ ಭಾಸವಾಗುತ್ತಿತ್ತು. ಬಂಡೆ ಗಲ್ಲುಗಳು ಹಳದಿ, ನಾಶಿಪುಡಿ, ಬಿಳಿಬಣ್ಣದ ತರಗಳನ್ನು ಹೊತ್ತುನಿಂತಿದ್ದರಿಂದ, ಈ ಭಾಗ ಒಂದು ಕಾಲದಲ್ಲಿ ಸರೋವರದ ಅಡಿಯಲ್ಲಿ ಇದ್ದಿರಬೇಕು ಎಂದು ಭೂಗರ್ಭ-ತಜ್ಞರು ಅಭಿಪ್ರಾಯಪಡುತ್ತಾರೆ. ಕೈಲಾಸ-ಪರ್ವತವೇ ಮಹಾ ಸಾಗರವನ್ನು ಸೀಳಿ ಬಂದಿದೆ ಎಂದಾಗ, ಮಹಾದೇವ ಗುಡ್ಡ, ಸರೋವರದಿಂದ

ತಲೆಯೆತ್ತಿ ನಿಂತಿದೆ ಎಂದರೆ ಏನಾಶ್ಚರ್ಯ? ಗುಡ್ಡ-ಬೆಟ್ಟಗಳಲ್ಲಿಯ ಮಳೆ ನೀರು ಜುಳುಜುಳು ನಾದಹೊರಡಿಸುತ್ತ ಕೊರಕಲಿನಲ್ಲಿ ಹಳ್ಳವನ್ನು ಸೇರುತ್ತದೆ. ಸೂರ್ಯನು ಪ್ರಖರವಾಗಿ ಬೆಳಗಲಾರಂಭಿಸಿದಾಗ ಮಂಜು ಕಾಲಿಗೆ ಬುದ್ಧಿಹೇಳಿತು. ಈಗ ಅಲ್ಲಿ ಬೆಳೆದ ಕಾಡಿನ ಕಲ್ಪನೆ ಬರುವಂತಾಯಿತು. ಅತ್ಯುತ್ತಮವಾದ ಇಮಾರತಿ-ಕಟ್ಟಿಗೆಯನ್ನು ಕೊಡುವ ಸಾಗವಾನಿ, ಸಾಲ, ಹರಾ, ಸಾಜ್‌ಗಳಂತಹ ಮರಗಳ ಜೊತೆಗೆ ನಾಗರಿಕರು, ಆದಿವಾಸಿಗಳೆಂಬ ಭೇದಭಾವವಿಲ್ಲದೇ ಸವಿಯಾಸೆಯಿಂದ ಬರುವವರೆಲ್ಲರ ಬಾಯಿಗೆ ಕರ್ಪೂರಸುವ ನೇರಲಮರಗಳೂ ಅಲ್ಲಿದ್ದವು. ಸೃಷ್ಟಿ ಸೌಂದರ್ಯದ ಸೆರೆಯನ್ನೀಂಟಿ, ದಣಿವಾರಿಸಿಕೊಳ್ಳಲು ನಿಂತ ದಾರಿಹೋಕರ ಮೇಲೆ ನೀರು ಹನಿಸಿ ತುಂಟ ಮರಗಳು ಆನಂದಿಸುತ್ತಿದ್ದವು.

ಪರ್ವತಾವಳಿಯನ್ನು ಅನುಸರಿಸಿ ಹೋಗುವ ದಾರಿ ಒಮ್ಮೆ ಪಾತಾಳಕ್ಕೆ ಇಳಿದರೆ, ಇನ್ನೊಮ್ಮೆ ಕೈಲಾಸಕ್ಕೇರುತ್ತಿತ್ತು. ಇಂತಹ ಒಂದು ಪರ್ವತ-ಪಥ ಮುಕ್ತಾಯವಾಗುವಲ್ಲಿ ದೈತ್ಯಾಕಾರದ ಬೆಟ್ಟ! ಅದರ ಮೇಲೆ ನಿಂತು ಪರಿಸರ ವೀಕ್ಷಿಸಿದಾಗ, ದೇವರ ಸಾಕ್ಷಾತ್ಕಾರಕ್ಕೆ ಹೊರಟ ಮೋಸೆಸನ ಅನುಭವವೇ ನಮ್ಮದಾಗುವದು. ಅಡಿಯಲ್ಲಿ ಹೆಬ್ಬಾವಿನಂತೆ ಹೊರಟ ಉದ್ದ ದಾರಿ. ದೂರದಲ್ಲಿ ಪರ್ವತ-ಶಿಖರಗಳು ಮೋಡಗಳಿಗೆ ದಾರಿಯನ್ನು ಅಡ್ಡಗಟ್ಟಿ ನಿಂತಿದ್ದವು. ಪರ್ವತ ರಾಜನ ಪಡೆಯೊಂದಿಗೆ ಮಲ್ಲಯುದ್ಧದಲ್ಲಿ ಸೋತ ಮೇಘಗಳು ಕಣ್ಣೀರಿನ ಮಳೆಯನ್ನೇ ಹನಿಸುತ್ತಿದ್ದವು. ಹನಿಹನಿಯೊಂದಿಗೆ ಸೇರಿ ಹಳ್ಳವಾಗಿ ಹರಿದು ಬೆಟ್ಟದಿಂದ ಬೆಟ್ಟಕ್ಕೆ ಧುಮುಕಿ ಸೋಲಿನ ಅಪಮಾನ ತಾಳಲಾರದೇ ಪಾತಾಳಕ್ಕೆ ಇಳಿದುಬಿಡುತ್ತಿದ್ದವು. ಬಹುಶಃ ಇಂತಹ ದೃಶ್ಯಗಳೇ ಭಗೀರಥನ ತಪಸ್ಸು ಮತ್ತು ಗಂಗೆಯನ್ನು ಭೂಲೋಕಕ್ಕೆ ತಂದ ಕಥಗಳಿಗೆ ಪ್ರೇರಕವಾಗಿರಬೇಕು. "ಹರನ ಜಡೆಯಿಂದ ಹರಿಯ ಅಡಿಯಿಂದ ಧುಮ್ ಧುಮ್ ಎಂದು ಧುಮುಕಿ ಬಾ" ಎಂದು ತುಟಿಗಳು ಕವನವನ್ನು ಮೆಲುಕುಹಾಕಿದವು.

ಹಾಲಾಹಲವನ್ನು ಕುಡಿದ ನೀಲಕಂಠನು ವ್ಯಾವಹಾರಿಕನಲ್ಲದಿದ್ದರೂ, ನಿಸರ್ಗಪ್ರೇಮಿ, ಸೌಂದರ್ಯೋಪಾಸಕನೆಂದು ಈ ರಮ್ಯಸ್ಥಳವನ್ನು ನೋಡಿದ ಯಾವನಿಗೂ ಅನಿಸದೇ ಇರಲಾರದು. ಇಲ್ಲಿ ನಿಂತಲ್ಲಿಂದಲೇ ಸೃಷ್ಟಿಕರ್ತನ ಲೀಲೆಯ ಬಹ್ವಂಶ ನೋಡಬಹುದಾಗಿತ್ತು. ಒಂದೆಡೆ ನವಮಾಸ ತುಂಬಿದ ಗರ್ಭಿಣಿಯಂತೆ

ಕರಿಮೋಡಗಳು ನಿಧಾನವಾಗಿ ಚಲಿಸಿದರೆ, ಇನ್ನೊಂದೆಡೆ ಪ್ರತ್ಯೋದಯದ ಸಂತಸ ದಲ್ಲಿ ಮೋಡಗಳು ಆನಂದಬಾಷ್ಪ ಸುರಿಸುತ್ತಿದ್ದವು. ಹೊತ್ತ ಭಾರ ಇಳಿಸಿಕೊಂಡ ಶ್ವೇತ-ಮೇಘಗಳು ಹಂಸಗತಿಯಲ್ಲಿ ಗಿರಿಕಂದಕಗಳ ಮೇಲೆ ಸಂಭ್ರಮದಿಂದ ಹಾರಾಡುತ್ತಿದ್ದವು. ಈ ಎಲ್ಲ ವಿಸ್ಮಯವನ್ನು ಇದ್ದ ನಮ್ಮ ಜೋಡು-ಕಣ್ಣು ನೂರ್ಮಡಿ ಮಾಡಿ ಸವಿಯುತ್ತಿದ್ದಂತೆನಿಸಿತು. ಕೈಗಳು ಯಾಂತ್ರಿಕವಾಗಿ ಫ್ಲಾಸ್ಕಿನಿಂದ ಚಹವನ್ನು ಲೋಟಕ್ಕೆ ಬಗ್ಗಿಸಿ ತುಟಿಗೆ ಪೂರೈಸಿದವು.

ಮುಂದೆ ಅತಿ ಏರಿಸ ಘಟ್ಟವನ್ನು ಹತ್ತಬೇಕಾದ್ದರಿಂದ ಕೈಗೋಲು ಎತ್ತಿಕೊಂಡೆ. ಅದರಿಂದ ಕಾಲು ಜಾರುವ ಭಯ ಎಷ್ಟೋ ಕಡಿಮೆಯಾಯಿತು. ಪ್ರತಿಯೊಂದು ತಿರುವಿನಿಂದಲೂ ರಮಣೀಯವಾದ ದೃಶ್ಯಗಳನ್ನು ನೋಡಲು ಅನುಕೂಲವಾಯಿತು. ಸಮುದ್ರ-ಪಾತಳಿಯಿಂದ ಮೂರುವರೆಸಾವಿರ ಅಡಿ ಎತ್ತರದಲ್ಲಿದ್ದು ತಂಪಾದ ಸ್ಥಳವೆಂದು ಖ್ಯಾತಿವೆತ್ತ ಪಚಮಡಿ, ಕಂದರದಲ್ಲಿ ಇದ್ದಂತೆ ಕಂಡರೆ, ದೂರದ ಮಟಕುಲಿ ಪಾತಾಳ-ಲೋಕದಲ್ಲಿ ಇದ್ದಂತೆ ಅನಿಸಿತು. ಅದರಾಚೆ ಇದ್ದ ಪಿಪರಿಯಾದ ದಿಕ್ಕಿನಲ್ಲಿ ನೋಡಿದರೆ ಎಲ್ಲಾ ನೀಲವರ್ಣದ ಸರೋವರದಂತೆ ಕಂಡಿತು. ತಗ್ಗಿನಲ್ಲಿದ್ದ ಪರ್ವತಾವಳಿಗಳು ಒಮ್ಮೆ ಭಾರವಾದ ಸಾಮಾನುಗಳನ್ನು ಹೊತ್ತು ನಡೆದ ಒಂಟೆಯ ಸಾಲುಗಳಂತೆ ಕಂಡರೆ, ಇನ್ನೊಮ್ಮೆ ಮೋಡಗಳಿಂದ ಆವೃತವಾಗಿ ಅದೃಶ್ಯವಾಗಿಬಿಡುತ್ತಿದ್ದವು. ರಂಗಭೂಮಿಯ ಮಂಟಪದ ದೀಪಗಳಂತೆ, ಸೂರ್ಯಕಿರಣಗಳು ಆಗಾಗ ತಮ್ಮ ಬಣ್ಣಗಳನ್ನು ಬದಲಿಸುತ್ತಿದ್ದುದರಿಂದ, ಪ್ರಕೃತಿಯ ರಮ್ಯತೆಯೂ ಕ್ಷಣಕ್ಷಣಕ್ಕೆ ಬದಲಾಗುತ್ತಿತ್ತು. ಗಿರಿ-ಪರ್ವತಗಳು ಹಸಿರು, ಹಳದಿ, ಬೂದು-ಬಣ್ಣ ಬಳಿದುಕೊಂಡು ಬಂದು ಥಕಥೈ ಎಂದು ಕುಣಿದು ರಂಗಸಜ್ಜಿಕೆಯ ಪಥದಲ್ಲಿ ಕಣ್ಮರೆಯಾಗಿ ಬಿಡುತ್ತಿದ್ದವು. ಈ ನಾಟಕಕ್ಕೆ ತಾಲೀಮು ಇಲ್ಲ, ನಿಯಮಗಳಿಲ್ಲ, ಸೂತ್ರಗಳಿಲ್ಲ. ಆದರೆ ಎಲ್ಲವೂ ಸುಸೂತ್ರ, ಸಿದ್ಧ, ಶೀಘ್ರ; ಪ್ರೇಕ್ಷಕರಿಗೆ ಹುಚ್ಚು ಹಿಡಿಸುವ ನಿಸರ್ಗ-ನಾಟಕವಿದು. ಮಳೆ-ಮೋಡಗಳು ನಾಟಕಕ್ಕೆ ಹೆಚ್ಚಿನ ಕಳೆಯೇರಿಸಿದ್ದವು.

ಯಾವ ದಿಕ್ಕಿನಿಂದ ಹೊರಟರೂ ಭವ್ಯವಾದ ಧೂಪಗಡದ ಪರ್ವತಾವಳಿಗಳು ದಾರಿಯನ್ನು ಅಡ್ಡಗಟ್ಟಿ ನಿಲ್ಲಿಸುವದರಿಂದ ದಿಕ್ಕು ಬದಲಿಸಿ, ಸುತ್ತುವರಿದು, ಬಳಸಿ ಬಳಸಿ ಮುಂದುವರಿಯಬೇಕಾಗಿತ್ತು. ಹಳದಿ, ಬೂದು, ಕೇಸರಿ ಬಣ್ಣದ ಶಿಖರಗಳು ಶಿವನಿಗೆ ಮಾಡಿದ ಅಭಿಷೇಕದ ನೀರಿನಂತೆ, ಈ ಗುಡ್ಡಗಳಿಗೆ ಸ್ನಾನ

ಮೂಡಿಸಿದ ಮಳೆ-ನೀರು ಟಪಲ್, ಟಪಲ್ ಆಗಿ ಕೆಳಗೆ ಜಾರಿ ಬಿದ್ದು ಮಡುವಿನಲ್ಲಿ ಸಂಚಯವಾಗಿದೆ. ಶತಮಾನಗಳಿಂದ ಹರಿದು ಬಂದ ನೀರಹನಿಗಳಿಂದ ಬೆಟ್ಟಗಳ ಸ್ವರೂಪವೇ ಬದಲಾಗಿದೆ. ಏರು ಹತ್ತುವ ಕಿರಿ-ರೇಲುಬಂಡಿಯಂತೆ ಏದುತ್ತ, ಉಸಿರುಬಿಡುತ್ತ ಬೋಳು-ಬೆಟ್ಟವನ್ನು ಹಿಂದೆ ಹಾಕಿದ ನಂತರ ಎದುರಿಗೆ ದಟ್ಟ ಕಾಡು ಬಂದಿತು. ವಿಪರೀತ ಮಳೆಯಿಂದಾಗಿ ಮರಗಳ ಬೊಡ್ಡೆಯ ಮೇಲೂ ಹಚ್ಚ-ಹಸರು-ಹಾವಸೆ ಬೆಳೆದದ್ದರಿಂದ ಎಲ್ಲಿ ನೋಡಿದರೂ ಶುಭಸೂಚಕ ಹಸಿರು ಬಣ್ಣ ತಾಂಡವವಾಡುತ್ತಿತ್ತು! ಅಲ್ಲಲ್ಲಿ ಬಿದಿರು-ಮೆಳೆಗಳು ಪ್ರೊದೆಪ್ರೊದೆಯಾಗಿ ಹಿಂಡುಕಟ್ಟಿಕೊಂಡು, ಯುವ್ವನೆಯರಂತೆ, ಪಿಸಿಪಿಸಿ ಮಾತನಾಡುತ್ತ, ಕೇಕೆ ಹಾಕುತ್ತ ನಿಂತಿದ್ದವು. ಹಕ್ಕಿಗಳು ಸ್ವಚ್ಛಂದವಾಗಿ ಹಾರಾಡುತ್ತ, ಹಾಡುತ್ತ ಸುಖಲೋಲುಪವಾಗಿದ್ದವು. ಉಮಾಮಹೇಶ್ವರರು ಮಧುಚಂದ್ರಕ್ಕಾಗಿ ಈ ಕಾಡಿಗೆ ಬಂದಿದ್ದಾರೆ? ಎಂದುಕೊಂಡು ಹುಚ್ಚುಮನಸ್ಸು ಅವರು ಬಿಟ್ಟಿರಬಹುದಾದ ಯಾವುದಾದರೂ ಕುರುಹುಗಳಿಗಾಗಿ ಹುಡುಕಿತು. ಏನೂ ಸಿಗಲಿಲ್ಲ !

ಧೂಪ್‌ಗಡ, ಸಮುದ್ರ-ಪಾತಳಿಯಿಂದ ೪೪೨೯ ಅಡಿ ಎತ್ತರದಲ್ಲಿದೆ. ಅಲ್ಲಿ ನಿಂತು ಸುತ್ತಾ ನೋಡಿದರೆ, ಶಿವನೇ ಕೈಲಾಸದಲ್ಲಿ ನಿಂತು ಭೂಲೋಕವನ್ನು ಅವಲೋಕನ ಮಾಡಿದ ಅನುಭವವಾಗುತ್ತದೆ. ಆಳವಾದ ತಗ್ಗಿನಲ್ಲಿ ನೂರಾರು ಪರ್ವತ-ಶಿಖರಗಳು ತಲೆಯೆತ್ತಿ ನಿಂತಿವೆ. ಏತಕ್ಕೆ? ಒಂದರ ಮೇಲೆ ಬಿಸಿಲಾದರೆ, ಇನ್ನೊಂದರ ಮೇಲೆ ನೆರಳು ಮಾಡಲು; ಒಂದರ ಮೇಲೆ ಬಿಳಿಮೋಡವಾದರೆ ಇನ್ನೊಂದರ ಮೇಲೆ ಕರಿಮೋಡ. ಒಂದರ ಮೇಲೆ ದಟ್ಟವಾಗಿ ಬೆಳೆದ ಕಾಡಿನಿಂದಾಗಿ ಅದಕ್ಕೆ ಹಸಿರುಬಣ್ಣ ಬಂದರೆ, ಬಂಡೆಗಲ್ಲುಗಳಿದ್ದಲ್ಲಿ ಏನೂ ಬೆಳೆಯದ್ದರಿಂದ ಅವು ತಮ್ಮ ನೈಜರೂಪ ಪ್ರದರ್ಶಿಸುತ್ತ ನಿಂತಿವೆ. ಮಳೆ-ಬಿಸಿಲು ಮೋಡಗಳಿಂದಾಗಿ ಅಲ್ಲಿಯ ಸೌಂದರ್ಯ ಪ್ರತಿನಿಮಿಷವೂ ಬದಲಾಗುತ್ತಿದ್ದುದರಿಂದ ನಾವು ನಿಸರ್ಗದ ರಜತ-ಪರದೆಯ ಮೇಲೆ ಚಲಚ್ಚಿತ್ರವನ್ನೇ ನೋಡುತ್ತೇವೆಯೋ ಎಂಬ ಭ್ರಾಂತಿಯಾಗುತ್ತದೆ. ದೂರದಲ್ಲಿ ತುಂಬಿಹರಿಯುವ ನದಿ, ಅದರಾಚೆ ಹಚ್ಚಹಸಿರಿನ ಬಯಲು-ಪ್ರದೇಶ. ಇವನ್ನೆಲ್ಲ ನೋಡಿದಷ್ಟೂ ಕಡಿಮೆ, ಚಿತ್ರ ತೆಗೆದಷ್ಟೂ ಕಡಿಮೆ. ಇಷ್ಟಾದರೂ ಇಂತಹ ಅವರ್ಣನೀಯ ಸೌಂದರ್ಯರಾಶಿಯನ್ನು ಕ್ಯಾಮರಾದಲ್ಲಿ ಸೆರೆಹಿಡಿಯಲು, ಚಿತ್ರದಲ್ಲಿ ಮೂಡಿಸಲು, ಲೇಖನಿಯಿಂದ ವರ್ಣಿಸಲು ಎಂದಾದರೂ ಸಾಧ್ಯವೇ? ಎಂಬ ಸಂದೇಹ

ಬಾರದಿರಲಿಲ್ಲ. ಹಣ್ಣು, ಹೂವು, ಹಕ್ಕಿಗಳ ಸೌಂದರ್ಯ, ಕುಂಚ, ಕ್ಯಾಮರಾ, ಲೇಖನಿಗಳಿಗೆ ಅತೀತವಾದವು. ಅಂತರವಿಷ್ಟೇ: ಇವುಗಳ ಸೌಂದರ್ಯ ಕ್ಷಣಿಕ, ನಶಿಸಿಹೋಗುವಂತಹದು. ಆದರೆ ನಿಸರ್ಗದ ಈ ಸೌಂದರ್ಯ-ಸಿರಿ ಶತಶತ ಮಾನಗಳಿಂದ ಸ್ಥಿರವಾಗಿ ನಿಂತುದು. ಮಾನವನು ಎಷ್ಟೋ ಸಲ ಅರಿಯದೇ, ಕೆಲವು ಸಲ ಬುದ್ಧ್ಯಾಪೂರ್ವಕವಾಗಿ ನಿಸರ್ಗದ ವ್ಯಾಪಾರದೊಡನೆ ಸೆಣಸಾಟ ಮಾಡಿ ಅದನ್ನು ಹಾಳುಗೆಡವಲು ಕಾರಣನಾಗಿದ್ದಾನೆ. ಒಂದಿನಿಂದ ಮರುಗಿದ್ದಾನೆ.

ಸೃಷ್ಟಿಸೌಂದರ್ಯದ ಸುರಾಪಾನದಿಂದ ಮತ್ತರಾಗಿದ್ದು ಮೆಲ್ಲಮೆಲ್ಲನೆ ಇಹಲೋಕಕ್ಕೆ ಇಳಿದಾಗ ಹೊಟ್ಟೆ ತಾಳಹಾಕಲಾರಂಭಿಸಿತು. ಅಲ್ಲದೇ ಇಷ್ಟು ಹೊತ್ತಿನಲ್ಲಿ ಒಂದು ನರಹುಳವೂ ಅತ್ತ ಸುಳಿಯದ್ದರಿಂದ, ಆ ಏಕಾಂತ-ಸ್ಥಳದಲ್ಲಿ ಹೆಚ್ಚು ಸಮಯ ಕಳೆಯುವದು ಕ್ಷೇಮಕರವಲ್ಲವೆಂದು ಅನಿಸಿದಾಗಲೇ ಗಗನ-ಮಂಡಲದಲ್ಲಿ ಒಂದೊಂದಾಗಿ ಕಾರ್ಮೋಡಗಳು ಸರಿದು ಬಂದು ಸಂಚಯವಾಗ ಹತ್ತಿದವು. ಬರಲಿರುವ ಭಾರೀ ಮಳೆಯಲ್ಲಿ ಸಿಕ್ಕಿಕೊಂಡು ಒದ್ದಾಡುವದಕ್ಕಿಂತ ಎಲ್ಲಿಯಾದರೂ ಆಶ್ರಯಪಡೆಯುವದು ಕ್ಷೇಮಕರವೆನಿಸಿದ್ದರಿಂದ ಜಾರುವ ರಸ್ತೆಯಲ್ಲಿ ಇನ್ನಷ್ಟು ಜೋರು ಕಾಲುಹಾಕುತ್ತ ಬಂದಿದ್ದರಿಂದ ಎಷ್ಟು ಬೇಗ ಬಾರಾವರಿ ಮುಟ್ಟುವಂತಾಯಿತೆಂದು ಆಶ್ಚರ್ಯವಾಯಿತು. ಅಲ್ಲಿಯ ಪುಟ್ಟ ಚಹಾದಂಗಡಿಯಲ್ಲಿ ಪಕೋಡಾ ತಿಂದು ಚಹಾ ಕುಡಿಯುತ್ತಿದ್ದಂತೆ, ಮಳೆ ರಾಯನು ತನ್ನ ಪ್ರಕೋಪವನ್ನೆಲ್ಲ ಭೂಮಿಯ ಮೇಲೆ ತೋಡಿಕೊಂಡ.

ಅಂಗಡಿಕಾರನಿಗೆ ಮಾಡಲು ಬೇರೆ ಕೆಲಸವಿಲ್ಲದ್ದರಿಂದ ತಾನಾಗಿ ಹರಟೆಗೆ ಎಳೆದ. ಪಚಮಡಿ, ಪಿಪರಿಯಾದ ಮುಂದೆ ಹೋಗದವನಿಗೆ ಬೆಂಗಳೂರು ಎಲ್ಲಿದೆ ಎಂದು ತಿಳಿಯುವದು ಹೇಗೆ ಸಾಧ್ಯ? ಬಾಲಾಜಿಯ ಪೂಜೆಗಾಗಿ ಬಂದಿರಬೇಕು ಎಂದುಕೊಂಡ. ಅಲ್ಲವೆಂದಾಗ ವ್ಯಾಪಾರಕ್ಕಾಗಿ ಬಂದಿರಾ? ಎಂದು ವಿಚಾರಿಸಿದ. ಕೇವಲ ಸೃಷ್ಟಿಸೌಂದರ್ಯ ಸವಿಯುವ ಸಲುವಾಗಿಯೇ ಇಷ್ಟೆಲ್ಲ ಖರ್ಚು ಮಾಡಿ, ಶ್ರಮವಹಿಸಿ ಬರುವವರಿರುತ್ತಾರೆಂದು ಅವನ ವ್ಯಾಪಾರಿ-ಬುದ್ಧಿಗೆ ಹೇಗೆ ಹೊಳೆಯಬೇಕು? ಮಳೆಯ ಆರ್ಭಟ ಕಡಿಮೆಯಾದ ಕೆಲ ಸಮಯದ ನಂತರ ಖಾಸಗಿ-ವಾಹನವೊಂದು ಭಕ್ತರನ್ನು ಕರೆದೊಯ್ಯಲು ಬಂದದ್ದರಿಂದ ಅನುಕೂಲವೇ ಆಯಿತು. ಸಾಧ್ಯವಾದರೆ ಶರೀರದ ಕಸುವು ಕುಗ್ಗುವ ಮುಂಚೆ ಇನ್ನೊಮ್ಮೆ ಬಂದು ಕಾಣುವೆನೆಂದು ಧೂಪಗಡದ ಪರ್ವತರಾಜನಲ್ಲಿ ಬೇಡಿ

ಕೊಂಡು ಅಲ್ಲಿಂದ ವಾಹನವೇರಿದೆ. ಅಲ್ಲಿಯ ಆ ರಮಣೀಯ ಪರ್ವತ-ಶಿಖರಗಳು ಈಗಲೂ ಆಗಾಗ ಕನಸಿನಲ್ಲಿ ಕಾಣಿಸಿಕೊಂಡು ಕೈಬೀಸಿ ಕರೆಯುತ್ತಲೇ ಇರುತ್ತವೆ.

## ೧೨. ವಾಕಣಕರರೊಂದಿಗೆ

ಭೋಪಾಲಕ್ಕೆ ಹೋದ ಡಾ। ವಾಕಣಕರರು ಹಿಂದಿರುಗಿದ ನಂತರವೇ ಮುಂದಿನ ಕಾರ್ಯಕ್ರಮ ನಿರ್ಧಾರವಾಗಬೇಕಾದ್ದರಿಂದ ಎಲ್ಲರೂ ಅವರ ಬರವನ್ನೇ ಎದುರುನೋಡುತ್ತಿದ್ದರು. ಕತ್ತಲಾಗುತ್ತ ಬಂದರೂ ಅವರು ಬಾರದ್ದರಿಂದ ಆತಂಕದಿಂದ ಕಾಯಲಾರಂಭಿಸಿದರು. ಮಂಗಗಳು ಒಮ್ಮಿಂದೊಮ್ಮೆ ಒಂದು ಮರದಿಂದ ಇನ್ನೊಂದಕ್ಕೆ ಜಿಗಿಯಲಾರಂಭಿಸಿದವು. ಚಿಲ್‌ಚಿಲ್ ಹಕ್ಕಿ ಗಂಡಾಂತರ ಸೂಚಕವಾಗಿ ಟಿರೀಕ್, ಟಿರೀಕ್ ಎಂದು ಚೀರುತ್ತ ಹಾರಲಾರಂಭಿಸಿದ್ದರಿಂದ ಸರ್ ಬರುತ್ತಿದ್ದಾರೆ ಎಂದು ಎಲ್ಲರೂ ಗೆಲುವಾದರು. ನೋಡಿದರೇ ಗೌರವ ಹುಟ್ಟಬೇಕಾದಂತಹ ವ್ಯಕ್ತಿತ್ವವುಳ್ಳ ವಾಕಣಕರರು ಜಾತ್ರೆಗೆ ಹೋಗಿ ಬಂದ ಹಳ್ಳಿಯ ಹಿರಿಯನಂತೆ, ಗೃಹಕೃತ್ಯಕ್ಕೆ ಬೇಕಾಗುವ ಎಲ್ಲ ಸಾಮಾನುಗಳೊಂದಿಗೆ ಹಿಂದಿರುಗಿದ್ದರು. ಆ ಅರಣ್ಯದಲ್ಲಿ ಹಣಕ್ಕಿಂತ ತಿಂಡಿ-ತಿನಸುಗಳೇ ಹೆಚ್ಚು ಆಕರ್ಷಣೀಯವೆಂದು ಹೇಳಬೇಕೇ?

ಅವರು ಬಟ್ಟೆಗಳನ್ನು ಬದಲಿಸುತ್ತಿದ್ದಂತೆ, ತೋಳು, ಮೊಣಕಾಲು ರಕ್ತಮಯವಾಗಲು ಕಾರಣವನ್ನು ವಿವರಿಸಿದರು: ಅವರು ಸಾಯಕಲ್ ಮೇಲೆ ಬರುತ್ತಿದ್ದಾಗ ಆದಿವಾಸಿಯೊಬ್ಬ ನಡೆಸುತ್ತಿದ್ದ ಚಕ್ಕಡಿಯ ಎತ್ತುಗಳು ಅವನ ನಿಯಂತ್ರಣದಲ್ಲಿ ಬಾರದ್ದರಿಂದ ಅವನಿಗೆ ಸ್ಥಳ ಬಿಡಲು ತಾವು ರಸ್ತೆಯ ಅಂಚಿಗೆ ಹೋದಾಗ ಇಳಕಲಿನಲ್ಲಿ ಬಿದ್ದರು. ಬಲಗೈ ಉಳುಕಿದ್ದರಿಂದ ಗಿರಿರಾಜನು ಯಾವುದೋ ಎಣ್ಣೆ ಹಚ್ಚಿ ತೀಡುತ್ತಿದ್ದ. ಆಗ ಗುರು-ಶಿಷ್ಯರು, ಪಿತಾ-ಪುತ್ರರಂತೆ

ಕಂಡರು. ಜೊತೆಯಲ್ಲಿ ಇರಲೆಂದು ತಂದ ಆಯುಡೆಕ್ಸ ಕೊಟ್ಟಾಗ, ಅದರಿಂದ ಎಷ್ಟೋ ನೆಮ್ಮದಿಯಾಯಿತೆಂದರು. ಬಂದ ಹೊಸಬನ ಬಗ್ಗೆ ಯಾವದೇ ಪ್ರಶ್ನೆ ಕೇಳುವದರ ಬದಲಾಗಿ, ತಾವಿಲ್ಲದ್ದರಿಂದ ಆದ ತೊಂದರೆ ಮನ್ನಿಸೆಂದರು. ಭೇಟಿಯ ದಿನಾಂಕ, ವೇಳೆ ನಿರ್ಧರಿಸಿ ಪರಿಚಯ-ಪತ್ರದೊಂದಿಗೆ ಬಂದಿದ್ದರೆ ಅವರ ದರ್ಶನಲಾಭ ಸಿಗುತ್ತಿತ್ತೋ ಇಲ್ಲವೋ! ಅನಿರೀಕ್ಷಿತವಾಗಿ ಅವರ ಭೀಮವೇಟಕಾದ ವಾಸ್ತವ್ಯ ಮುಕ್ತಾಯಗೊಳ್ಳುವ ಮೊದಲೇ ಕೆಲಕಾಲ ಕಳೆಯುವ ಅವಕಾಶ ಸಿಕ್ಕಿದ್ದರಿಂದ ಪುಲಕಿತನಾದೆ.

ಅವರ ಆರೋಗ್ಯ, ಉತ್ಸಾಹ, ಚಟುವಟಿಕೆ ಮತ್ತು ನಗುಮುಖಗಳು ಅವರು ಆರು ದಶಕ ದಾಟಿದ ಹಿರಿಯರು ಎಂದು ವಾಸ್ತವಿಕವಾಗಿ ನೋಡುವವರ ಕಣ್ಣಿಗೆ ಮಣ್ಣೆರಚುವಂತೆ ಇದ್ದವು. ಪ್ರವಾಸದಿಂದ ದಣಿದಿದ್ದರೂ, ಊಟದ ನಂತರ ಬೆಳದಿಂಗಳಿನಲ್ಲಿ ತಿರುಗಾಡಿಕೊಂಡು ಬರೋಣವೆಂದು ಹೊರಟರು. ಭೀಮವೇಟಕಾವನ್ನು ಆಕಸ್ಮಿಕವಾಗಿ ಕಂಡುಹಿಡಿದ ಬಗೆ ಹೇಳಿದರು: "೧೯೫೭ರಲ್ಲಿ ಭೋಪಾಲದಿಂದ ಇಟಾರಸಿಗೆ ಹೊರಟಿದ್ದೆ. ಬಿಸೇಕಾದ ಹತ್ತಿರವಿದ್ದ ಎತ್ತರದ ಗುಡ್ಡಗಳು ತಮ್ಮಲ್ಲಿ ಗತೇತಿಹಾಸವನ್ನು ಹುದುಗಿಸಿಕೊಂಡು ತೆಪ್ಪಗೆ ಆಮಂತ್ರಿಸುವಂತೆ ಕುಳಿತಿದ್ದ ಭಾಸವಾಗಿ ಮುಂದಿನ ಸ್ಟೇಶನ್ನಿನಲ್ಲೇ ಇಳಿದೆ. ಇಲ್ಲಿಗೆ ನಡೆದುಬಂದಾಗ, ನೋಡಿದ ಮೊದಲ ಶಿಲಾಶ್ರಯದಲ್ಲಿಯೇ ಚಿತ್ರಗಳು ಕಂಡಾಗ ಅಪಾರ-ನಿಧಿಯೊಂದನ್ನು ಕಂಡ ಆನಂದ ನನ್ನದಾಗಿತ್ತು. ಈಗ ನಾವು ತುಳಿಯುತ್ತಿರುವ ನೆಲ ಐದುಲಕ್ಷ ವರ್ಷಗಳ ಇತಿಹಾಸವನ್ನು ಹೊತ್ತುನಿಂತಿದೆ." ಎದುರಿಗೆ ಒಂದು ದಿನ್ನೆಯ ಮೇಲೆ ನಿಂತು, "ಇದು ಬೌದ್ಧ-ಸ್ತೂಪ, ಇಂತಹವು ಇಲ್ಲಿ ಎರಡಿವೆ. ಅಶೋಕನು ಈ ಮಾರ್ಗವಾಗಿ ಬಂದಿರಲು ಸಾಕು. ಓ ಅಲ್ಲಿ ಎತ್ತರದ ಕಟ್ಟು ಕಾಣಿಸುತ್ತದಲ್ಲ? ಭೋಜರಾಜನು ಹಾಕಿಸಿದ ಅಣೆಕಟ್ಟಿನ ಅವಶೇಷ. ಆ ಕಾಲದಲ್ಲಿ ಜಗತ್ತಿನಲ್ಲಿಯೇ ಅತಿದೊಡ್ಡದಾದ ಸರೋವರವನ್ನು ಕಟ್ಟಿಸಿದ ಶ್ರೇಯಸ್ಸು ಅವನಿಗೆ ಸಲ್ಲುತ್ತದೆ. ಭೋಪಾಲದಿಂದ ನಾವೆಗಳು ಭೀಮವೇಟಕಾ ತನಕ ಬಂದುಹೋಗುತ್ತಿದ್ದವು." ಅಂದರು

ತಾವು ಮೊದಲಬಾರಿಗೆ ಬಂದಾಗ ಇದ್ದ ಈ ಸ್ಥಳದ ರಮ್ಯತೆಯನ್ನು ವಿವರಿಸುತ್ತ "ಸಾಗವಾನಿ, ಮಹುವಾ ಮುಂತಾದ ಬೆಲೆ ಬಾಳುವ ಮರಗಳನ್ನು ಹೊತ್ತ ಕಾಡಾಗಿತ್ತು. ಮಟಮಟ ಮಧ್ಯಾಹ್ನದಲ್ಲೂ ಓಡಾಡಲು ಧೈರ್ಯ

ವಾಗದಷ್ಟು ಕಾಡುಪ್ರಾಣಿಗಳಿಂದ ತುಂಬಿತುಳುಕುತ್ತಿತ್ತು. ಇಂದಿಗೂ ಅಪರೂಪದ ಪಶು-ಪಕ್ಷಿಗಳ ಬೀಡು ಇಲ್ಲಿದೆ. ನಾಲ್ಕಾರು ದಿನಗಳ ಹಿಂದೆ ಚಿರ್ಚೆ, ಕ್ಯಾಂಪಿನ ಪಕ್ಕದಲ್ಲೇ ಸುಳಿದಾಡುತ್ತಿದ್ದುದರಿಂದ ಬೆನ್ನಟ್ಟಿ ಓಡಿಸಬೇಕಾಯಿತು. ಆಗೊಮ್ಮೆ ಈಗೊಮ್ಮೆ ಹುಲಿರಾಯ ದರ್ಶನ ಕೊಡುವ. ನೀಲಗಾಯ, ಚಿಗರೆ, ನವಿಲು, ಕಾಡುಹಂದಿ, ಕೋತಿಗಳಿರುವಂತೆ, ದೊಡ್ಡ ನಾಗರಹಾವು, ಅತಿ ಉದ್ದ ಹೆಬ್ಬಾವು, ಇನ್ನಿತರ ವಿಷಕಾರಿ ಹಾವುಗಳಿವೆ. ಕಾಡಿನ ಸಂರಕ್ಷಣೆಯ ಬಗ್ಗೆ ಸರಕಾರವಾಗಲಿ ಸ್ಥಾನೀಯ ಜನರಾಗಲಿ ಯಾವ ಮುನ್ನೆಚ್ಚರಿಕೆಯನ್ನೂ ವಹಿಸದ್ದರಿಂದ ಬೆಲೆ ಬಾಳುವ ಸಾಗವಾನಿ-ಕಟ್ಟಿಗೆಯನ್ನು ಉರುವಲಿಗೆ ಬಳಸುತ್ತಾರೆ. ಕಳೆದ ಒಂದು ವಾರದಿಂದ ಕಾಡ್ಗಿಚ್ಚು ಹತ್ತಿಕೊಂಡು ಹಗಲಿರುಳೂ ಧಗಧಗ ಉರಿದು ಕೋಟ್ಯಾನು ರೂಪಾಯಿ ಬೆಲೆಬಾಳುವ ಕಟ್ಟಿಗೆಯನ್ನು ಸುಡುತ್ತಿದ್ದರೂ ಅದರ ಬಗ್ಗೆ ಯಾರೂ ಏನೂ ಕಾಳಜಿ ಮಾಡಿಲ್ಲ" ಎಂದು ಬೇಸರಪಟ್ಟುಕೊಂಡರು. ಕಾಡ್ಗಿಚ್ಚು ನೋಡಲಿಕ್ಕೆ ಎತ್ತರದ ದಿನ್ನೆಯೊಂದನ್ನು ಏರಿದಾಗ, ನಮ್ಮ ವಾಸಸ್ಥಾನದಿಂದ ಕೇವಲ ಅರ್ಧಮೈಲು ದೂರದಲ್ಲಿಯೇ ಜ್ವಾಲೆಯನ್ನು ಕಾರುತ್ತ ತನಗೆ ಅಡ್ಡಗಟ್ಟುವ ಎಲ್ಲವನ್ನೂ ಧ್ವಂಸಿಸುತ್ತ ಕಾಡ್ಗಿಚ್ಚು ರೌದ್ರ ವಾಗಿ ಬೆಳಗುತ್ತಿತ್ತು. ಶಿಬಿರದ ಸುತ್ತ ನಾಲ್ಕಾರು ಮೈಲು ದೂರದ ವರೆಗೆ ಹರಡಿಕೊಂಡರೂ ನಮ್ಮ ನಿವಾಸಸ್ಥಾನಕ್ಕೆ ಆತಂಕವಿಲ್ಲವೇ ಎಂದಾಗ ಗಾಳಿ ವಿರುದ್ಧ ದಿಕ್ಕಿನಲ್ಲಿ ಬೀಸುತ್ತದೆ, ನಮ್ಮತ್ತ ಬರಲಾರದೆಂದರು.

"ಈ ಸ್ಥಳ ಭಾರತದ ಇತಿಹಾಸದಲ್ಲಷ್ಟೇ ಅಲ್ಲ ಮಾನವನ ವಿಕಾಸದ ದೃಷ್ಟಿ ಯಿಂದಲೂ ಅತಿಮಹತ್ವದ್ದು. ಹೀಗಾಗಿ ಇದರ ಸಂರಕ್ಷಣೆಗೆ ಒಂದು ದೊಡ್ಡ ಯೋಜನೆಯನ್ನು ತಯಾರಿಸಿ ರಾಜ್ಯದ ಅರಣ್ಯ-ಮಂತ್ರಿಗೆ ಒಪ್ಪಿಸಿದ್ದೇನೆ. ಅವರು ಅದರಲ್ಲಿ ಉತ್ಸಾಹ ತೋರಿದ್ದಾರೆ. ಇದನ್ನು ರಾಷ್ಟ್ರೀಯ ಪಾರ್ಕ ಮಾಡಿ, ವೈಜ್ಞಾನಿಕವಾಗಿ ಗಿಡಮರಗಳನ್ನು ಬೆಳೆಸುವದು ಒಡೆದುಹೋದ ಆಣೆಕಟ್ಟನ್ನು ದುರಸ್ತಿ ಮಾಡಿ ತಿರುಗಿ ಸರೋವರವನ್ನು ಮಾಡಿದರೆ, ಪ್ರವಾಸಿ-ಸ್ಥಳದೊಂದಿಗೆ ಶೈಕ್ಷಣಿಕ, ಸಂಶೋಧನೆಯ ತಾಣವೂ ಇದಾಗಲು ಸಾಧ್ಯವಾಗುವದು" ಎಂದು ತಮ್ಮ ಆಶಾಗೋಪುರವನ್ನು ವಿವರಿಸಿದರು.* ಊಟ ಸಿದ್ಧವಾಗಿರಬೇಕೆಂದು

* ಜೂನ ೧೯೭೭ರ ಮಧ್ಯಪ್ರದೇಶ ವಿಧಾನಸಭೆಯ ಚುನಾವಣೆಯಲ್ಲಿ ಕಾಂಗ್ರೆಸ ಸರಕಾರ ಬಿದ್ದುಹೋಗಿದ್ದರಿಂದ ಅವರೊಂದಿಗೆ ಈ ಬೃಹತ್‌ಯೋಜನೆಯೂ ಮಣ್ಣುಗೂಡಿರಲು ಸಾಕು!

ಹಿಂತಿರುಗಿ ಬಂದರೆ, ರಾಮಾವತಾರನು(ಆಳು)ಇನ್ನೂ ಚಪಾತಿಗಳನ್ನು ಮಾಡುವದರಲ್ಲೇ ಇದ್ದ. ಅವನಿಗೆ ಬೇಗಬೇಗ ಲಟ್ಟಿಸಲು ಹೇಳಿ ತಾವೇ ಚಪಾತಿ ಹುರಿಯಲಾರಂಭಿಸಿದರು. ನಂತರ ಬೇಳೆಗೆ ಹೇಗೆ ಒಗ್ಗರಣೆ ಕೊಡುವದೆಂದು ವಿವರಿಸುತ್ತ ತಾವೇ ಮಾಡಿ ತೋರಿಸಿದರು. ಅಂತರ್ರಾಷ್ಟ್ರೀಯ ಖ್ಯಾತಿಯ ಚಿತ್ರವೇತ್ತರು ನಳಪಾಕವನ್ನೂ ಮಾಡಬಲ್ಲರೆಂದು ನೋಡಿ ತಮಾಷೆಯೆನಿಸಿತು.

ಊಟವಾದ ಮೇಲೆ ತಂಗಾಳಿಗೆ ಮೈಯೊಡ್ಡಿ ಕಟಿಯಾದ ಮೇಲೆ ವಿರಮಿಸುತ್ತಿದ್ದಾಗ, ವಾಕಣಕರರು ತಮ್ಮ ಜೀವನದ ಏರಿಳಿತಗಳನ್ನು ಸ್ಮರಿಸಿಕೊಂಡರು. "ಸ್ನಾತಕೋತ್ತರ ಪದವೀಧರನಾಗಿದ್ದರೂ ನೌಕರಿಯೊಂದು ದೊರಕದ್ದರಿಂದ ಉಜ್ಜಯಿನಿಯಲ್ಲೇ ಭಾರತೀಯ-ಕಲಾಕೇಂದ್ರವನ್ನು ನಡೆಸಲಾರಂಭಿಸಿದೆ. ಕೆಲ ಕಾಲದ ನಂತರ ಮುಂಬಯಿಯ ವಸ್ತುಸಂಗ್ರಹಾಲಯದಲ್ಲಿ ಒಳ್ಳೆಯ ನೌಕರಿ ಸಿಕ್ಕರೂ, ಮುದಿ ತಂದೆ-ತಾಯಿ, ಕಲಾಶಾಲೆಯ ವಿದ್ಯಾರ್ಥಿಗಳನ್ನು ಬಿಟ್ಟು ಹೋಗುವ ಮನಸ್ಸಾಗದೇ ಮಾಧವ-ಕಾಲೇಜಿನಲ್ಲಿ ಗೌರವ-ವೇತನದ ಮೇಲೆ ದುಡಿಯಲು ಒಪ್ಪಿಕೊಂಡೆ. ರಾಮಾಯಣದ ಕಾಲ ಮತ್ತು ಸ್ಥಳಗಳ ಬಗ್ಗೆ ಹೊಸ ಬಿರುಗಾಳಿಯನ್ನೇ ಎಬ್ಬಿಸಿದ ಡಾ। ಸಂಕಾಲಿಯರು ನನ್ನ ಗುರುಗಳಾದರೂ ನಮ್ಮಿಬ್ಬರ ದೃಷ್ಟಿಕೋನಗಳು ಬೇರೆಯಾಗಿವೆ. 'ರಾಮಚಂದ್ರನು ಮಧ್ಯಭಾರತ ಬಿಟ್ಟು ದಕ್ಷಿಣಕ್ಕೆ ಹೋಗಲೇ ಇಲ್ಲ. ಅವನು ಸಮುದ್ರವೆಂದು ಭ್ರಮಿಸಿದ್ದು ನಿಜಕ್ಕೂ ಇಂದ್ರಾವತಿ ನದಿ' ಎಂದು ಸಾಧಿಸಿದ ಅವರು ರಾಮಾಯಣದಲ್ಲಿ ಬರುವ ಸಮುದ್ರದ ವರ್ಣನೆಯನ್ನು ಓದಿದಂತೆ ಇಲ್ಲ. ಆ ನೀರು ಲವಣದಿಂದ ಕೂಡಿತ್ತು ಎಂದಿದ್ದರಿಂದ ಅದು ಉಪ್ಪುನೀರಲ್ಲವೆ? ಎಂದು ಕಂಠೋಕ್ತವಾದ ರಾಮಾಯಣದ ಶ್ಲೋಕಗಳನ್ನು ಹೇಳಿದರು.

"ಮುಂದೆ ಶಿಲಾಶ್ರಯಗಳಲ್ಲಿಯ ಚಿತ್ರಗಳನ್ನು ಕುರಿತು ಡಾಕ್ಟರೇಟ್ ಡಿಗ್ರಿಗಾಗಿ ಪ್ರಬಂಧ ಒಂದನ್ನು ಬರೆದಾಗ, ಹಿರಿಯ ಸಲಹಾಕಾರರು ನನ್ನ ಸಂಶೋಧನೆಗೆ ಸಹಾಯಮಾಡಿದ ರಾಷ್ಟ್ರೀಯ ಸ್ವಯಂಸೇವಕರ ಬಳಗಕ್ಕೆ ಅರ್ಪಿಸಿದ ಕೃತಜ್ಞತೆಗಳ ಉಲ್ಲೇಖವನ್ನು ತೆಗೆದುಹಾಕಲು ಸೂಚಿಸಿದರು. 'ಡಾಕ್ಟರ್ ಪದವಿಯಿಂದ ನನಗೇನಾಗಬೇಕಾಗಿಲ್ಲ. ಆದರೆ ಅವರಿಗೆ ಸಲ್ಲಬೇಕಾದ ಕೃತಜ್ಞತೆಗಳನ್ನು ವ್ಯಕ್ತಮಾಡದೇ ಇರಲಾರೆ' ಎಂದು ಹೇಳಿದ್ದರಿಂದ ತೆಪ್ಪಗಾದರು. ಈ ವಿಷಯದಲ್ಲಿ ನನ್ನ ಸಂಶೋಧನೆಗೆ ಮನ್ನಣೆಯೆಂದೋ ಏನೋ!

ಕೇಂದ್ರಸರಕಾರ ೧೯೭೨ರಲ್ಲಿ ಅವರಿಗೆ 'ಪದ್ಮಶ್ರೀ' ಬಿರುದನ್ನು ದಯಪಾಲಿಸಿತು. ರಾಷ್ಟ್ರೀಯ-ಸ್ವಯಂಸೇವಕ-ಸಂಘದೊಡನೆ ಇದ್ದ ನನ್ನ ನಂಟು ಸರಕಾರಕ್ಕೆ ತಿಳಿದಿದೆಯಾದರೂ ಈ ತುರ್ತುಪರಿಸ್ಥಿತಿಯಲ್ಲಿ ಸೆರೆಮನೆಗೆ ಕಳಿಸದೇ ಇದ್ದದ್ದೇ ಆಶ್ಚರ್ಯ. ಬಹುಶಃ ಅದು ಅವರು ಪ್ರದಾನಮಾಡಿದ 'ಪದ್ಮಶ್ರೀ' ಪದವಿಗೇ ಅವಮಾನಕಾರಿಯಾದೀತೆಂದು ಹಾಗೇ ಬಿಟ್ಟಿರಬೇಕು" ಎಂದು ಆಕಳಿಸಲಾರಂಭಿಸಿದರು. ತನಗೆ ನಿದ್ರೆಬಂದಿದೆ, ಮನಸ್ಸಿದ್ದರೆ ಇವುಗಳನ್ನು ನೋಡಬಹುದೆಂದು ಕೆಲ ಸಾಮಗ್ರಿಗಳನ್ನು ಕೊಟ್ಟು ತಾವು ಫ್ರಾನ್ಸಿನಿಂದ ತಂದ ತೀರ ಹಗುರವಾದ ಕಿರಿದಾದ ಕ್ಯಾಂಪ್-ಮಂಚದ ಮೇಲೆ ಹೋಗಿ ಮಲಗಿದರು.

ಬೆಳಕುಹರಿಯುವಾಗಲೇ ಎದ್ದು ಮೈಮುರಿಯುತ್ತ ಶುಭದಿನ ಕೋರಿದರು. ಪ್ರಾತರ್ವಿಧಿ ಮುಗಿಸಿದ ನಂತರ ತಿರುಗಾಟಕ್ಕೆ ಹೋಗೋಣವೆಂದರು. ದಾರಿಯಲ್ಲಿ "ಇಲ್ಲಿಗೆ ಬಂದ ಹೆಚ್ಚಿನ ಕೆಲಸ ಮುಗಿದಿದೆ. ಆದ್ದರಿಂದ ವಿರಾಮವಿದೆ. ಕೆಲಸದ ದಿನಗಳಲ್ಲಿ ಇನ್ನೂ ಕತ್ತಲಿರಬೇಕಾದರೇ ಎದ್ದು ಇಪ್ಪತ್ತು-ಮೂವತ್ತು ಕಿಲೋಮೀಟರ್ ನಡೆದು ದಿನವಿಡೀ ಅಲ್ಲಿ ಕೆಲಸಮಾಡಿ ಹಿಂತಿರುಗಬೇಕಾದರೆ ರಾತ್ರಿಯಾಗಿಹೋಗುತ್ತಿತ್ತು. ಇಲ್ಲಿಗೆ ಬಂದು ಕಳೆದ ಎರಡು ತಿಂಗಳಿನಿಂದಲೂ ಇದೇ ಪರಿಪಾಠ. ಇನ್ನೂ ಕೆಲಕಾಲ ಇಲ್ಲಿರುವ ಮನಸ್ಸಿತ್ತು. ಆದರೆ ಸರಕಾರ ಮಂಜೂರಮಾಡಿದ ಹಣವೆಲ್ಲ ಖರ್ಚಾಗಿಹೋಯಿತು. ನನ್ನ ಸೇವೆ ತೆಗೆದುಕೊಳ್ಳುವ ಸಂಸ್ಥೆ ಮೂರುಸಾವಿರ ಮತ್ತು ರಾಜ್ಯಸರಕಾರ ಏಳುಸಾವಿರ ಹೀಗೆ ವರ್ಷಕ್ಕೆ ಹತ್ತುಸಾವಿರ ರೂಪಾಯಿ ನನ್ನ ಸಂಶೋಧನೆಗೆ ಕೊಡುವದೆಂದು ನಿರ್ಧಾರವಾಗಿದ್ದರೂ, ಸಂಸ್ಥೆಯವರು ಕಾಸನ್ನೂ ಕೊಡಲಿಲ್ಲ; ಸರಕಾರದ ಹಣ ಸಕಾಲದಲ್ಲಿ ಬರಲಿಲ್ಲ. ಹೀಗಾಗಿ ಹಣದ ಅಭಾವದಿಂದ ಬೇಗನೇ ಹಿಂದಿರುಗುವ ಪ್ರಸಂಗ ಬಂದಿದೆ. ಇಲ್ಲಿಯವರಿಗೆ ಸಲ್ಲಬೇಕಾದ ಹಣದ ವ್ಯವಸ್ಥೆ ಮಾಡಲು ಮತ್ತು ಲಾರಿಯನ್ನು ಗೊತ್ತುಮಾಡಲು ಭೋಪಾಲಕ್ಕೆ ಹೋಗಿದ್ದೆ. ನಮಾಜ ಮಾಡಲು ಹೋಗಿ ಮಸೀದೆಯನ್ನೆ ಕೊರಳಿಗೆ ಹಾಕಿಕೊಂಡಂತಾಗಿದೆ! ವಿಧಾನಸೌಧದಲ್ಲಿಯ ಅನೇಕ ಅಧಿಕಾರಿಗಳಿಗೆ ಮತ್ತು ಅರ್ವಾಚೀನ ಸಂಶೋಧನಾಲಯದ ಕೆಲವರಿಗೆ ಇಲ್ಲಿ ವಿಹಾರಕ್ಕೆ ಬರಬೇಕೆಂದು ಹಲವು ದಿನಗಳಿಂದ ಆಸೆಯಂತೆ. ಶೀಘ್ರದಲ್ಲಿಯೇ ನಾವು ಹಿಂದಿರುಗಲಿದ್ದವರಿಂದ ಇಂದು ಭೋಪಾಲದಿಂದ ನಾಲ್ಕು ಜೀಪಗಳಲ್ಲಿ ಸಂಸಾರಸಮೇತರಾಗಿ ಅಧಿಕಾರಿಗಳು ಸರಕಾರೀ ಕೆಲಸದ ಮೇಲೆ

ಇಲ್ಲಿಗೆ ಬರುವವರಿದ್ದಾರೆ. ಅವರ ತಲೆಬುರುಡೆಗಳಲ್ಲಿ ಎಷ್ಟು ಮಿದುಳಿದೆ ಎಂದು ನೀವೇ ಪರೀಕ್ಷಿಸಿ ನೋಡುವಿರಂತೆ. ಸದ್ಯ ಅಧಿಕಾರದಲ್ಲಿರುವವರಿಂದ ನಾನೇನೂ ಹೇಳುವದಿಲ್ಲ' ಎಂದು ಸುಮ್ಮನಾದರು.

ಕೆಲ ನಿಮಿಷಗಳ ನಂತರ, "ನಿನ್ನೆ ರಾತ್ರಿ ಕೊಟ್ಟ ಸಾಮಾನುಗಳನ್ನು ನೋಡಿದಿರಾ?" ಎಂದು ವಿಚಾರಿಸಿದರು. "ಶಿಲಾಚಿತ್ರಕಲೆಯ ಮೇಲಿನ ಜ್ಞಾನಕೋಶದ ಮಾದರಿಗಳಾಗಿವೆ" ಎಂದಾಗ ಗೆಲುವಾದರು. ಮೊಟ್ಟಮೊದಲು ದಕ್ಷಿಣ ಫ್ರಾನ್ಸದಲ್ಲಿ ಆನಂತರ ಅಮೇರಿಕೆಯಲ್ಲಿ ಇಂತಹ ಚಿತ್ರಗಳನ್ನು ಕಂಡುಹಿಡಿದರೂ ಭಾರತದಲ್ಲಿರುವಷ್ಟು ಇತಿಹಾಸ-ಪ್ರಾಚೀನ-ಚಿತ್ರಸಂಪತ್ತು ಬೇರೆ ಯಾವ ದೇಶದಲ್ಲೂ ಇಲ್ಲವೆಂದು ಅಭಿಮಾನದಿಂದ ಹೇಳಿದರು. ಇಲ್ಲಿಯ ನನ್ನ ಅನುಭವಗಳನ್ನು ಅರಿತ ಅಮೇರಿಕನ್ ವಿದ್ವಾಂಸರು ತಮ್ಮಲ್ಲಿ ಆಮಂತ್ರಿಸಿ ಹೆಚ್ಚಿನ ಅಭ್ಯಾಸಕ್ಕೆ ಅನುವುಮಾಡಿಕೊಟ್ಟರು. ಅದರ ಪರಿಣಾಮವಾಗಿ, ತಾವು ಅಮೇರಿಕನ್ ತಜ್ಞರೊಬ್ಬರೊಂದಿಗೆ ಸೇರಿ ಬರೆದ ಪುಸ್ತಕ ಆ ದೇಶದಲ್ಲಿಯೇ ಪ್ರಕಟಿಸುವದು ಸಾಧ್ಯವಾಯಿತು. ಆ ಸಹಲೇಖಕರು ರೋಗಗ್ರಸ್ತರಾಗಿ ಬದುಕುವ ಆಸೆಯಿಟ್ಟುಕೊಂಡಿಲ್ಲವಾದ್ದರಿಂದ ಗ್ರಂಥದ ಅಧಿಕಾರದ ಎಲ್ಲ ಕಾಗದ-ಪತ್ರಗಳನ್ನು ತಮಗೇ ಕಳಿಸಿ ಅವುಗಳನ್ನು ಚೆನ್ನಾಗಿ ಕಾದಿರಿಸಲು ಹೇಳಿದ್ದಾರೆಂದು ಅವರ ಒಳ್ಳೆಯತನವನ್ನು ಕೊಂಡಾಡಿದರು. ಶಿಲಾಶ್ರಯಗಳ ವರ್ಣಚಿತ್ರಗಳ ಸಂಗ್ರಹ ಜಗತ್ತಿನ ಬೇರೆ ಯಾರಲ್ಲಿಯೂ ಇಲ್ಲ. ಹೀಗಾಗಿ ಈ ಬಗ್ಗೆ ಇತರ ಎಷ್ಟೋ ದೇಶದವರು ತಜ್ಞ-ಅಭಿಪ್ರಾಯ ಬೇಕಾದರೆ ತನ್ನ ಆಶ್ರಯ ಪಡೆಯುತ್ತಾರೆ" ಎಂದು ತುಂಟ ನಗೆಯೊಂದಿಗೆ ಹೇಳಿದರು.

ಚಿತ್ರಸಂಗ್ರಹವನ್ನು ವಿವರಿಸುತ್ತ ತಾವು ಪ್ರಥಮತಃ ಕಂಡುಹಿಡಿದ ಶಿಲಾಶ್ರಯವನ್ನು ತೋರಿಸಿದರು. "ರಂಗಮಂಟಪ"ವೆಂದು ನಾಮಕರಣ ಮಾಡಿದ ಇನ್ನೊಂದು ಗುಹೆಯನ್ನೂ, ಪ್ರಾಣಿಗಳ ಚಿತ್ರಗಳೇ ವಿಪುಲವಾಗಿರುವದಕ್ಕೆ ಮೃಗಾಲಯವೆಂದೂ, ಆದಿಮಾನವರೆಲ್ಲ ಒಟ್ಟಾಗಿ ಕಲೆತು ನೃತ್ಯ-ವಿನೋದಾವಳಿಗಳನ್ನು ಮಾಡಿರಬಹುದಾದ ಗುಹೆಗೆ ಸಭಾಗೃಹವೆಂದೂ ಕರೆಯುತ್ತೇವೆಂದು ತಿಳಿಸಿದರು. ಆದಮಗಡ ಗುಹಾಲಯಗಳ ಮೇಲೆ ಶಾಲಾ-ಕಾಲೇಜ ವಿದ್ಯಾರ್ಥಿಗಳು ತಮ್ಮ ಹೆಸರುಗಳನ್ನು, ನೆಚ್ಚಿನ ತಾರೆಯರ ಚಿತ್ರಗಳನ್ನು ತೆಗೆದಿರುವದು ಶೋಚನೀಯವೆಂದಾಗ, "ಅವರಾದರೋ ಈ ಕಲೆಯ ಮಹತ್ವ

ವನ್ನು ಅರಿಯದವರು, ಅಜ್ಞಾನಿಗಳು, ಆದರೆ ತಜ್ಞರೆನಿಸಿಕೊಂಡವರು ಏನು ಮಾಡಿದ್ದಾರೆ? ಮಾಡುತ್ತಿದ್ದಾರೆ? ಕೇಳಿ:" ಎಂದು ಕೆಲ ಅನುಭವಗಳನ್ನು ಹೇಳಿದರು.

ಸರಕಾರಿ ಕಾಲೇಜಗಳಲ್ಲಿ, ವಿಶ್ವವಿದ್ಯಾಲಯಗಳಲ್ಲಿ ಪ್ರಾಚೀನ ಇತಿಹಾಸದ ಪ್ರಾಧ್ಯಾಪಕರೆಂದು ಮೆರೆಯುವವರಿಗೆ ಯಾವ ಹೆಚ್ಚಿನ ಸಂಶೋಧನೆಯೂ ಸಾಧಿಸಿಲ್ಲವೆಂದರೆ ನಾಚಿಕೆಗೇಡಲ್ಲವೇ? ಅಂತೆಯೇ ಯಾವಾಗಲೂ ಏನಾದರೂ ಕಸರತ್ತು ಮಾಡುತ್ತಲೇ ಇರುತ್ತಾರೆ. ಇದಾಗಲೇ ಕಂಡುಹಿಡಿದ ಶಿಲಾತ್ರಯಗಳ ಮೇಲೆ ತಮ್ಮ ಹೆಸರು ಹಾಕುವದು; ಅದು ಹುಡುಕಿದ ಶ್ರೇಯಸ್ಸು ತಮಗೇ ಸೇರಿದ್ದು ಎನ್ನುವದು; ಭೀಮವಾಟಿಕಾದಲ್ಲಿ ಕಂಡುಹಿಡಿದದ್ದನ್ನು ಬೇರೊಂದು ಪಕ್ಷಿಯ ಹೆಸರಿನಲ್ಲಿ ಪ್ರಕಟಿಸುವದು; ಒಂದೂ ವೈಜ್ಞಾನಿಕ-ಪದ್ಧತಿ ಅನುಸರಿಸದೇ ಮನಸ್ಸಿಗೆ ಬಂದಂತೆ ನಂಬರುಗಳನ್ನು ಹಾಕುವದು; ನಾವು ಕಂಡು ಹಿಡಿದು ಅಗೆಯಬೇಕು ಎಂದು ನಿರ್ಧರಿಸಿದ ಶಿಲಾಶ್ರಯಗಳನ್ನು ಪೈಪೋಟಿ ನಡೆಸಿ ಸರಕಾರದ ಅಪ್ಪಣೆ ಪಡೆದು ಮೊದಲೇ ಅಗೆಯಲಾರಂಭಿಸಿ ಸಿಕ್ಕಹಾಗೆ ಅಗೆದು ಮಹತ್ವದ ವಸ್ತು-ಪಡಪೆಗಳನ್ನು ಮಣ್ಣುಪಾಲುಮಾಡುವದು ಮುಂತಾದವನ್ನು ಮಾಡುತ್ತಾರೆ. ಇಷ್ಟು ಸಾಲದ್ದಕ್ಕೆ, ನಮ್ಮ ಸಂಶೋಧನೆ ಕುರಿತು, ಬೇರೆಯವರಿಂದ ಅಪಹಾಸ್ಯಮಾಡಿಸಿ ಪತ್ರಿಕೆಗಳಲ್ಲಿ ಪ್ರಕಟಿಸಲು ಹಿಂದೆ ಸರಿಯುವದಿಲ್ಲ. ಒಮ್ಮೆ ಗುತ್ತಿಗೆದಾರನು ರಸ್ತೆಯ ಮೇಲೆ ಹರಡಿಸಿದ ಮಣ್ಣಿನಲ್ಲಿ ಆದಿಮಾನವನ ಆಯುಧಗಳು, ಕೆಲವು ಅಲಂಕಾರ-ಸಾಮಗ್ರಿಗಳು ಕಂಡುಬಂದದ್ದರಿಂದ ಮಣ್ಣು ಅಗೆಯುವ ಸ್ಥಳಕ್ಕೆ ಧಾವಿಸಿದೆವು. ವಿವರವಾದ ಅಭ್ಯಾಸ ಕೈಕೊಂಡಾಗ, ಅಂದಿನ ಹಲವಾರು ಆಭರಣಗಳು ದೊರೆತವಲ್ಲದೇ, ಜೊತೆಗೆ ಅಲಂಕೃತ ಎಲುವುಗಳೂ ಶಹಾಮೃಗದ ಮೊಟ್ಟೆ-ಕವಚದ ತುಂಡುಗಳೂ ಸಿಕ್ಕವು. ಇದೊಂದು ಅಪೂರ್ವ ಸಂಶೋಧನೆಯಾಗಿತ್ತು. ಇದಕ್ಕೂ ಪೂರ್ವದಲ್ಲಿ ಆಫ್ರಿಕೆಯಲ್ಲಿ ಮಾತ್ರ ಶಹಾಮೃಗದ ಮೊಟ್ಟೆಯ ಕವಚದ ಆಭರಣವನ್ನು ಬಳಸುತ್ತಿದ್ದರೆಂದು ನಂಬಿದ್ದರಿಂದ ಈ ಶೋಧ, ಭಾರತದಲ್ಲಿಯೂ ಶಹಾಮೃಗ ಇದ್ದವು, ಅಲ್ಲದೇ ಅಂದೂ ಭಾರತದೊಂದಿಗೆ ಆಫ್ರಿಕದ ಸಂಪರ್ಕ ಇತ್ತು ಎಂದು ಸಿದ್ಧಮಾಡುತ್ತದೆ. ಇದನ್ನು ಪ್ರಕಟಿಸಿದಾಗ ಸಹೋದ್ಯೋಗಿಗಳಿಗೆ ಹೊಟ್ಟೆ ಕಡಿಯಲು ಪ್ರಾರಂಭವಾಯಿತು. ರಾಜ್ಯದ ಹಿಂದೀ, ಇಂಗ್ಲೀಷ್ ವೃತ್ತ-ಪತ್ರಿಕೆ

ಗಳಲ್ಲಿ ಟೀಕೆ-ಟಿಪ್ಪಣಿ, ಬೇರೆ ಬೇರೆ ಹೆಸರುಗಳಲ್ಲಿ ಪ್ರಕಟವಾಗಲು ಪ್ರಾರಂಭ ವಾಯಿತು. ಹಿಂದಿ ಭೂಗರ್ಭ-ಶಾಸ್ತ್ರಜ್ಞನೊಬ್ಬನ ಹೆಸರಿನಿಂದ ಪ್ರಕಟವಾದ ಒಂದು ಪತ್ರದಲ್ಲಿ 'ವಾಕಣಕರರು ಸೂಚಿಸಿದ ಸ್ಥಳದ ಮಣ್ಣಿನ ವಿವರವಾದ ಅಭ್ಯಾಸಮಾಡಲಾಗಿ, ಅದು ಅತಿ ಆಮ್ಲಜನಕ-ಪ್ರಕಾರದಿಂದ ಕೂಡಿದ್ದು. ಅಲ್ಲಿ ಯಾವುದೇ ಮೊಟ್ಟೆ-ಕವಚಗಳು ಇಷ್ಟು ವರ್ಷ ಸುರಕ್ಷಿತವಾಗಿ ಇರಲು ಸಾಧ್ಯವೇ ಇಲ್ಲ' ಎಂದು ಅಧಿಕಾರಯುತ ಅಭಿಪ್ರಾಯವನ್ನು ವ್ಯಕ್ತಪಡಿಸಲಾಗಿತ್ತು. ಆ ಪತ್ರಕ್ಕೆ ಪತ್ರಿಕೆಯ ಮುಖಾಂತರ ಉತ್ತರ ಕೊಡುವ ಬದಲಾಗಿ ಖಾಸಗಿ ಪತ್ರ ಬರೆದು ಭೂಗರ್ಭ-ಶಾಸ್ತ್ರಜ್ಞನ ಅಭಿಪ್ರಾಯದ ಪ್ರಾಯೋಗಿಕ ತಳಹದಿಯನ್ನು ಕೂಲಂಕಷವಾಗಿ ವಿವರಿಸುವಂತೆ ಕೇಳಿಕೊಂಡೆ. ಅದಕ್ಕೆ ಪ್ರತ್ಯುತ್ತರವಾಗಿ ನನಗೆ ಸಿಕ್ಕ ಸಾಮುಗ್ರಿಯನ್ನೆಲ್ಲ ಕಳಿಸಿದರೆ, ತನ್ನ ತಜ್ಞ ಅಭಿಪ್ರಾಯ ಕೊಡುವೆನೆಂದು ಪತ್ರ ಬಂದಿತು. ಅದಕ್ಕೆ ಮತ್ತೆ ಪತ್ರ ಬರೆದು, 'ಇದಕ್ಕೂ ಮೊದಲು ಸಿಕ್ಕ ಶಹಾಮೃಗದ ಮೊಟ್ಟೆಯ ಕವಚದ ಆಭರಣವನ್ನು ಪರೀಕ್ಷಿಸುವ ಅವಕಾಶ ನನಗೆ ಸಿಕ್ಕಿದೆ. ನನಗೆ ಬೇರೆ ತಜ್ಞ-ಅಭಿಪ್ರಾಯ ಬೇಕಿಲ್ಲ. ಆದರೆ ನಿಮ್ಮ ಅನುಮಾನವನ್ನು ದೂರಪಡಿಸುವ ಇಚ್ಛೆ ಇದ್ದರೆ, ನಮ್ಮಲ್ಲೇ ಬಂದು ಸಿಕ್ಕ ವಸ್ತುಗಳನ್ನು ಪರಿಶೀಲಿಸಬಹುದು' ಎಂದು ತಿಳಿಸಿದೆ. ಅದಕ್ಕೆ ಉತ್ತರವೇ ಬರಲಿಲ್ಲ. ಅವರು ನಿಜವಾದ ಸ್ಥಳಕ್ಕೆ ಎಂದಾದರೂ ಭೆಟ್ಟಿಕೊಟ್ಟಿರುವರೇ ಎಂದು ಅನುಮಾನ ಬಂದು ಕೂಲಂಕಷ ತನಿಖೆ ನಡೆಸಿದಾಗ ಕೊನೆಗೆ ಅವರು ತಾವು ಮನೆಯಲ್ಲೇ ಕುಳಿತು ಮಾಡಿದ ಪತ್ರವ್ಯವಹಾರಕ್ಕೆ ಕ್ಷಮೆಯಾಚಿಸಿದರು !

"ಒಂದು ಹೇಳುವಾಗ ಇನ್ನೊಂದು ನೆನಪಾಗುತ್ತದೆ, ಭೀಮಬೇಟಕಾದ ಸಂಶೋಧನೆ ಜಗತ್ತಿನ ನಾಲ್ಕೂ ಮೂಲೆಗೆ ತಲುಪಿದರೂ ನೆರೆಯೂರಿನ ಈ ಭೋಪಾಲಕ್ಕೆ ತಲುಪಲಿಲ್ಲ. ಇಲ್ಲಿಯ ಶಿಲಾಶ್ರಯ-ಚಿತ್ರಗಳ ಮೇಲೆ ಆಧಾರಿತ ದೂರದರ್ಶನ-ಕಾರ್ಯಕ್ರಮವೊಂದನ್ನು ತಯಾರಿಸಲು ಜಪಾನದ ಒಂದು ತಂಡ ಭಾರತಕ್ಕೆ ಬಂದು ವಿದೇಶಿ-ವ್ಯವಹಾರಗಳ ಆಫೀಸಿನಲ್ಲಿ ವಿಚಾರಿಸಿತು. ಭೀಮಬೇಟಕಾ ಬಗ್ಗೆ ತಮಗೇನೂ ತಿಳಿಯದೆಂದೂ, ಮಧ್ಯಪ್ರದೇಶ ಸರಕಾರಕ್ಕೆ ಗೊತ್ತಿರಬೇಕೆಂದೂ ಭೋಪಾಲಕ್ಕೆ ಅವರನ್ನು ಕಳಿಸಿತು. ಅವರಾದರೋ ಈ ಹೆಸರನ್ನು ಮೊದಲಬಾರಿಗೆ ಕೇಳುತ್ತಿದ್ದೇವೆಂದು ಒಪ್ಪಿಕೊಂಡರಂತೆ. ನಂತರ ಫೋನ್ ಮೂಲಕ ನನ್ನೊಡನೆ ಮಾತನಾಡಿ ಬಂದ ಜಪಾನಿಯರಿಗೆ ಭೀಮಬೇಟಕಾ

ಬಗ್ಗೆ ಮಾರ್ಗದರ್ಶನಮಾಡುವದು ಸಾಧ್ಯವೇ ಎಂದು ವಿಚಾರಿಸಿದರು. ಇನ್ನೊಂದು ಸಲ, ಅಮೇರಿಕನ್ ವಿದ್ಯಾರ್ಥಿನಿಯೋರ್ವಳು ಇಲ್ಲಿಯ ಕಲೆಯನ್ನು ಅಭ್ಯಸಿಸಲು ಬಂದಿದ್ದಳು. ನಮ್ಮ ಸರಕಾರ ಒಂದು ವರ್ಷದ ಸಂಶೋಧನೆಗೆ ದೊಡ್ಡಮನಸ್ಸುಮಾಡಿ ಏಳು ಸಾವಿರ ರೂಪಾಯಿ ಕೊಟ್ಟರೆ, ಆಕೆಯು ಬರಹೋಗುವ ಇನ್ನಿತರ ಖರ್ಚು ಬಿಟ್ಟು ಕೇವಲ ಎರಡು ವಾರಗಳ ಶಿಷ್ಯ-ವೇತನವೆಂದು ಒಂದುವರೆ ಲಕ್ಷ ರೂಪಾಯಿ ತಂದಿದ್ದಳು ! ನಾವೆಲ್ಲ ಹಸಿದ ಹೊಟ್ಟೆಯಿಂದ ಸಂಶೋಧನೆ ಮಾಡಬೇಕೆಂದು ಸರಕಾರ ನೀರಿಕ್ಷಿಸುತ್ತಿರಬೇಕು" ಎಂದು ಕಟುವಾಗಿ ಟೀಕಿಸಿದರು.

ವಾಸಸ್ಥಾನಕ್ಕೆ ಮರಳಿದ ನಂತರ ವಜ್ರ-ವೈಡೂರ್ಯಗಳಂತೆ ಭದ್ರವಾಗಿಟ್ಟ ತಮ್ಮ ಸಂಶೋಧನಾ-ಸಾಮಗ್ರಿಗಳನ್ನು ತೋರಿಸುತ್ತಿದ್ದಾಗ ಜೀಪುಗಳ ಸಪ್ಪಳಾಗಿ ಭೋಪಾಳದ ಮಂಡಳಿ ಬಂದಿತೆಂದು ಸ್ವಾಗತಿಸಲು ಹೊರಟರು. ಕಾಲುನಡಗೆಯೂ ಕಷ್ಟವಾದ ಇಕ್ಕಟ್ಟಾದ ಗುಡ್ಡ, ಕಾಡಿನ ರಸ್ತೆಯ ಮೇಲೆ ಜೀಪನ್ನು ಓಡಿಸುವ ಅಧಿಕಾರಿಗಳು ಸರಕಾರಿ ವಾಹನದ ಯೋಗಕ್ಷೇಮ ಎಷ್ಟು ತೆಗೆದುಕೊಳ್ಳುತ್ತಾರೆಂದು ತಿಳಿಯುವಂತಿತ್ತು. ನಾಲ್ಕು ಜೀಪಿನ ತುಂಬ ಅಧಿಕಾರಿಗಳು ಮತ್ತು ಅವರ ಕುಟುಂಬದವರು. ಅವರ ಮಾತು-ನಗೆಗಳಿಂದ ಆ ಕಾಡಿಗೆ ಜೀವಕಳೆ ಬಂದಿತು. ಅವರಿಗೆ ಚಹಾ-ತಿಂಡಿಗಳ ಆತಿಥ್ಯವಾದ ನಂತರ ಹೆಂಗಳೆಯರು ಮತ್ತು ಕೆಲವು ಹೆಣ್ಣು-ಗಂಡಸರು ತಮ್ಮಿಂದ ಕಾಲು-ನಡಿಗೆಯಲ್ಲಿ ಗುಡ್ಡವೇರಲು ಅಸಾಧ್ಯವೆಂದಾಗ, ಜೀಪುಗಳು ಹೋಗಬಹುದಾದ ಶಿಲಾಶ್ರಯಗಳನ್ನಷ್ಟೇ ನೋಡುವದೆಂದು ನಿರ್ಧಾರವಾಯಿತು. ಅಜಂತಾ, ಎಲ್ಲೋರಗಳಂತಹ ಭವ್ಯ ಭಿತ್ತಿ-ಚಿತ್ರಗಳನ್ನು ನೀರಿಕ್ಷಿಸಿ ಬಂದವರಿಗೆ ನಿರಾಶೆಯಾಗಿರಬೇಕು. ಹೆಂಗಳೆಯರು ಇಲ್ಲೂ ಅಡಿಗೆ-ಆಭರಣಗಳ ಹರಟೆಯಲ್ಲಿ ಮಗ್ನರಾದರೆ ಪುರುಷರು ವಿರಾಮವಾಗಿ ಬೀಡಿ, ಸಿಗರೇಟು, ಸೇದಿ ಸುರುಳಿ ಸುರುಳಿಯಾಗಿ ಹೊಗೆ ಬಿಡಲಾರಂಭಿಸಿದರು. ಆಳುಗಳು ಹೊತ್ತು ತಂದ ನೀರು ಕುಡಿದು, ಜೀಪಿನಲ್ಲಿ ಹಿಂದಿರುಗಿದಾಗ ಅವರೆಲ್ಲ ಸುಸ್ತಾಗಿಬಿಟ್ಟರು. ನವವಿವಾಹಿತ ಬಂಗಾಲಿ ತರುಣನೊಬ್ಬ ಪ್ರತಿಯೊಂದು ಗುಹಾಲಯದ ಮುಂದೆಯೂ ಪತ್ನಿಯನ್ನು ನಿಲ್ಲಿಸಿ, ಕಣ್ಣು ಕುಕ್ಕುವ ಬಿಸಿಲಿನಲ್ಲಿ ಫ್ಲ್ಯಾಶ್ ಬಳಸಿ ಛಾಯಾಚಿತ್ರ ತೆಗೆದ ! ಆ ಕಾಡಿನಲ್ಲಿಯೂ ಬಂದವರ ಗೌರವಾರ್ಥ ಚಪಾತಿ, ಪಲ್ಯ, ಭಾತ್,

ಬೇಳೆ-ಚಟ್ನಿ, ಶಿರಾಗಳನ್ನು ಮಾಡಿಸಲಾಗಿತ್ತು. ಅವರೂ ಬರುವಾಗ ಬುತ್ತಿಯನ್ನು ಕಟ್ಟಿಕೊಂಡು ಬಂದಿದ್ದರಿಂದ ಒಂದೇ ಊಟದಲ್ಲಿ ಹಲವಾರು ಬಗೆಯ ಅಡಿಗೆಯ ರುಚಿ ನೋಡುವಂತಾಯಿತು. ಭಾಟಿಯಾಬಾಬು ಹಲವು ದಿನಗಳ ಹಸಿವನ್ನು ಒಂದೇ ಊಟದಲ್ಲಿ ನೀಗಿಸಿಕೊಂಡ. ಅವರೆಲ್ಲ ಭೋಜಪುರವನ್ನು ನೋಡಿಕೊಂಡು ಭೋಪಾಲಕ್ಕೆ ಹಿಂತಿರುಗಬೇಕಾದ್ದರಿಂದ ಬಂದಷ್ಟೇ ಅವಸರವಾಗಿ ಹಿಂತಿರುಗಿದರು.

ವಾಕಣಕರ, ಗಿರಿರಾಜರಿಗೆ ಹೊರಡುವ ಸಿದ್ಧತೆ ಮಾಡಬೇಕಾದ್ದರಿಂದ, ನನ್ನಷ್ಟಕ್ಕೆ, ಸಂಶೋಧಕನಂತೆ ಆ ಪ್ರದೇಶವಲ್ಲಿಯ ಶಿಲಾಶ್ರಯಗಳನ್ನು ನೋಡಿ ಅಭ್ಯಸಿಸುವದು ಹೆಚ್ಚು ಸಂತೋಷ ಕೊಟ್ಟಿತು. ಈ ಮೊದಲೇ ಬಂದಿದ್ದರೆ ಇನ್ನಷ್ಟು ವಿಷಯಗಳನ್ನು ತಿಳಿದುಕೊಳ್ಳಬಹುದಾಗಿತ್ತು ಎಂದು ಅನಿಸದೇ ಹೋಗಲಿಲ್ಲ. ಬಾಹ್ಯಜಗತ್ತಿನ ಸಂಪರ್ಕವಿಲ್ಲದೇ ಅಲ್ಲಿದ್ದು ಎರಡು ದಿನದ ಅರಣ್ಯ-ವಾಸ್ತವ್ಯದ, ಅಪೂರ್ವ ಸಂಶೋಧನಾ ಜಗತ್ತಿನ ಸಾನ್ನಿಧ್ಯದ ಲಾಭದಿಂದ ಹೆಚ್ಚಿನ ಸಂತೋಷವಾಯಿತು. ಕೇವಲ ಅಧಿಕಾರ, ಮತ್ತು ಆರ್ಥಿಕ ಲಾಭಕ್ಕಾಗಿ ದುಡಿಯುವ ಈ ಜಗತ್ತಿನಲ್ಲಿ ವಾಕಣಕರರಂಥವರೂ ಇದ್ದಾರೆಂದು ತುಂಬ ನೆಮ್ಮದಿಯೆನಿಸಿತು. ಹೊರಟುನಿಂತಾಗ ಈ ಹಿರಿಯರು ಬಹಳ ದೂರದ ತನಕ ನಡೆದು ಬಂದು ಬೀಳ್ಕೊಟ್ಟಾಗ ಏನೋ ಕಳೆದುಕೊಂಡಂತೆ ಭಾಸವಾಯಿತು.

# ೧೩. ಖಜುರಾಹೋ ಕಾಮಿನಿಯರು

'ಎಂದಾದರೊಮ್ಮೆ ಕೈಯಲ್ಲಿ ಸಾಕಷ್ಟು ಹಣ ಕೂಡಿದರೆ, ಭಾರತಕ್ಕೆ ಭೇಟಿಕೊಡಬೇಕು. ತಾಜ್, ಖಜುರಾಹೋ ನೋಡಬೇಕು ಎಂಬ ಕನಸು ಇಟ್ಟುಕೊಂಡಿದ್ದೇವೆ' ಎಂಬುದು ನಮ್ಮ ದೇಶದ ಬಗ್ಗೆ ಸ್ವಲ್ಪವಾದರೂ ತಿಳಿದುಕೊಂಡ ಅಮೇರಿಕನ್ ಕುಟುಂಬಗಳು ಇಟ್ಟುಕೊಂಡ ಧ್ಯೇಯ. ನಮ್ಮ ದೇಶದವರೂ ಒಂದಿಲ್ಲೊಂದು ದಿನ ಖಜುರಾಹೋಗೆ ಭೇಟಿಕೊಡಬೇಕೆಂದು ಕನವರಿಸುತ್ತಿರುತ್ತಾರೆ. ಈ ಆಸೆಗೆ ಕಾರಣ, ಚಂದೇಲ ಅರಸರು ಹತ್ತು ಮತ್ತು ಹನ್ನೊಂದನೇ ಶತಮಾನಗಳಲ್ಲಿ ಕಟ್ಟಿಸಿದ ಭವ್ಯ ದೇವಾಲಯಗಳನ್ನು ನೋಡಬೇಕೆಂದಲ್ಲ; ಅವುಗಳ ಅತ್ಯುನ್ನತ ಮಟ್ಟದ ವಾಸ್ತುಶಿಲ್ಪ ಪರಿಕಿಸಬೇಕೆಂದೂ ಅಲ್ಲ; ಇಲ್ಲವೇ ಮಳೆ, ಗಾಳಿ, ಬಿಸಿಲುಗಳನ್ನೆದುರಿಸಿ ಚಿರಯೌವನೆಯರಾಗಿ ನಿಂತ ಸುರಸುಂದರಿಯರನ್ನು ಭೇಟಿಮಾಡಲೆಂದಲ್ಲ. ಆ ದೇವಾಲಯಗಳ ಬಗ್ಗೆ ಏನೂ ಅರಿಯದವರೂ ಕೂಡ, ಅವುಗಳನ್ನು ಅಲಂಕರಿಸಿರುವ ಪ್ರಣಯಿಗಳ, ಕಾಮಕ್ರೀಡೆಯಲ್ಲಿ ತೊಡಗಿರುವ ಮಿಥುನ-ಶಿಲ್ಪಗಳ ಬಗ್ಗೆ ಕೇಳಿದ್ದಾರೆ. ನೋಡಬೇಕೆಂದು ಹಂಬಲಿಸಿದ್ದಾರೆ. ಕಾಮ-ಸೂತ್ರ ಹಲವಾರು ರೂಪಗಳಲ್ಲಿ ಭಾಷಾಂತರವಾಗಿ ಅದರಲ್ಲಿ ಇಂತಹ ಶಿಲ್ಪಗಳ ಸೇರ್ಪಡೆಯಾದ ನಂತರ ಖಜುರಾಹೋ ಜಗತ್ಪ್ರಸಿದ್ಧವಾಗಿದೆ. ಅಂತೆಯೇ ತಾಜಮಹಲು ನೋಡಿದ ವಿದೇಶೀಯರು ಖಜುರಾಹೋ ನೋಡದೇ ಮರಳುವದಿಲ್ಲ.

ತಾಜಮಹಲದ ಬಗ್ಗೆ ಎಷ್ಟೆಲ್ಲ ಕೇಳಿ, ಓದಿ ಅಲ್ಲಿ ಹೋದಾಗ, ಆಗುವ ಅನುಭವವೇ ತೀರ ಬೇರೆಯಾದಂತೆ, ಖಜುರಾಹೋದ ಕಾಮಶಿಲ್ಪಗಳನ್ನು ನೋಡಿದಾಗ ತೆರೆತೆರೆಯಾಗಿ ಮೇಲೆದ್ದ ವಿಚಾರಲಹರಿ ನಿರೀಕ್ಷಿಸಿದ್ದಕ್ಕಿಂತ ತೀರ ಭಿನ್ನವಾಗಿತ್ತು. ಒಂದೇ ವಸ್ತು ಜನರ ಅಭಿರುಚಿಯ ಪ್ರಕಾರ ಭಿನ್ನಭಿನ್ನವಾಗಿ ಕಾಣಬಹುದು. ಸುಂದರಿಯೋರ್ವಳು ರಾಮಕೃಷ್ಣಪರಮಹಂಸರಿಗೆ ತಾಯಿಯಾಗಿ ಕಂಡರೆ, ಸ್ವಾಮಿ ವಿವೇಕಾನಂದರಿಗೆ ಸಹೋದರಿಯಾಗಿ ಕಾಣಬಹುದು. ವೃದ್ಧನಿಗೆ ಮಗಳಂತೆ ಕಂಡರೆ, ರಸಿಕನಿಗೆ ಪ್ರೇಯಸಿಯಂತೆ ತೋರಬಹುದು.

ಆದ್ದರಿಂದ ಈ ಶಿಲ್ಪ-ಕಾಮಿನಿಯರು ಎಲ್ಲರಿಗೂ ಒಂದೇ ರೀತಿಯಾಗಿ ಕಾಣುತ್ತಾರೆಂದು ಯಾರೂ ಪ್ರತಿಪಾದಿಸಲಾರರು. ಅಂತೆಯೇ ಹೆಚ್ಚಿನ ಪ್ರವಾಸಿಗಳ ಅಭಿಪ್ರಾಯ, ಅನಿಸಿಕೆಗಳನ್ನು ಅರಿತುಕೊಳ್ಳುವ ಉದ್ದೇಶದಿಂದ, ಇಂಥ ಶಿಲ್ಪಗಳು ಅಧಿಕವಿರುವ ಆಯಕಟ್ಟಿನ ಸ್ಥಳ ಆಯ್ದು, ಕ್ಯಾಮರಾ ಛಾಯಾ-ಚಿತ್ರಗಳನ್ನು ತೆಗೆಯುತ್ತಿದ್ದಂತೆ ಕಿವಿಗಳು ಅವರ ಮಾತುಗಳನ್ನು ಆಲಿಸಿದವು. ಮಧ್ಯವಯಸ್ಸಿನ ತಮಿಳು-ದಂಪತಿಗಳು, ತಮ್ಮ ನಾಡಿನಲ್ಲಿ ಇದಕ್ಕಿಂತ ಸುಂದರವಾದ ಶಿಲ್ಪಗಳು ಅಸಂಖ್ಯಾತವಿರುವಾಗ, ಕೇವಲ ಜಾಹೀರಾತುಗಳನ್ನು ಓದಿ, ಹಣದ ಹೊಳೆ ಹರಿಸಿ, ಖಜುರಾಹೋಕ್ಕೆ ಧಾವಿಸಿದ್ದಕ್ಕಾಗಿ ಮರುಗುತ್ತ, ನೀರನ್ನು ಕುಡಿದು ನೆರಳಿನಲ್ಲಿ ವಿಶ್ರಾಂತಿಪಡೆದರು. ಯುವಕ ಬಂಗಾಲಿ ಜೋಡಿಯೊಂದು, "ದೇವಾಲಯವೆಲ್ಲ ಮಿಥುನ-ಶಿಲ್ಪಗಳಿಂದ ತುಂಬಿತುಳುಕುತ್ತಿದೆ ಎಂಬ ಭಾವನೆ ಬರುವಂತೆ, ಇದ್ದ ಕೆಲವೇ ಶಿಲ್ಪಗಳನ್ನು ಹತ್ತಿರದಿಂದ ಚಿತ್ರಿಸಿ, ಭಿನ್ನವಾಗಿ ಪ್ರಕಟಿಸುವದರಿಂದ ಅದೆಂತಹ ತಪ್ಪುಕಲ್ಪನೆ ಬರುತ್ತದಲ್ಲವೆ?" ಎಂಬ ಕೊನೆಯ ನಿರ್ಧಾರಕ್ಕೆ ಬಂದು ಕಾಲುಗಳನ್ನು ಹೆಚ್ಚು ದಣಿಸುವ ಇಚ್ಛೆ ಇಲ್ಲದೇ, ತಮ್ಮ ಕಾರನ್ನು ವೇಗವಾಗಿ ಓಡಿಸಿ, ಮಾಯವಾಗಿಬಿಟ್ಟರು. ಮಹಾರಾಷ್ಟ್ರದ ಕುಟುಂಬವೊಂದು ದೂರದಿಂದ ನೋಡಿದರೆ ಒಂದು ತೆರ, ಜಗಲಿಯ ಮೇಲೆ ನಿಂತು ನೋಡಿದರೆ ಇನ್ನೊಂದು ತೆರ ಎಂದು ಭ್ರಮೆಯಿಂದಲೇ ಹತ್ತಿ ಇಳಿಯುವದರಲ್ಲಿ ಕಾಲಕಳೆದರು.

ಕುದುರೆ-ಜೂಜಿನ ಪ್ರೇಮಿಯೊಬ್ಬ ದೂರದರ್ಶಕದಿಂದ ಹೆಚ್ಚಿನ ವಿವರಗಳೇನಾದರೂ ಗೋಚರಿಸುವದೇ ಎಂದು ಹುಡುಕಿದಾಗ, ಲಾಭವಾಗದೇ ಹತಾಶನಾದ. ಸಹಪರಿವಾರವಾಗಿ ಬಂದ ಆಂಧ್ರ ಗೃಹಸ್ಥನೊಬ್ಬನ ವೇಳೆಯೆಲ್ಲ ಮಕ್ಕಳಿಗೆ ನೀರು ಕುಡಿಸುವದು, ಕಕ್ಕಸಕ್ಕೆ ಕರೆದುಕೊಂಡು ಹೋಗುವದರಲ್ಲಿ ಕಳೆಯಿತು. ಇನ್ನೊಬ್ಬ ತಾಯಿ ಕೈಚೀಲದಿಂದ ತಿಂಡಿ ತೆಗೆದು ಜೊತೆಯವರಿಗೆಲ್ಲ ಹಂಚುತ್ತ ಕುಳಿತಳು. ಗೆಳೆಯರ ತಂಡವೊಂದನ್ನು ಕರೆದುಕೊಂಡು ಬಂದ ಮುಖ್ಯಸ್ಥನೊಬ್ಬ, ತನ್ನ ಮಾತು ನಂಬಿ ಬಂದವರಿಗೆ ನಿರಾಶೆಯಾಗಬಾರದೆಂದು, "ಪುರಾತನರು ದೃಢಕಾಯರಾಗಿರುತ್ತಿದ್ದುದರಿಂದ ಇರುಳು ಬಂದರಲ್ಲಿಯೇ ಹದಿನಾರು ರಮಣಿಯರೊಡನೆ ರತಿಕ್ರೀಡೆಯಲ್ಲಿ ತೊಡಗಿರುತ್ತಿದ್ದರು. ಅಷ್ಟೊಂದು ತರುಣಿಯರು ಸಿಗದಿದ್ದಲ್ಲಿ ಒಬ್ಬಳನ್ನೇ ಹದಿನಾರು ವಿಧದಲ್ಲಿ ಭೋಗಿಸುತ್ತಿದ್ದರು.

ಅವರಿಗೆ ಸಹಾಯವಾಗಲು ಈ ಶಿಲ್ಪಗಳನ್ನು ಕೊರೆಯಲಾಗಿದೆ” ಎಂದು ಅಧಿಕಾರವಾಣಿಯಿಂದ ವಿವರಿಸಿದ. ಏನೋ ನೆನಪಾದಂತೆ ಪಂಗಡದವನೊಬ್ಬ “ಆ ಕಾಲದ ಹೆಂಗಳೆಯರು ಚದುರೆಯರು, ಕಾಮಕಲಾ-ಪ್ರವೀಣೆಯರಿರುತ್ತಿದ್ದರು. ಕ್ರೀಡೆಯಲ್ಲಿ ಅವರೇ ಮುಂದರಿಯುತ್ತಿದ್ದರು. ಆದರೆ ಈಗ ದುರ್ದೈವದಿಂದ ಪುರುಷರೇ ಅದನ್ನು ಮಾಡಬೇಕಾಗಿದೆ. ಇಂದು ಪುರುಷರಾದರೂ ಗಟ್ಟಿಯಿದ್ದರೆ, ಕೈಹಿಡಿದವಳನ್ನು ಸಂತೋಷಪಡಿಸಲು ಹೆಣಗಬೇಕಾಗುತ್ತದೆ ಎಂದು ಪರೋಕ್ಷವಾಗಿ ಪೂರ್ವಜರ ಬೆನ್ನು ಚಪ್ಪರಿಸಿದ. ಫ್ರೆಂಚ್ ತಂದೆ-ಮಗಳು ತೀರ ಗಂಭೀರವಾದ ಸಮಸ್ಯೆಯನ್ನು ಬಿಡಿಸುವವರಂತೆ, ಪ್ರತಿಯೊಂದು ಶಿಲ್ಪದ ಭಂಗಿಯನ್ನೂ ಸೂಕ್ಷ್ಮವಾಗಿ ಪರಿಕಿಸಿ, ಚರ್ಚಿಸಿ ಒಂದು ನಿರ್ಧಾರಕ್ಕೆ ಬರುತ್ತಿದ್ದರು. ಅಮೇರಿಕನ್ ನವದಂಪತಿಗಳು, ಹತ್ತು ಶತಮಾನಗಳ ಹಿಂದೆ, ತಾವಿನ್ನೂ ಕಾಡು ಸ್ಥಿತಿಯಲ್ಲಿದ್ದಾಗ, ಭಾರತೀಯರು ಕಾಮಶಾಸ್ತ್ರದಲ್ಲಿ ಸಾಧಿಸಿದ ಪರಿಣತಿಯನ್ನು ಕಂಡು ವಿಸ್ಮಯಪಡುತ್ತಿದ್ದರು. ಭಾರತೀಯ ಆಡಿಗೆಯಂತೆ, ಅವರ ಕೆಲ ಭಂಗಿಗಳನ್ನು ಏಕೆ ಯತ್ನಿಸಿ ನೋಡಬಾರದು?” ಎಂದು ಯುವಕ, ಯುವತಿಯ ಕಿವಿಯಲ್ಲಿ ಪಿಸುಗುಟ್ಟಿರಬೇಕು. ಅಂತೆಯೇ ಇಬ್ಬರೂ ಕಿಲಕಿಲನೆ ನಕ್ಕು ಮುಂದಿನ ದೇವಾಲಯಕ್ಕೆ ಹೊರಟರು.

ಇನ್ನೂ ನೂರಾರು ಪ್ರವಾಸಿಗಳು ಶಿಲ್ಪಗಳ ದರ್ಶನ ಪಡೆದು, ಅವುಗಳ ಬಗ್ಗೆ ತಮ್ಮದೇ ನಿರ್ಣಯ ಕೈಕೊಂಡು ಹಿಂದಿರುಗಿದರೂ ಅವರಲ್ಲಿ ಒಬ್ಬರೂ ಈ ಶಿಲ್ಪಗಳನ್ನು ನೋಡಿ ಉದ್ರೇಕಗೊಂಡಂತೆ ತೋರಲಿಲ್ಲ. ಬಹುಸಂಖ್ಯಾತರಲ್ಲಿ ತಾವು ನಿರೀಕ್ಷಿಸಿ ಬಂದ ಕಾಮುಕತೆ ಈ ಶಿಲ್ಪಗಳಲ್ಲಿ ಇಲ್ಲವಲ್ಲ! ಎಂಬ ನಿರಾಶೆ ಎದ್ದು ಕಾಣಿಸುತ್ತಿತ್ತು. ಇಂತಹ ಸುಳ್ಳು ನಿರೀಕ್ಷೆಗೆ ದೂರದ ಪ್ರದೇಶಗಳಲ್ಲಿ, ನಾಡುಗಳಲ್ಲಿ ಮಾಡುವ ಅಪಪ್ರಚಾರವೇ ಕಾರಣ. ದೇವಸ್ಥಾನಗಳನ್ನು ತೋರಿಸುವ ಸರಕಾರಿ ಮಾರ್ಗದರ್ಶಕರು ಪ್ರವಾಸಿಕರಿಗೆ ರುಚಿಸುವಂತೆ, ಕಟ್ಟುಕತೆಗಳನ್ನು, ಶಿಲ್ಪಗಳಲ್ಲಿ ಇಲ್ಲದ ವಿವರಗಳನ್ನು ತೋರಿಸಿ ಅವರಿಂದ ಹೆಚ್ಚಿನ ಹಣ ಗಿಟ್ಟಿಸುವ ಹವಣಿಕೆಯಲ್ಲಿರುತ್ತಾರೆ. ಆದರೆ ಯಾವ ಭಾರತೀಯನೂ ಇಂಥ ಶಿಲ್ಪಗಳು ದೇವಾಲಯಗಳನ್ನು ಅಲಂಕರಿಸಿದ ಬಗ್ಗೆ ತಲೆ ತಗ್ಗಿಸಬೇಕಾಗಿಲ್ಲ. ಯಾವ ತಂದೆಯೂ ಪ್ರಾಯದ ಮಗಳೊಂದಿಗೆ ಈ ಶಿಲ್ಪ ನೋಡಲು ಹಿಂಜರಿಯಬೇಕಾಗಿಲ್ಲ. ಇವುಗಳಲ್ಲಿ ಇರುವದು ಶುದ್ಧ ಸೌಂದರ್ಯ, ಕಾಮವಲ್ಲ. ಅಂತೆಯೇ ಅಮೇರಿಕೆಯ

ಅನಂಗನ ರಂಗವಾದ ಲಾಸವೇಗಾಸ್‌ದಂತೆ, ಈ ಖಜುರಾಹೋ ಎಂದು ಯಾರಾದರೂ ತಿಳಿದು ಹೋದರೆ, ನಿರಾಶೆಯಿಂದ ಹಿಂತಿರುಗುವದು ಖಂಡಿತ. ಕಾಮಪ್ರಚೋದನೆಯ ಸಲುವಾಗಿಯೇ ರಚಿತವಾದ ಛಾಯಾಚಿತ್ರ, ಸಾಹಿತ್ಯ, ಕ್ಯಾಬರೆ ನೃತ್ಯಗಳಂತಹ ಪ್ರಬಲವಾದ ಶಕ್ತಿ ಈ ಶಿಲ್ಪಗಳಲ್ಲಿ ಇಲ್ಲವೇ ಇಲ್ಲ. ಅಷ್ಟೇ ಏಕೆ, ಮಾಟವಾದ ಮೈಕಟ್ಟಿನ ತರುಣಿಯ ದೈಹಿಕ ಆಕರ್ಷಣೆಯೂ ಈ ಶಿಲ್ಪಗಳಲ್ಲಿ ಇಲ್ಲ. ಕಲಾತ್ಮಕವಾಗಿ ಕಟೆದು ನಿಲ್ಲಿಸಿದ ಸರಸ್ವತಿ, ಲಕ್ಷ್ಮಿ, ರತಿಯರ ಅರೆನಗ್ನ ವಿಗ್ರಹ ನೋಡಿದಾಗ ನಮ್ಮಲ್ಲಿ ಜಾಗ್ರತವಾಗುವದು ಸೌಂದರ್ಯ-ಪ್ರಜ್ಞೆ, ಕಾಮವಲ್ಲ. ಇದೇ ಮಾತು ಖಜುರಾಹೋದ ಕಾಮಶಿಲ್ಪಗಳಿಗೂ ಅನ್ವಯಿಸುತ್ತದೆ.

ದೇವಾಲಯಗಳನ್ನು ಕಾಮಶಿಲ್ಪಗಳಿಂದ ಏಕೆ ಅಲಂಕರಿಸುತ್ತಾರೆ ಎಂಬ ಪ್ರಶ್ನೆಗೆ ಭಿನ್ನಾಭಿಪ್ರಾಯಗಳಿವೆ. ಹಿಂದಿನ ಆಳರಸರು ಸಂಪತ್ ಸಮೃದ್ಧಿಯಲ್ಲಿ ಬಾಳುತ್ತಿದ್ದುದರಿಂದ, ಹೆಚ್ಚಿನ ಸಮಯವನ್ನು ವಿಷಯೋಪಭೋಗಗಳಲ್ಲಿ ಕಳೆಯುತ್ತಿದ್ದುದರಿಂದ, ತಮ್ಮ ಉಪಯೋಗಕ್ಕಾಗಿ ಇಂತಹ ಶಿಲ್ಪಗಳನ್ನು ಕಟೆದು ನಿಲ್ಲಿಸಲು ಅವರು ಆಜ್ಞೆ ಕೊಡುತ್ತಿದ್ದರೆಂದು ಒಂದು ಪಂಗಡ ವಾದಿಸಿದರೆ, ಇನ್ನೊಂದು ಪಂಗಡದವರು, ತಮ್ಮ ಪ್ರಜೆಗಳು ಸಕಲ ವಿದ್ಯೆಗಳಲ್ಲಿ ಪರಿಣತರಿರಬೇಕೆಂದು, ಎಲ್ಲರೂ ಬರುವ ದೇವಾಲಯಗಳಲ್ಲಿ ಈ ಶಿಲ್ಪಗಳನ್ನು ನಿಲ್ಲಿಸಲಾಗಿದೆಯೆಂದು ಸಾಧಿಸುತ್ತಾರೆ. ನಾಲ್ಕು ಪುರುಷಾರ್ಥಗಳಲ್ಲಿ ನಂಬಿಕೆಯಿಟ್ಟ ಹಿಂದೂಗಳಿಗೆ ಧರ್ಮ, ಅರ್ಥಗಳಂತೆ, ಕಾಮದ ಸದ್ವಿನಿಯೋಗವೂ ಮೋಕ್ಷಕ್ಕೆ ಅತ್ಯವಶ್ಯವಾದ್ದರಿಂದ ಈ ಏರ್ಪಾಡು ಮಾಡಲಾಗಿದೆ ಎನ್ನುವರು ಕೆಲವರು. ಇನ್ನೂ ಕೆಲವರು ದೇವಾಲಯಗಳ ಹೊರಗೋಡೆಗಳಿಗಷ್ಟೇ ಕಾಮಶಿಲ್ಪಗಳು ಸೀಮಿತವಾಗಿರುವದರಿಂದ ಕಾಮತೃಪ್ತಿ ಸಾಧಿಸಿದಾಗಲೇ ದೇವದರ್ಶನ ಸಾಧ್ಯವೆಂದು ಇದು ಸೂಚಿಸುತ್ತದೆ ಎನ್ನುತ್ತಾರೆ. ಈ ಶಿಲ್ಪರಚನೆಯ ಕಾಲಕ್ಕೆ ಕೊಂಚ ಮೊದಲು ಬೌದ್ಧಧರ್ಮದ ವರ್ಚಸ್ಸು ಹೆಚ್ಚಾಗಿದ್ದು ಜೀವನಾಸಕ್ತಿ ತೀರ ಕುಂಠಿತವಾದ್ದರಿಂದ, ಪ್ರಜೆಗಳು ಸಂಸಾರದತ್ತ ಆಕರ್ಷಿತರಾಗಿ ಹಿಂದೂಧರ್ಮದ ಪುನರುಜ್ಜೀವನಕ್ಕಾಗಿಯೇ ಈ ಲೈಂಗಿಕ-ಚಿತ್ರಗಳು ನಿರ್ಮಿತವಾಗಿವೆ ಎಂದೂ ಅಭಿಪ್ರಾಯಪಡುವವರಿದ್ದಾರೆ.

ಕೇವಲ ಸಂಭೋಗ-ಶಿಲ್ಪಗಳಷ್ಟೇ ಏಕೆ, ಪ್ರತಿಯೊಂದು ದೇವಾಲಯ

ವನ್ನೂ ಕಾಮಿನಿಗೆ ಹೋಲುವಂತೆ ಕಟ್ಟಲಾಗಿದೆ ಎಂದು ತಮ್ಮ ವಿಚಾರಸರಣಿಯನ್ನು ಹಿಗ್ಗಿಸುವವರೂ ಇಲ್ಲದಿಲ್ಲ. ಮೆಟ್ಟಿಲುಗಳು ಸ್ತ್ರೀಯ ಪಾದಗಳಿದ್ದಂತೆ; ಅರ್ಧಮಂಡಪ, ಮೊಣಕಾಲುಗಳಂತೆ; ಮಂಡಪವು ಮಾಟವಾದ ತೊಡೆಗಳಿದ್ದಂತೆ; ಗರ್ಭಗುಡಿಯು ಗರ್ಭಕೋಶವಿದ್ದಂತೆ; ಲಿಂಗ ಸ್ಥಾಪಿಸಿದಲ್ಲಿ ಕಗ್ಗತ್ತಲು ಇರುವದರಿಂದ ಅದು ಜನನೇಂದ್ರಿಯವನ್ನು ಪ್ರತಿನಿಧಿಸುತ್ತದಂತೆ. ಮುಖ್ಯ ಶಿಖರ ಉಳಿದ ಸ್ತ್ರೀದೇಹವಾದರೆ, ಉಳಿದ ಅಲಂಕಾರಗಳು ಇತರ ಅಂಗಾಂಗಗಳಂತೆ. ಈ ಹೋಲಿಕೆಯನ್ನು ಜನಸಾಮಾನ್ಯನೂ ಕಾಣುವಂತಿದ್ದರೆ ಕಾಮವೂ ಕಲೆಯಾಗಬಲ್ಲದು ಅನಿಸುತ್ತದೆ. ದೇವಾಲಯಗಳಿಗೆ ಕಾಮಶಿಲ್ಪಗಳನ್ನು ಏಕೆ ಜೋಡಿಸಲಾಗಿದೆ ಎಂದು ವಿದ್ವಾಂಸರೆಲ್ಲ ತಲೆ ಕೆರೆದುಕೊಳ್ಳುತ್ತಿದ್ದಾರೆ. ಆದರೆ ಹಿಂದೂಧರ್ಮದ ಲೌಕಿಕ-ವಿಚಾರಸರಣಿಯನ್ನು ಅವಲೋಕಿಸಿದರೆ ಇದರಲ್ಲಿ ಅಸ್ವಾಭಾವಿಕವಾದುದೇನೂ ತೋರುವದಿಲ್ಲ.

ಮಹಾದೇವನನ್ನು, ಲಿಂಗ-ಯೋನಿಗಳ ಪ್ರತೀಕವೆಂದು ಪೂಜಿಸುವ ದೇಶದ ದೇವಾಲಯಗಳಲ್ಲಿ ಸಂಭೋಗ-ಶಿಲ್ಪಗಳು ಇರುವದು ನಾಚಿಕೆಗೇಡು ಹೇಗಾದೀತು? ಜೀವನವೇ ದೈವಲೀಲೆ; ನಾವೆಲ್ಲ ದೇವಾಂಶ; ಮೋಕ್ಷ ಪಡೆಯಬೇಕಾದರೆ, ಧಾರ್ಮಿಕ, ಆಧ್ಯಾತ್ಮಿಕದಲ್ಲಿ ಮನಸ್ಸು ತೊಡಗಿಸಬೇಕಾದರೆ ಕಾಮತೃಪ್ತಿ ಅತ್ಯವಶ್ಯವೆಂದು ಧರ್ಮಗ್ರಂಥಗಳು ವಾದಿಸುವದಿಲ್ಲವೇ? ಕಾಮಸೂತ್ರ ಬರೆದವನು ಒಬ್ಬ ಮುನಿಯೇ. ದೇವಾಧಿದೇವತೆಗಳು ಕಾಮದ ಪ್ರಬಲಜಾಲದಿಂದ ಪಾರಾಗದಿರುವಾಗ ಜನಸಾಮಾನ್ಯನ ಬವಣೆ ಏನು? ನಮ್ಮಲ್ಲಿ ಋಷಿಗಳು, ಪುರಾಣ-ಪುರುಷರು ಹಲವರು ಎಡವಿದ್ದಾರೆ. ಸುಂದರ ಅಪ್ಸರೆಯರನ್ನು ನೋಡಿ ಘೋರ ತಪಸ್ಸಿನಿಂದ ವಿಮುಖರಾದವರಿದ್ದಾರೆ. ಪರಸ್ತ್ರೀಯರೊಂದಿಗೆ ಸಂಭೋಗ ಮಾಡಿದ ದೇವತೆಗಳಿದ್ದಾರೆ. ಜಿಗರೆಯಿಂದ ಸಂತಾನ ಪಡೆದವರಿದ್ದಾರೆ. ಸೂರ್ಯದೇವನನ್ನೂ ವಂಚಿಸಿ ರತಿಕ್ರೀಡೆ ನಡೆಸಿದವರಿದ್ದಾರೆ. ವಿವಾಹಪೂರ್ವದಲ್ಲಿ ಗರ್ಭವತಿಯಾದವರಿದ್ದಾರೆ. ಧರ್ಮಗ್ರಂಥಗಳಲ್ಲಿ, ಪುರಾಣಗಳಲ್ಲಿ ಬರುವ ಇಂತಹ ಘಟನೆಗಳನ್ನು ಶೇಖರಿಸುತ್ತ ಹೊರಟರೆ, ಲೈಂಗಿಕ-ಜೀವನಕ್ಕೇ ಪ್ರಾಧಾನ್ಯ ಕೊಟ್ಟ ಪಾಶ್ಚಿಮಾತ್ಯರೂ ತಲೆತಗ್ಗಿಸಬೇಕಾದ ಪ್ರಮೇಯ ಬಂದೀತು. ಕಾಮವು ಜೀವನದ ಬಹುಮುಖ್ಯ ಘಟಕವೆಂದು ಒಪ್ಪಿಕೊಂಡರೆ ಮುಮುಕ್ಷುಗಳು ಅದನ್ನು ಪೂರ್ಣವಾಗಿ ಅನುಭವಿಸಲೇಬೇಕು. ಇದನ್ನು

ಸಾಧಿಸುವ ರೀತಿ-ನೀತಿಗಳು ಕಾಲಕಾಲಕ್ಕೆ ಬದಲಾಗಿವೆ. ಧಾರ್ಮಿಕ, ಸಾಮಾಜಿಕ, ಕಾನೂನುಬದ್ಧ ಕಾಮ ಅಶ್ಲೀಲವೆಂದು ಎಂದೂ ಪರಿಗಣಿಸಲ್ಪಟ್ಟಿಲ್ಲ; ವಿಕೃತ ಕಾಮ ಮಾತ್ರ ತ್ಯಾಜ್ಯ.

ಕಾಮಸಂಬಂಧಿ ಕಾನೂನುಗಳು ಎಲ್ಲ ಕಾಲದಲ್ಲಿ ಎಲ್ಲ ದೇಶಗಳಲ್ಲಿ ಒಂದೇ ಆಗಿರಲಿಲ್ಲ. ಆಗಲೂ ಸಾಧ್ಯವಿಲ್ಲ. ಒಂದು ದೇಶದಲ್ಲಿ ಸಹಜಕಾಮ ಎಂದು ಪರಿಗಣಿಸಿದ್ದು, ಇನ್ನೊಂದರಲ್ಲಿ ವಿಕೃತವಾಗಬಹುದು. ಒಂದೇ ದೇಶದಲ್ಲಿ ಹಿಂದೆ ವಿಕೃತವಿದ್ದದ್ದು ಕಾಲಕ್ರಮೇಣ ಸಹಜವೂ ಆಗಬಹುದು. ಭಾರತದಲ್ಲಿ ಚುಂಬನ ಕಾಮಚೇಷ್ಟೆಯಾದ್ದರಿಂದ ಅದನ್ನು ಸಾರ್ವಜನಿಕ-ಸ್ಥಳಗಳಲ್ಲಿ ನಿಷೇಧಿಸಿದರೆ. ಪಾಶ್ಚಾತ್ಯದೇಶಗಳಲ್ಲಿ ಅದು ಹಸ್ತಲಾಘವದಂತೆ ಆತ್ಮೀಯ ಚಿಹ್ನೆ, ಅಮೇರಿಕೆಯಲ್ಲಿ ಧರ್ಮ, ಸಮಾಜ, ಸರಕಾರಗಳು ಶಾರೀರಿಕ ನಗ್ನತೆಯನ್ನು ಪ್ರತಿಬಂಧಿಸಿಲ್ಲ. ಆದರೆ ಗುಹ್ಯಾಂಗಗಳನ್ನು ಪ್ರದರ್ಶಿಸುವದು ಅಪರಾಧವೆನಿಸುವದು. ಆದೇ ಇಂಗ್ಲಂಡ ಫ್ರಾನ್ಸಗಳಲ್ಲಿ, ನಗ್ನ-ನಾಟಕ-ನೃತ್ಯಗಳೆಷ್ಟೋ ಪ್ರದರ್ಶನಕ್ಕೆ ಬಂದಿವೆ. ಸ್ಕಾಂಡಿನೇವಿಯ ದೇಶಗಳಲ್ಲಿ ನಗ್ನತೆಯ ಬಗ್ಗೆ ಯಾವ ಪ್ರತಿಬಂಧವೂ ಇರದ್ದರಿಂದ ಅಮೇರಿಕೆ ಮತ್ತು ಯುರೋಪಿನ ದೇಶಗಳಿಗೆ ಬೇಕಾಗುವ ನಗ್ನ-ಭಂಗಿಗಳನ್ನು ಅಲ್ಲಿಯ ತರುಣಿಯರೇ ಪೂರೈಸುತ್ತಾರೆ. ಸಾಲಾಝಾರರು ಪೋರ್ಚುಗೀಸರನ್ನು ಫ್ರಾಂಕೊ ಸ್ಪೇನದ ಜನತೆಯನ್ನು "ಸಭ್ಯ" ನಾಗರಿಕರನ್ನಾಗಿ ಮಾಡುವ ಉದ್ದೇಶದಿಂದ ಕಾಮಪ್ರಚೋದಕ ಪತ್ರಿಕೆಗಳನ್ನು, ಚಿತ್ರಗಳನ್ನು ಪ್ರತಿಬಂಧಿಸಿದ್ದರು. ಆದರೆ ಅವರ ಮರಣಾನಂತರ ಅವರ ಪ್ರಜೆಗಳು ಇಂಥ ಪತ್ರಿಕೆ, ಪುಸ್ತಕಗಳನ್ನು ಕೊಂಡು ಓದಿದಷ್ಟು ಯುರೋಪಿನ ಇನ್ನಾವ ದೇಶದವರೂ ಓದಲಿಲ್ಲವಂತೆ! ಸಲಿಂಗರತಿಯ ಆಪಾದನೆಯ ಮೇಲೆ ಆಸ್ಕರ್ ವ್ಹಾಯ್ಲ್ಡನಂತಹ ಪ್ರತಿಭಾವಂತನನ್ನು ಕ್ರೂರವಾಗಿ ಶಿಕ್ಷಿಸಿದ ಇಂಗ್ಲಂಡಿನಲ್ಲೇ ಇಂದು ಅದನ್ನು ಕಾನೂನುಬದ್ಧ ಮಾಡಲಾಗಿದೆ. ಭ್ರೂಣಹತ್ಯೆ ಮಹಾಪಾತಕವೆನಿಸಿಕೊಂಡ ನಮ್ಮ ಪುಣ್ಯಭೂಮಿಯಲ್ಲೆ ಇಂದು ಗರ್ಭಪಾತ ಕಾನೂನುಬದ್ಧವಾಗಿದೆ. 'ಕಾಮರೂಪೀ' ಕಾನೂನುಗಳು ಅದೆಷ್ಟು ಬೇಗ ಬದಲಾಗುತ್ತಿವೆ!

ಮಾದರಿ (ಮಾಡೆಲ್ಲು)ಗಳನ್ನು ನೋಡಿ ತಮ್ಮ ಕಲಾಕೃತಿಗಳನ್ನು ನಿರ್ಮಿಸುವ ಪಾಶ್ಚಾತ್ಯರ ರೀತಿಯನ್ನು ನಮ್ಮವರು ಅನುಕರಣೆ ಮಾಡಲಿಲ್ಲ. ಆದರೂ ಕೆಲವು ಬುದ್ಧಿಶಾಲಿಗಳು, ಖಜುರಾಹೋ ಶಿಲ್ಪಗಳು 'ಮಾದರಿ'ಗಳನ್ನು ಅನು

ಕರಿಸಿ ನಿರ್ಮಿತವಾದವೆಂದು ವಾದಿಸುತ್ತಾರೆ. ಇಂಥವರು ಅಲ್ಲಿಯ ಹಲವು ಶಿಲ್ಪ ಗಳನ್ನು ಅಳತೆ ಮಾಡಿ ಅವು ಸಜೀವ ಮಾದರಿಗೆ ಪ್ರಮಾಣಬದ್ಧವಾದದ್ದೇ ತಮ್ಮ ವಾದಕ್ಕೆ ತಳಹದಿಯನ್ನಾಗಿ ಮಾಡಿಕೊಂಡಿದ್ದಾರೆ. ಕಲಾಕೃತಿಗಳು ಹೇಗೇ ರಚಿತ ವಾಗಿರಲಿ, ಅವು ಪ್ರಮಾಣಬದ್ಧವಿಲ್ಲದಿದ್ದರೆ ಅವು ಕಲಾಪೂರ್ಣ ಹೇಗಾದಾವು ಎಂದು ಯೋಚಿಸಿದಂತೆ ತೋರುತ್ತಿಲ್ಲ. ಖಜುರಾಹೋ ಶಿಲ್ಪಗಳು ಆ ಕಾಲದಲ್ಲಿ ಪ್ರಚಲಿತವಿರುವ ಸಂಭೋಗಾಸನಗಳಿಂದ, ಇಲ್ಲವೇ ಕಾಮಸೂತ್ರಗಳ ಆಧಾರದ ಮೇಲೆ, ಇಲ್ಲವೇ ಕೇವಲ ಕಲ್ಪನಾಶಕ್ತಿಯಿಂದಲೇ ರಚಿತವಾಗಿರಬೇಕು. ಅವು ಹೇಗೇ ನಿರ್ಮಿತವಾದರೂ, ಅವನ್ನು ನಮಗಾಗಿ ಬಿಟ್ಟುಹೋದ ಶಿಲ್ಪಿಗಳು ಅಸಾಧಾರಣರಿರಲೇಬೇಕು. ವಿಜ್ಞಾನವನ್ನೇ ಜೀವನದ ತಳಹದಿಯನ್ನಾಗಿ ಮಾಡಿ ಕೊಂಡ ಅಮೇರಿಕೆಯಲ್ಲಿ ಪ್ರಕಟವಾದ ಕಾಮುವಸ್ತುವನ್ನೇ ವಿವಿಧ ಕೋನಗಳಿಂದ ಅಭ್ಯಸಿಸಿದ ಕಿನ್‌ಸೆ ವರದಿಯು ಸರ್ವರಿಂದಲೂ ಸೈ ಅನಿಸಿಕೊಂಡಿರುವಾಗ, ಇದಕ್ಕೂ ಸಹಸ್ರವರ್ಷಗಳ ಪೂರ್ವದಲ್ಲಿ ಪ್ರಚಲಿತವಿರುವ ಸಂಭೋಗ-ಭಂಗಿ ಗಳನ್ನು ಸಚಿತ್ರವಾಗಿ ವರದಿಮಾಡಿದ ಭಾರತೀಯ ಶಿಲ್ಪಗಳನ್ನು ಯಾವ ವಿಧ ಹೊಗಳಿದರೂ ಕಡಿಮೆಯೇ!

ಇಂದು ಯಾವದಾದರೊಂದು ವಿಷಯದ ಮೇಲೆ ಅದರ ಸರ್ವಸಾಧ್ಯತೆ ಗಳನ್ನು ವೈಜ್ಞಾನಿಕವಾಗಿ ವಿವೇಚಿಸಿ ಪ್ರಯೋಗಮಾಡಿ, ಸೂತ್ರ ರಚಿಸುವಂತೆ, ನಮ್ಮ ಪೂರ್ವಜರು ಗ್ರಂಥವೊಂದನ್ನು ರಚಿಸುವಾಗ ಆಯ್ದುಕೊಂಡ ವಿಷಯದ ಮೇಲೆ ವಿಚಾರದ ವಿವಿಧ ಹಂತಗಳನ್ನು ಆಳವಾಗಿ ನಿರೂಪಿಸುತ್ತಿದ್ದರು. ಅಂದಿನ ವಾತ್ಸ್ಯಾಯನ-ಪ್ರಣೀತ ಕಾಮಸೂತ್ರ ಮತ್ತಿತರ ಕಾಮಶಾಸ್ತ್ರಗಳು ಈ ಮಾತಿಗೆ ಪುಷ್ಟಿಕೊಡುತ್ತವೆ. ಇಂತಹ ಎಷ್ಟು ಗ್ರಂಥಗಳು ಆ ಕಾಲದಲ್ಲಿ ಪ್ರಚಲಿತ ವಿದ್ದವೋ ಏನೋ, ಇಂದು ಅವು ಕಣ್ಮರೆಯಾಗಿವೆ. ಅಂಥ ಕೆಲವು ಗ್ರಂಥಗಳ ಆಧಾರದಿಂದ ಈ ಶಿಲ್ಪಗಳು ನಿರ್ಮಿತವಾಗಿದ್ದರೆ, ಗ್ರಂಥಗಳಲ್ಲಿ ಲಭ್ಯವಿಲ್ಲದವು ಗೋಡೆಗಳಲ್ಲಿ ಕಲ್ಲಿನಲ್ಲಿ ಕಾದಿರಿಸಲ್ಪಟ್ಟಿವೆ ಎಂಬುದು ಅಭಿಮಾನಪಡಬೇಕಾದ ವಿಷಯ. ಹತ್ತು ಶತಮಾನಗಳ ಹಿಂದೆ ಜನರು ಹೆಚ್ಚು ಸ್ಥಿತಿವಂತರಾಗಿದ್ದು, ಹೆಚ್ಚಿನ ವಿರಾಮವನ್ನು ಪಡೆಯುತ್ತಿದ್ದರಾದ್ದರಿಂದ ಇಂದಿನವರಿಗಿಂತ ಕಾಮ ಜೀವನದಲ್ಲಿ ಹೆಚ್ಚಿನ ಆಸಕ್ತಿ ತೋರಿಸಿದರೆ ಆಶ್ಚರ್ಯವಿಲ್ಲ. ಧನಿಕರಾಗಿ ಹೆಚ್ಚಿನ ವಿರಾಮವಿರುವ ಅಮೇರಿಕನ್ನರು ಹೆಚ್ಚು ಹೆಚ್ಚು ಕಾಮುಕರಾಗುತ್ತಿದ್ದಾರೆಂಬ

ಕೂಗು ಎಲ್ಲೆಡೆ ಕೇಳಿಬರುತ್ತಿದೆ. ಮಾನವನು ತನ್ನ ಸಂಪತ್ತನ್ನು ಹೊಟ್ಟೆ-ಹಸಿವು ಮತ್ತು ಮಾನಸಿಕ-ಹಸಿವನ್ನು ನೀಗಿಸಿಕೊಳ್ಳಲು ಬಳಸುವಂತೆ ದೈಹಿಕ-ಹಸಿವನ್ನು ಕಳೆದುಕೊಳ್ಳಲು ಬಳಸಿದರೆ ಅದೊಂದು ಮಹಾಪರಾಧವಲ್ಲ. ಅಂತೆಯೇ ಅಮೇರಿಕೆಯಲ್ಲಿ ವಿವಾಹಪೂರ್ವ, ಮತ್ತು ವಿವಾಹಬಾಹ್ಯ ಸಂಬಂಧಗಳು ದಿನ ಹೋದಂತೆ ಹೆಚ್ಚುತ್ತಿವೆ. ಮಾಡಿದ್ದೇ ಮಾಡಿದರೆ ಅದಕ್ಕೆ ಮಾಧುರ್ಯವೆಲ್ಲಿ? ಅಂತೆಯೇ ಪ್ರಚೋದಕವಾದ ಹೊಸ ಹೊಸ ವಿಚಾರಗಳಲ್ಲಿ, ಆಸನ ಮತ್ತು ಭಂಗಿಗಳಲ್ಲಿ ಆಸಕ್ತಿ; ಅವರಿಗೆ ಈ ಕಾರಣದಿಂದಲೇ ಕಾಮಶಾಸ್ತ್ರ ಎಲ್ಲಕ್ಕಿಂತ ಹೆಚ್ಚು ಇಷ್ಟವಾಯಿತು. ಮಾದಕ-ಪೇಯಗಳು ಹೆಚ್ಚೆಚ್ಚು ಜನಪ್ರಿಯವಾಗಲಾರಂಭಿಸಿದವು. ಕಾಮೋದ್ದೀಪನದ ಸಾಹಿತ್ಯ, ನಾಟಕ, ಚಲಚ್ಚಿತ್ರಗಳು ಬಳಕೆಯಲ್ಲಿ ಬಂದವು. ಇಂದಿಗೂ ನಮ್ಮ ದೇಶದ ಧನಿಕವರ್ಗ ಸಾಮಾಜಿಕ-ಚಟುವಟಿಕೆಗಳ ಮುಖವಾಡ ಧರಿಸಿ ವಿವಿಧರೂಪೀ ಕಾಮ-ಕ್ರೀಡೆಯಲ್ಲಿ ತೊಡಗಿರುತ್ತಾರೆ. ದುಡಿಮೆಗಾರರು ಹೊತ್ತಿಗೆ ಒಪ್ಪುವವಳನ್ನೆ ಜೊತೆಗಾತಿಯಾಗಿ ಪಡೆದು ನೆಮ್ಮದಿ ತಾಳಲು ಯತ್ನಿಸುತ್ತಾರೆ. ಕಾಮವೆಂದರೆ ಮೈ ತೆಗೆಯುವ ಧಾರ್ಮಿಕರೂ, ಮಡಿವಂತರೂ ಗುಪ್ತವಾಗಿ ಇದನ್ನೇ ನಡೆಸಿರುತ್ತಾರೆ! ಆದ್ದರಿಂದ ನಿಜಕ್ಕೂ ಈ ಶಿಲ್ಪಗಳು ಆ ಕಾಲದವರ ಕಾಮಜೀವನವನ್ನು ಪ್ರತಿರೂಪಿಸುತ್ತಿದ್ದರೆ, ಇದೊಂದು ಅತ್ಯದ್ಭುತ ಲೈಂಗಿಕ-ಸಾಧನೆಯೆಂದು ಅಭಿಮಾನ ತಾಳಬೇಕು.

ಈ ಶಿಲ್ಪಗಳೆಲ್ಲ ಸಂಪೂರ್ಣ ಕಾಲ್ಪನಿಕವೆಂದು ಒಪ್ಪಿಕೊಂಡರೂ ಅಂದಿನವರ ಭವ್ಯವಾದ ಕಲ್ಪನಾಶಕ್ತಿಗೆ ನಾವೆಲ್ಲ ನ್ಯಾಯವಾಗಿ ತಲೆಬಾಗಬೇಕಾದದ್ದೇ! ತಾವೆಂದೂ ನೋಡದ, ಕೈಕೊಂಡಿರದ ರತಿಕ್ರೀಡೆಯ ವಿವಿಧ ಭಂಗಿಗಳನ್ನು ಶಿಲೆಯಲ್ಲಿ ಸೌಂದರ್ಯಪೂರ್ಣವಾಗಿ ಇಳಿಸಬೇಕಾದರೆ, ಆ ಶಿಲ್ಪಿಗಳ ಅಗಾಧ ಪ್ರತಿಭೆಯ ಕಲ್ಪನೆ ಬರುವಂತಿದೆ. ಪ್ರತಿಯೊಂದು ಶಿಲ್ಪದ ಅಡಿಯಲ್ಲಿ ಶಿಲ್ಪಿಗಳು ತಮ್ಮ ಹೆಸರನ್ನು ನಮೂದಿಸಿರುವದರಿಂದ ಅವರು ಈ ಕೃತಿಗಳನ್ನು ಅಶ್ಲೀಲವೆಂದು ಪರಿಗಣಿಸುತ್ತಿದ್ದರೆಂದು ತಿಳಿಯಲು ಆಸ್ಪದವೇ ಇಲ್ಲ. ಆದ್ದರಿಂದ ಈ ಶಿಲ್ಪಗಳು, ಸೌಂದರ್ಯ ಮತ್ತು ಕಲೆಗಳ ಪತೀಕವಾಗಿ ನಿಂತಿವೆಯೇ ಹೊರತು ಕಾಮುಕತೆಯನ್ನು ಪ್ರತಿನಿಧಿಸುವದಿಲ್ಲ. ಖಜುರಾಹೋ ಇಂತಹ ಶಿಲ್ಪಗಳಿಗೆ ಪ್ರಸಿದ್ಧವಿದೆಯಾದರೂ, ಹೆಚ್ಚಿನ ಭಾರತೀಯ ದೇವಾಲಯಗಳಲ್ಲಿ ಈ ಬಗೆಯ ಶಿಲ್ಪಗಳು ಒಂದಿಲ್ಲೊಂದು ಕಡೆ ಇದ್ದೇ ಇರುತ್ತವೆ. ಬೇಲೂರು,

ಹಳೇಬೀಡು, ಸೋಮನಾಥಪುರ, ನುಗ್ಗೆಹಳ್ಳಿಯಲ್ಲಿ ಇರುವ ಹೊಯ್ಸಳ ದೇವಾಲಯಗಳ ಹೊರಗೋಡೆಗಳ ಮೇಲೆ ಅಲ್ಲಲ್ಲಿ ಇಂತಹ ಸುಂದರ ಶಿಲ್ಪಗಳು ರಾರಾಜಿಸುತ್ತವೆ. ಬಾದಾಮಿ, ಪಟ್ಟದಕಲ್ಲು, ಬನಶಂಕರಿಗಳಲ್ಲಿಯ 'ಚಾಲುಕ್ಯ ದೇವಾಲಯ'ಗಳಲ್ಲಿಯೂ ಇಂತಹವು ಸಾಕಷ್ಟಿವೆ. ಲೇಪಾಕ್ಷಿ, ಹಂಪೆ, ಭಟಕಳ ಗಳ ಮತ್ತು ವಿಜಯನಗರದ ದೇವಾಲಯಗಳ ಶಿಲ್ಪಿಗಳೂ ಅವನ್ನು ಮರೆತಿಲ್ಲ. ಮಧುರೆಯಲ್ಲಿಯ ಮೀನಾಕ್ಷಿ ದೇವಾಲಯ, ಗದುಗಿನಲ್ಲಿಯ ವೀರನಾರಾಯಣ ದೇವಾಲಯದ ಹೊರಗೋಪುರಗಳ ಮೇಲೆ ಇಂತಹ ಶಿಲ್ಪಗಳಿವೆ. ಭಾರತದ ದೊಡ್ಡ ದೇವಾಲಯಗಳಲ್ಲಿ ದೇವದಾಸಿಯರಿದ್ದರು. ವೇಶ್ಯೆಯರಿರುತ್ತಿದ್ದರು. ರತಿ-ಮನ್ಮಥರು ಪ್ರಣಯದ ಅಧಿದೇವತೆಗಳಾಗಿ ಮೆರೆದರು. ಕಾಮವನ್ನು ಪರಿಮಿತಿಯಲ್ಲಿ ಕಂಡರೆ, ಅದನ್ನು ಯೋಗ್ಯವಾಗಿ ಉಪಯೋಗ ಮಾಡಿಕೊಂಡರೆ ಅದೊಂದು ಕಲೆಯೂ ಆಗಬಲ್ಲುದು. ಅಂತೆಯೇ ನಮ್ಮ ಪೂರ್ವಜರು ವಿವಾಹ ಬಾಹ್ಯ ಕಾಮತೃಪ್ತಿ ನೀಡುವ ಕಾಮಿನಿಯರನ್ನು ಕಲಾವಂತರೆಂದು ಕರೆದರು; ಅವರಲ್ಲಿ ಹೆಚ್ಚಿನವರು ತಮ್ಮ ವೃತ್ತಿಯನ್ನು ದೇವರ ಸೇವೆ ಎಂಬ ಭಾವನೆ ಯಿಂದ ಹಾಡು, ನೃತ್ಯ, ವಾದ್ಯ, ಮಾತುಗಾರಿಕೆ, ಅಲಂಕಾರಗಳಿಂದ ಕಾಮವನ್ನು ಪರಿಷ್ಕೃತ ಕಲೆಯಾಗಿ ಮಾರ್ಪಡಿಸಿದರು. ಈ ದೃಷ್ಟಿಯಿಂದ ಖಜುರಾಹೋ ಕಲಾಕೃತಿಗಳನ್ನು ನೋಡಿದಾಗ, ಅವುಗಳ ನೈಜಸೌಂದರ್ಯ ಗೋಚರಿಸುತ್ತದೆ. ಅಂತೆಯೇ ಅವನ್ನು ನೋಡಿದಷ್ಟು ಕಡಿಮೆಯೇ. ತಮ್ಮ ಮಕ್ಕಳಿಗೆ ಕಾಮ ಮತ್ತು ಕಲೆಯಲ್ಲಿರುವ ಸೂಕ್ಷ್ಮ ಅಂತರವನ್ನು ಮನಗಾಣಿಸಬೇಕಾದರೆ ಅವರನ್ನು ಖಜುರಾಹೋಕ್ಕೆ ಕರೆದುಕೊಂಡು ಹೋಗಬೇಕು. ನನ್ನ ಮಗಳಿಗೆ ಪುಸ್ತಕ ರೂಪವಾಗಿ,ಅಲ್ಲಿ ಇಲ್ಲಿ ಕಳಿಸಿ ಅದನ್ನು ಅವಗತಮಾಡಿಸುವದಕ್ಕಿಂತ ಪ್ರತ್ಯಕ್ಷ ಖಜುರಾಹೋ ದರ್ಶನದಿಂದ ಮಾಡಿಸಬೇಕೆಂದಿದ್ದೇನೆ !

# ೧೪. ಬಾರಸೂರ

ಬಸ್ತರ ಜಿಲ್ಲೆಯ ದಕ್ಷಿಣಕ್ಕೆ, ಗೀದವುದ ಹತ್ತಿರ ಇಂದ್ರಾವತಿ ನದಿಯ ದಂಡೆಯ ಮೇಲಿರುವ ಈ ಬಾರಸೂರ್ ಹಿಂದಕ್ಕೆ ಬಾಣಾಸುರನ ರಾಜಧಾನಿಯಾಗಿತ್ತಂತೆ. ಬಲಿಚಕ್ರವರ್ತಿಯ ಹಿರಿಯ ಮಗನಾದ ಬಾಣಾಸುರ ದೊಡ್ಡ ಶಿವಭಕ್ತ. ಸಾವಿರ ತೋಳುಗಳಿದ್ದ ಮಹಾಮಹಿಮನಾಗಿದ್ದ. ಈತನ ಮಗಳು ಉಷೆ, ಸ್ವಪ್ನದಲ್ಲಿ ಶ್ರೀಕೃಷ್ಣನ ಮಗ ಪ್ರದ್ಯುಮ್ನನ ಪುತ್ರ ಅನಿರುದ್ಧನನ್ನು ಕಂಡು ಮೋಹಿಸಿ, ದಾಸಿಯ ಮೂಲಕ ಅವನನ್ನು ತನ್ನ ಅಂತಃಪುರಕ್ಕೆ ಬರಮಾಡಿಕೊಂಡಳು. ಬಾಣಾಸುರನಿಗೆ ಇದು ಗೊತ್ತಾಗಿ ಅನಿರುದ್ಧನನ್ನು ಸೆರೆಯಲ್ಲಿಟ್ಟ. ಆತನನ್ನು ಬಿಡಿಸಿ ಉಷೆಯೊಂದಿಗೆ ಕರೆದೊಯ್ಯಲು ಶ್ರೀಕೃಷ್ಣನೇ ಸೈನ್ಯದೊಂದಿಗೆ ಬರಬೇಕಾಯಿತು ಎಂದು ಪುರಾಣಗಳು ಹೇಳುತ್ತವೆ. ಇಂದಿನ ಬಾರಸೂರಿನಲ್ಲಿ ಈ ಘಟನೆಗಳನ್ನು ಎತ್ತಿ ಹಿಡಿಯುವ ಯಾವ ಕುರುಹುಗಳೂ ಇಲ್ಲದಿದ್ದರೂ ಇನ್ನಿತರ ಕಾರಣಗಳಿಗಾಗಿ ಅಲ್ಲಿ ಹೋಗುವಂತೆ ಅನೇಕರು ಸೂಚಿಸಿದರು. ಅಲ್ಲಿಯ ಕಾಮಶಿಲ್ಪಗಳು ತುಂಬ ನಾಚಿಕೆಗೇಡು. ಖಜುರಾಹೋದವನ್ನು ಮೀರಿಸುತ್ತವೆ ಎಂದು ಒಬ್ಬನೆಂದರೆ, ಅವನ್ನು ನೋಡಿದ ಗಂಡಸರೂ ತಲೆತಗ್ಗಿಸಬೇಕಾಗುವದೆಂದೂ, ಪತ್ನಿ-ಪುತ್ರಿಯರೊಂದಿಗೆ ಹೋಗುವ ಸ್ಥಳ ಅದು ಅಲ್ಲವೇ ಅಲ್ಲವೆಂದು ಇನ್ನೊಬ್ಬ ಖಚಿತವಾಗಿ ಹೇಳಿದ. ರಾಜರು, ಜಮೀನುದಾರರ ಕಾಟ ತಾಳಲಾರದೇ ಆದಿವಾಸಿಗಳು ತಮ್ಮ ಕಲಾಕೃತಿಗಳನ್ನೆಲ್ಲ ಕಾಡಿನ ಈ ಭಾಗಕ್ಕೆ ತಂದು ಅಡಗಿಸಿಟ್ಟು ಕಾಲಿಗೆ ಬುದ್ಧಿ ಹೇಳಿದ್ದರಿಂದ ಇಂದಿಗೂ ಅವು ದೂರದೂರದವರೆಗೆ ಹರಡಿಕೊಂಡಿವೆ ಎಂದು ನೋಡಿಬಂದವನೊಬ್ಬ ಹೇಳಿದ. ಅಂತೂ ಸಾಮಾನ್ಯವಲ್ಲದ ಅದೆಂತಹವೊ ಕಲಾಕೃತಿಗಳು ಅಲ್ಲಿ ಇರುವದು ಖಂಡಿತವೆನಿಸಿದ್ದರಿಂದ ಅಲ್ಲಿಗೆ ಹೋಗಲೇಬೇಕೆಂದು ನಿರ್ಧಾರಮಾಡಿದೆ.

ಬಾರಸೂರಿನ ವೈಭವವನ್ನು ವರ್ಣಿಸಿದವರಿಗೂ ಅಲ್ಲಿ ಸಮರ್ಪಕವಾಗಿ ಹೇಗೆ ಹೋಗಿ ಮುಟ್ಟಬಹುದು ಎಂದು ವಿವರಿಸಲು ಸಾಧ್ಯವಾಗಲಿಲ್ಲ. ಒಬ್ಬನು ಚಿಕ್ಕವನಿದ್ದಾಗ ಕಾಲುನಡಿಗೆಯಲ್ಲಿ ಹೋಗಿದ್ದ. ಇನ್ನೊಬ್ಬ ಸರಕಾರಿ ಜೀಪಿನಲ್ಲಿ

ತಲುಪಿದ್ದ. ಚಿಕ್ಕವನೂ ಅಲ್ಲದ, ಸರಕಾರಿ ಜೀಪೂ ಇಲ್ಲದ ನಾನು ನಕಾಶೆಗೆ ಶರಣುಹೋದೆ. ಸರಕಾರೀ ನಕಾಶೆ, ಬಾರಸೂರು, ಇಂದ್ರಾವತಿನದಿಯ ದಕ್ಷಿಣಕ್ಕಿದೆ ಎಂದು ತೋರಿಸಿತು. ಖಾಸಗಿ-ಕಂಪನಿಯ ನಕಾಶೆ ಉತ್ತರಕ್ಕಿದೆ ಎಂದು ಸಾರಿತು. ರಾಜನಾಂದಗಾಂವ್, ನಾರಾಯಣಪುರ ಮೇಲಿನಿಂದ ಛೋಟೆ ಡೊಂಗರಕ್ಕೆ ಹೋದಾಗ, ಅಲ್ಲಿ ನಿಲ್ಲಿಸಿದ "ಬಾರಸೂರ್‌ಗೆ" ಬೋರ್ಡನ್ನು ಹೊತ್ತ ಕಂಬ ನೋಡಿ ಸರಿಯಾದ ಮಾರ್ಗವನ್ನೇ ಹಿಡಿದೆ ಎಂದು ಗೆಲುವಾದೆ. ವಿವರಗಳನ್ನು ವಿಚಾರಿಸಿದಾಗ, ಅದು ಭಾವಿರಸ್ತೆಯ ಯೋಜನೆ. ನಕಾಶೆಯ ಮಾರ್ಗ ಕಾಗದದ ಮೇಲಿದ್ದ ರಸ್ತೆ ಭೂಮಿಗೆ ಇಳಿದುಬರಬೇಕಾದರೆ ಇನ್ನೈದು ವರ್ಷಗಳಾದರೂ ಬೇಕು. ಸದ್ಯಕ್ಕೆ ಸುಲಭವಾಗಿ ನಡೆದುಹೋಗಲಾರದಷ್ಟು ದಟ್ಟ ಕಾಡು, ನದಿ, ಬೆಟ್ಟಗಳಿಂದ ಕೂಡಿದೆ. ಈಗಂತೂ ಜಗದಲಪುರ, ಬಿಲಾಮಿಲಿ, ಗೀದವರ್ ಮಾರ್ಗವಾಗಿ ಮಾತ್ರ ಅಲ್ಲಿಗೆ ಮುಟ್ಟುವದು ಸಾಧ್ಯವೆಂದು ತಿಳಿದುಬಂದಿತು. ಬಂದ ದಾರಿಗೆ ಸುಂಕವಿಲ್ಲವೆಂದು ಜಗದಲಪುರಕ್ಕೆ ಮರಳಿದೆ. ಅಲ್ಲಿಯ ವೇಳಾಪತ್ರಿಕೆಯನ್ನು ವಿವರವಾಗಿ ಅಭ್ಯಸಿಸಿದಾಗ ಬಾರಸೂರಿಗೆ ಒಂದು ವಾಹನ ಹೋಗುತ್ತದೆ ಎಂದು ತಿಳಿದು ಬಹಳ ಸಂತೋಷವಾಯಿತು. ಆದರೆ ಅದು ಆವೇಳೆಗೆ ಹೊರಟು ರಾತ್ರಿ ತಲುಪುವದು ಎಂದು ಗೊತ್ತಾಯಿತು. ಬೇರೆ ಏನಾದರೂ ವಾಹನವಿದೆಯೇ ಎಂದು ವಿಚಾರಿಸಿದಾಗ ಬಿಲಾಡಿಲಾಗೆ (ಕಬ್ಬಿಣದ ಅದಿರು ತೆಗೆಯುವ ಸ್ಥಳ) ಹೋಗುವ ಬಸ್ಸಿನಲ್ಲಿ ಗೀದವರ್‌ಗೆ ಹೋದರೆ ಅಲ್ಲಿಂದ ಬಾರಸೂರ್ ತಲುಪಲು ಸಾರಿಗೆ-ವ್ಯವಸ್ಥೆ ಇದೆಯೆಂದು ಅಧಿಕಾರಿಯೊಬ್ಬ ವಿವರಿಸಿದ.

ಗೀದವರ್‌ದಲ್ಲಿ ಇಳಿದು ಬಾರಸೂರಿಗೆ ಹೊರಟ ಪ್ರಯಾಣಿಕನೊಬ್ಬನಿಗೆ ವಾಹನ-ಸೌಕರ್ಯದ ಬಗ್ಗೆ ವಿಚಾರಿಸಿದಾಗ ಅವನು ನಕ್ಕು, "ಬಾಬೂಜಿ, ಯಾವುದೋ ಜನ್ಮದ ಪುಣ್ಯದಿಂದ ಒಂದು ಬಸ್ಸು ಬೆಳಿಗ್ಗೆ ಬಾರಸೂರನಿಂದ ಹೊರಟು ಜಗದಲಪುರಕ್ಕೆ ಬರುತ್ತದೆ. ಅದೇ ವಾಹನ ರಾತ್ರಿ ಬಾರಸೂರಿಗೆ ಹಿಂತಿರುಗುತ್ತದೆ. ವ್ಯಾಪಾರಿಗಳಿಗೆ, ಕೋರ್ಟು-ಕಚೇರಿಗಳಿಗೆ, ಸಂತೆಗೆ ಹೋಗುವವರಿಗೆ ಇದೇ ಜೀವನಾಡಿ. ಬಸ್ಸಿನಲ್ಲಿ ಕುರಿಹಿಂಡಿನಂತೆ ಕಿಕ್ಕಿರಿದು ಪ್ರಯಾಣಿಕರು ತುಂಬಿದ ಮೇಲೆ ಯಾರಿಗೂ ತಿಕೀಟು ಕೊಡದೇ ಬಂದ ಹಣವನ್ನೆಲ್ಲ ಕಂಡಕ್ಟರ್ ಡ್ರಾಯವರರು ಸ್ವಾಹಾಮಾಡುತ್ತಿದ್ದುದರಿಂದ, ಪ್ರಯಾಣಿಕರೇ ಇಲ್ಲದೇ ಲೈನು

ಲುಕ್ಸಾನಿನಲ್ಲಿ ನಡೆದಿದೆಯೆಂದು ನಂಬಿ, ಸರಕಾರ ಇದನ್ನು ನಿಲ್ಲಿಸುವದರಲ್ಲಿ ಇತ್ತು. ಊರವರೆಲ್ಲ ಒಂದಾಗಿ ಅಧಿಕಾರಿಗಳನ್ನು ಕಂಡು ಹಳೆ ಕಂಡಕ್ಟರನನ್ನು ವರ್ಗಾಯಿಸಿ, ಹೊಸ ಕಂಡಕ್ಟರನಿಗೆ ಅರ್ಧ ಜನರಿಗಾದರೂ ತಿಕೀಟು ಕೊಡುವಂತೆ ಬೆದರಿಕೆ ಹಾಕಿದ್ದರಿಂದ, ಈಗ ನಿಮ್ಮಂತಹ ಸಜ್ಜನರು ನಮ್ಮ ಊರಿಗೆ ಬರುವಂತಾಗಿದೆ" ಎಂದು ಹೇಳುತ್ತಿದ್ದಂತೆ, ಯಾರೋ ಒಬ್ಬಾತ, ರಾಜಕಾರಣಿಯಂತೆ ಘಂಟಾಘೋಷವಾಗಿ ಭಾಷಣ ನಡೆಸಿದ್ದರಿಂದ ಎಲ್ಲರ ಲಕ್ಷ್ಯ ಅವನತ್ತ ಹರಿಯಿತು. ಅಂದಿನ ವೃತ್ತಪತ್ರಿಕೆಗಳು "ರಾಷ್ಟ್ರಪತಿ ಫಕರುದ್ದೀನ ಅಲಿ ಅಹ್ಮದರು ಹೃದಯ ವಿಕಾರದಿಂದ ಕೊನೆಯುಸಿರು ಎಳೆದರು" ಎಂದು ಸಾರಿದ್ದವು. ಅಂತೆಯೇ, ಅದೇ ವಿಷಯವನ್ನು ಅರಿಸಿಕೊಂಡ ಭಾಷಣಕಾರ "ದೇಶದ ರಾಷ್ಟ್ರಪತಿ ಸತ್ತನೆಂದು ಅಂಗಡಿಗಳನ್ನೆಲ್ಲ ಮುಚ್ಚಬೇಕಂತೆ. ಅವರು ಸತ್ತರೆ ನಮಗಾದ ಹಾನಿ ಅಷ್ಟರಲ್ಲೇ ಇದೆ. ಅವರು ನಮಗೆ ಕೊಟ್ಟಿದ್ದಾದರೂ ಏನು? ತಾನು ಜೊತೆಗೆ ಒಯ್ದದ್ದಾದರೂ ಏನು? ನೀವು ಮಾತ್ರ ಹಾಗೇಯೇ ಹೋಗಬೇಕಾಗಿಲ್ಲ; ನಾನಿಲ್ಲವೇ? ನಿಮಗೆ ಏನೇನು ಬೇಕೋ ಹೇಳಿ, ಅನುಗ್ರಹಿಸುತ್ತೇನೆ." ಎಂದಾಗ ಹತ್ತಿರ ನಿಂತ ಯುವಕನು ಕಿಸಕ್ಕನೆ ನಕ್ಕು, "ನನಗೊಂದು ಸೆರೆಯ ಬಾಟ್ಲಿ..." ಎನ್ನುತ್ತಿದ್ದಾಗ, ಭಾಷಣಕಾರನು ರೇಗಿ, ಅವನನ್ನು ಹೊಡೆಯ ಹೋದ. ಯುವಕನು ಕಂಬಿ ಕಿತ್ತ. ಅವನನ್ನು ಹಿಂಬಾಲಿಸುತ್ತಿದ್ದಾಗ ಭಾಷಣಕಾರ, ತನ್ನ ಚಪ್ಪಲಿ ಹರಿದು ಹೋಗಿ ದೊಪ್ಪನೆ ಬಿದ್ದ. ಬಟ್ಟೆಯೆಲ್ಲ ಮಣ್ಣಾಗಿ, ಕೈಕಾಲು ನೋವುಮಾಡಿಕೊಂಡು ಎಡವಿದವನು ಎದ್ದು ನಿಲ್ಲಲು ಯತ್ನಿಸುತ್ತಿದ್ದಾಗ, ಜೊತೆಗಿದ್ದವನು "ಅವನು ಆ ಅಂಗಡಿಯ ಮಾಲಕ, ವಾರದಲ್ಲಿ ಒಂದೆರಡು ಸಲ ಕುಡಿದು, ಅಮಲೇರಿದಾಗ ಯಾವ ರಾಜಕಾರಣಿಯನ್ನೂ ಹಿಂದೆ ಹಾಕುವಂತೆ ಭಾಷಣಮಾಡುತ್ತಾನೆ. ಉಳಿದ ದಿನಗಳಲ್ಲಿ ಅವನಷ್ಟು ಸಾಧುಪ್ರಾಣಿ ಬೇರೊಬ್ಬನಿಲ್ಲ" ಎಂದು ವಿವರಿಸಿದ.

ಸಮಯ ಕಳೆಯಲು ಚಹಾ ಕುಡಿದಾಯಿತು. ಹಜಾಮತಿ ಮಾಡಿಸಿಕೊಂಡಾಯಿತು. ಜನರು ಬಂದರು. ಎಷ್ಟೋ ಬಸ್ಸುಗಳು ಪ್ರಯಾಣಿಕರನ್ನು ಹೊತ್ತುಕೊಂಡು ಹೊರಟವು. ಆದರೆ ನಮ್ಮನ್ನು ಒಯ್ಯುವ ಯಾವ ವಾಹನವೂ ಬರಲಿಲ್ಲ. ಪ್ರಯಾಣಿಕರು ಹೊರೆಹೊರೆ ಸಾಮಾನಿನೊಂದಿಗೆ ಆರುಗಂಟೆಗೇ ಬಂದು ಕುಳಿತರೆ, ಎಂಟಾದರೂ ಬಸ್ಸು ಬಾರದ್ದರಿಂದ ಆತಂಕಗೊಂಡರು. ಕೊನೆಗೊಮ್ಮೆ 'ಬಾರಸೂರ್' ಬೋರ್ಡು ಹೊತ್ತ ಮುಂದಗಾಮಿಯೊಂದು

ಬಂದಾಗ ಎಲ್ಲರೂ ಧಾವಿಸಿದರು. 'ಬಿಡಲು ಅರ್ಧ ತಾಸಿದೆ' ಎಂದು ಕಂಡಕ್ಟರ ನೆಂದಾಗ, ಏರಿ ಸ್ಥಳ ಹಿಡಿಯುವೆವು ಎಂದು ಒತ್ತಾಯ ತಂದಾಗ, "ಮೊದಲು ದಂತೇವಾಡಾಕ್ಕೆ ಹೋಗಿಬಂದು ಆನಂತರ ಬಾರಸೂರಕ್ಕೆ ಹೋಗುವದು" ಎಂದು ಎಲ್ಲರ ಉತ್ಸಾಹಕ್ಕೆ ತಣ್ಣೀರು ಎರಚಿದ. ನಂತರ ಒಂದು ತಾಸಿಗೆ ಬಂದು ಬಸ್ಸು-ಸವಾರಿಗಳನ್ನು ಹೊತ್ತು ಕಗ್ಗತ್ತಲಿನಲ್ಲಿ ಕಾಡುಹಾದಿ ತುಳಿಯುತ್ತ, ಧೂಳು ಹಾರಿಸುತ್ತ ಹೊರಟಾಗ, ಬಾರಸೂರ ಸೇರಬಹುದು ಎಂದು ಧೈರ್ಯ ತಂದುಕೊಳ್ಳುವಷ್ಟರಲ್ಲಿ ಹಿಂದಿನ ಗಾಲಿ, ಗಾಳಿಯನ್ನು ಬಿಟ್ಟು ಚಪ್ಪಟೆಯಾಯಿತು. ಹೆಚ್ಚಿನ ಟಾಯರು, ಸಲಕರಣೆಗಳು ಇಲ್ಲದ್ದರಿಂದ ಹಿಂದಿನ ಒಂದೇ ಟಾಯರ ಮೇಲೆ ಮೋಟಾರು ಓಡಲಾರಂಭಿಸಿತು. ಹೇಗಾದರಾಗಲಿ ಆ ಊರು ಸೇರು ವಂತಾದರೆ, ಊಟ-ನಿದ್ರೆಗಳನ್ನಾದರೂ ಅಲ್ಲಿ ಮುಗಿಸಬಹುದು ಎಂದುಕೊಂಡೆ.

ಕಾಡಿಗಿಂತ ದಟ್ಟವಾದ ಕಗ್ಗತ್ತಲೆ ಆವರಿಸಿದ ಕಗ್ಗಳ್ಳಿಗೆ ಬಸ್ಸು ಬಂದು ನಿಂತಾಗ, ಗಾಬರಿಯಾಯಿತು. ಹಳ್ಳಿಗೆ, ಇದ್ದ ಒಂದೇ ಒಂದು ಚಹಾದಂಗಡಿಗೆ 'ಸರದಾರಜಿ-ಹೊಟೇಲ್' ಎಂದು ಹೆಸರು ಹೇಗೆ ಬಂದಿತೆಂದು ತಿಳಿಯುತ್ತಿಲ್ಲ. ಅವರ ವ್ಯವಸ್ಥಾಪಕ-ಕೆಲಸಗಾರ ಸರದಾರಜಿಯಾಗಿರಲಿಲ್ಲ. ಸರದಾರಜಿಯ ಕೆಚ್ಚೆದೆಯೂ ಅವನಿಗಿರಲಿಲ್ಲ. ಚಹಾ-ಊಟ-ವಸತಿಗಳು ಏನು ಬೇಕಾಗಿದ್ದರೂ ಅವನೇ ದಾತಾ, ಗೋಡೆಗಳಿಲ್ಲದೇ ಕಂಬಗಳ ಮೇಲೆ ನಿಂತ ಮಾಡೇ ಬಾರಸೂರಿಗೆ ಬರುವ ಆಗಂತುಕರಿಗೆ ಆಧಾರವಾಗಿತ್ತು. ರಾತ್ರಿಯನ್ನು ಈ "ಹವಾಮಹಲಿ"ನಲ್ಲಿ ಕಳೆಯಬಹುದೇ? ಎಂದು ವಿಚಾರಿಸಿದಾಗ, "ಪ್ರೇಮದಿಂದ ಕಳೆಯಿರಿ" ಎಂದು ಚುಟುಕಿನ ಉತ್ತರ ಕೊಟ್ಟು ಬೇರೆ ಕೆಲಸಕ್ಕೆ ಹೋದ "ಹೊಟೇಲ್" ಮಾಲಕ.

ಜಗದಲಪುರದಿಂದ ಬಸ್ಸು ಬಂದಿತೆಂದರೆ, ಊರಿಗೆ ಹೊಸ ಜೀವಕಳೆ ಬಂದಂತೆ. ಡ್ರಾಯವರ-ಕಂಡಕ್ಟರರು ಕುಳಿತ ಮುರುಕು-ಬೆಂಚಿನ ಸುತ್ತ ಹಳ್ಳಿಯ ಹಿರಿಯರು ಸೇರಿದರು. ಅಂದಿನ ಆಗುಹೋಗುಗಳ ವಿಚಾರವಿನಿಮಯ ಪ್ರಾರಂಭವಾಯಿತು. ಅಂದಿನ ಬಸ್ತರನಾರ್ ಸಂತೆಯಲ್ಲಿ ಪೋಲಿಸರಿಗೆ ಬೆದರದ ಪೋಲಿಗಳು, ಆದಿವಾಸಿಗಳನ್ನು ಹೇಗೆ ಸುಲಿದರು ಎಂಬ ಮಾತು ಬಂದಿತು. ಚಾ-ಅಂಗಡಿಕಾರ, "ಈ ಪೋಲಿಸಿನವರು ಯಾರನ್ನು ಹಿಡಿಯಬೇಕೋ ಅವರನ್ನು ಬಿಟ್ಟು, ಪಾಪ, ಸಂಭಾವಿತರನ್ನು ಪೀಡಿಸುವದರಲ್ಲಿ ಹೆಸರುವಾಸಿಯಾಗಿದ್ದಾರೆ. ಸರಕಾರವೇ, ಆದಿವಾಸಿಗಳಿಗೆ ತಂತಮ್ಮ ಸೆರೆಯನ್ನು ತಾವೇ ತಯಾರಿಸಿ ಸೇವಿಸಲು

ಅನುಮತಿಕೊಟ್ಟಿರುವಾಗ ಪೋಲಿಸಿನವರು ಅವರನ್ನು ಹಿಂಸಿಸುವದೇಕೆ? ಸೇಂದಿ-ಕಾಂಟ್ರ್ಯಾಕ್ಟರರು ಲಂಚ ಕೊಟ್ಟು ಅವರನ್ನು ಬಡ ಆದಿವಾಸಿಗಳ ಮೇಲೆ ಛೂಬಿಡುತ್ತಾರೆಂದು ಬೇರೆ ಹೇಳಬೇಕೇ? ಅಗೊಮ್ಮೆ ಈಗೊಮ್ಮೆ ಅವರು ಕುಡಿದರೆ ಇವರ ಅಪ್ಪನ ಗಂಟೇನು ಹೋಯಿತು? ಇಲ್ಲವೇ ಉಪ್ಪು, ಎಣ್ಣೆಯ ಖರ್ಚಿಗೆಂದು ಸ್ವಲ್ಪ ಸೆರೆ ಮಾರಿದರೂ ಯಾರಿಗೆ ತಾನೆ ಎಷ್ಟು ಹಾನಿಯಾದೀತು? ಇಂದು ಆದಿವಾಸಿಗಳು ಪೋಲಿಸರಿಗೆ ಒಳ್ಳೆಯ ಪಾಠ ಕಲಿಸಿದರು. ಕಳ್ಳ-ಸೆರೆ ಹಿಡಿಯುವ ನೆವದಿಂದ ಅವರ ಗುಡಿಸಲ ಮೇಲೆ ದಾಳಿಮಾಡಿದಾಗ, ಅನಿರೀಕ್ಷಿತ ವಾಗಿ ಬಿಲ್ಲು-ಬಾಣಗಳಿಂದ ಅವರನ್ನು ಸ್ವಾಗತಿಸಲು ಬಂದರು. ಗಾಬರಿಯಾದ ಪೋಲಿಸರು ಹೆದರಿಸಲು ಆಕಾಶದಲ್ಲಿ ಗುಂಡುಹಾರಿಸಿದರು. ಆಗ ರೊಚ್ಚಿಗೆದ್ದ ಆದಿವಾಸಿಗಳು ಬಾಣಗಳಿಂದ ಮೂವರು ಪೋಲಿಸರಿಗೆ ಗಾಯಮಾಡಿದರೆ ಇದಕ್ಕೆ ಪ್ರತ್ಯುತ್ತರವಾಗಿ ಅವರ ಗುಂಡಿನಿಂದ ನಾಲ್ವರು ಆದಿವಾಸಿಗಳನ್ನು ಕೆಡವಿ ಗಾಯಾಳುಮಾಡಿದ್ದಾರಂತೆ..." ಎಂದು ಹೇಳುತ್ತಿದ್ದಂತೆ, ಗಿರಾಕಿಗಳು ಚಹಕ್ಕೆ ಹೇಳಿದ್ದರಿಂದ ಅಲ್ಲಿಗೆ ಧಾವಿಸಿದ.,

ಆ ಅವೇಳೆಯಲ್ಲೂ ಡ್ರ್ಯಾಯವರ್, ಕಂಡಕ್ಟರ್, ಕೊತವಾಲ, ಪಟೇಲರು ಚಹಾ ಬೇಕೇ ಎಂದಾಗ ಬೇಡವೆನ್ನಲಿಲ್ಲ. ಪ್ರತಿಸಲ ಗಿರಾಕಿಗಳಿಗೆ ಚಹಾ ಮಾಡಿ ದಾಗ ಅಂಗಡಿಕಾರನೂ ಕುಡಿಯುವ ರೂಢಿ ಇಟ್ಟುಕೊಂಡಂತೆ ಅನಿಸಿತು. ಪಾನ್ ಖರೀದಿಸಲು ಬರುವವರಿಗೆ, ಕಳ್ಳಸೆರೆ ಕುಡಿಯಬಂದವರಿಗೂ ಅಲ್ಲಿ ಕೊರತೆಯಿರಲಿಲ್ಲ. ಹತ್ತಿರದ ಗುಡಿಸಲಿನಲ್ಲಿ ಆಶ್ರಯ ಪಡೆದ, ನಿರಾಶ್ರಿತ ಬಂಗಾಲಿಗಳು ನಾಲ್ಕಾರು ಜನ ಕಲಕತ್ತೆಯಲ್ಲಿ ಬಿಟ್ಟು ಬಂದ ಕಾಲೀಮಾತೆಯ ನೆನಪಿಗೆ ಭಜನೆ ನಡೆಸಿದ್ದರು. ಆ ಕತ್ತಲೆಯಲ್ಲೂ ಜೋರಾಗಿ ಮಾತನಾಡುತ್ತ, ಇರುವೆ-ಸಾಲುಗಳಂತೆ, ಗಂಡಸರು, ಹೆಂಗಸರು, ಮುದುಕರು ಬರಲಾರಂಭಿಸಿ ದಾಗ ಅಂಗಡಿಕಾರನು, "ಇಂದು ದೇವಿಯ ಭಾರ ಜೋರಾಗಿದೆಯಂತ ಕಾಣು ತ್ತದೆ. ತುಂಬ ಜನ ತಮ್ಮ ಸಮಸ್ಯೆಗೆ ಪರಿಹಾರ ಕೇಳಲು ಹೋಗಿದ್ದರು. ಬಹುಶಃ ಶಿವರಾತ್ರಿಯ ಜಾತ್ರೆ ಎಲ್ಲಿ? ಹೇಗೆ? ನಡೆಯಬೇಕೆಂದು ವಿಚಾರಿಸಿರಬೇಕು" ಎಂದು ಸ್ವಗತ ಎಂಬಂತೆ ಮಾತನಾಡಿದ.

ಕಣ್ಣು ಕೂರಲಾರಂಭಿಸಿದಾಗ, "ನಿಮಗೆ ಏನು ಅಡಿಗೆ ಮಾಡಲಿ?" ಎಂದು ಕೇಳಿದ ಪ್ರಶ್ನೆಗೆ, "ಏನಾದರೂ ನಡೆದೀತು" ಎಂದು ಉತ್ತರಿಸಿದಾಗ, ಬೆಂಕಿಗೆ

ಇನ್ನೆರಡು ಕೊರಡು ಸೇರಿಸಿದ. ಸುತ್ತಮುತ್ತಲಿನ ದಟ್ಟಕಾಡಿನಿಂದಾಗಿ ಕಟ್ಟಿಗೆಗೆ ಬರಗಾಲವಿರಲಿಲ್ಲ. ಧಗಧಗ ಉರಿಯುತ್ತಿದ್ದ ಬೆಂಕಿಯ ಶಾಖ ಪಡೆಯಲು ಜನರು ಬಂದುಹೋಗುತ್ತಿದ್ದರು. ಒಬ್ಬ ಅತಿಥಿಗೆ ರೋಟಿ-ಪಲ್ಯ ಮಾಡಲು ಐವತ್ತು ಜನರಿಗೆ ಅಡಿಗೆ ಮಾಡಲು ಉರಿಸುವಷ್ಟು ಸೌದೆ ಬಳಸಿದ್ದ. ಮಧ್ಯರಾತ್ರಿಯ ಹೊತ್ತಿಗೆ ಊಟಮಾಡಿ ಅವನು ಕೊಟ್ಟ ಚಾರಪಾಯಿಯ ಮೇಲೆ ವಿರಮಿಸಿದಾಗ ಹಾಯೆನಿಸಿತು. ಮಾಲಕನು ಒಲೆಯ ಕಟ್ಟೆಯ ಮೇಲೆಯೇ ಮಲಗಿ ಸುಖನಿದ್ರೆಯನ್ನು ಅಪ್ಪಿದ. ನಾಲ್ಕೂದಿಕ್ಕುಗಳಿಂದ ಒಳ್ಳೆ ತಂಗಾಳಿ ಬೀಸಲಾರಂಭಿಸಿ ಆ ಚಳಿಯಿಂದ ಎಚ್ಚರವಾಯಿತು. ಬೆಚ್ಚಗಿರಬಹುದೆಂದು ಒಲೆಯ ಹತ್ತಿರ ಹೋದರೆ, ತಾಯಿ-ನಾಯಿಯೊಂದು ತನ್ನ ಸಂತಾನದೊಂದಿಗೆ ಬೆಚ್ಚಗಿನ ಬೂದಿಯಲ್ಲಿ ಮಲಗಿತ್ತು. ಆಗಂತುಕನೊಡನೆ ಸ್ಪರ್ಧಿಸುವ ಮನಸ್ಸಿಲ್ಲದಿದ್ದರಿಂದ, ಸಂಸಾರದೊಂದಿಗೆ ಕಾಲಿಗೆ ಬುದ್ಧಿ ಹೇಳಿತು. ಕಾವಿಗಾಗಿ ಮೂಕಪ್ರಾಣಿಯೊಂದಿಗೆ ಸ್ಪರ್ಧಿಸಬೇಕಾಯಿತಲ್ಲ ಎಂದು ಮರುಗುತ್ತ ಚಾರಪಾಯಿಯನ್ನು ಅತ್ತ ಸರಿಸಿ, ಕೈಕಾಲು ಒಲೆಯ ಹತ್ತಿರ ಹಿಡಿದು ಕಾಯಿಸಿಕೊಂಡೆ. ಶ್ವಾನಪರಿವಾರ ಚಳಿ ತಾಳಲಾರದೇ ತಿರುಗಿ ಒಲೆಯ ಹತ್ತಿರ ಬಂದಿದ್ದರಿಂದ ನೆಮ್ಮದಿಯಾಯಿತು. ಹೇಗಾದರೂ ಉಳಿದ ರಾತ್ರಿಯನ್ನು ಕಳೆಯಲೇಬೇಕಾಗಿತ್ತು. ಧರಿಸಿದ ಕೆಲವೇ ಬಟ್ಟೆಗಳು ಮೈಗೆ ಗಟ್ಟಿಯಾಗಿ ಬಿಗಿಯುವಂತೆ ಮುದುಡಿಯಾಗಿ ಮಲಗಿದೆ. ಅದೆಂತಹ ಮೈಕೊರೆಯುವ ಚಳಿಯದು!

ಹತ್ತಿರದ ಕಾಡಿನಲ್ಲಿ ಪ್ರಾತರ್ವಿಧಿಗಳನ್ನು ಮುಗಿಸಿ, ಸರೋವರದಿಂದ ಚಂಬು, ಕೊಡಗಳಲ್ಲಿ ನೀರು ತುಂಬಿಕೊಂಡು ಗೃಹಾಭಿಮುಖವಾಗಿ ಹೊರಟ ಹೆಂಗಳೆಯರ ಮೆಲುಮಾತು, ಕಿಲಿಕಿಲಿ ನಗುಗಳು, ಪಕ್ಷಿಕೂಜನ, ನಸುಕಾಯಿತೆಂದು ಸಾರಿದವು. ಮುಂಜಾನೆಯ ಚಟುವಟಿಕೆಗೆ ಅದೇ ಸರೋವರ, ಊರಿಗೆ ಬಚ್ಚಲು, ಕಕ್ಕಸ, ಬಾವಿಯೂ ಆಗಿದೆ ಎಂದು ತಿಳಿಯಿತು. ಎತ್ತರವಾಗಿ ಬೆಳೆದು ನಿಂತ ಮರಗಳ ಅಡಿಯಿಂದ, ಅರ್ಧಮೈಲು ನಡೆದಾಗ ಪ್ರಶಾಂತವಾದ ಸರೋವರ ತುಂಬ ಚೆಲುವಾಗಿ ಕಂಡಿತು. ತಮ್ಮನ್ನು ಯಾರಾದರೂ ಕದ್ದು ನೋಡುತ್ತಿದ್ದಾರೆಯೋ ಎಂದು ನಾಚುತ್ತ ದಂಡೆಯ ಮೇಲೆ ನಿಂತ ಮರಗಳ ನಗ್ನ-ಪಡಿನೆಳಲು ತುಂಬ ಆಕರ್ಷಕವಾಗಿತ್ತು. ನೀರಿನಲ್ಲಿ ಎಷ್ಟೋ ಹೆಂಗಳೆಯರು ಇಳಿದು ಸ್ನಾನ ಮಾಡುತ್ತಿದ್ದರು. ಮಧ್ಯವಯಸ್ಕಳಾದ ಗೃಹಿಣಿಯೊಬ್ಬಳು ಸರೋವರವನ್ನು

ಧೋಬಿ-ಘಾಟವಾಗಿ ಮಾಡಿ ರಾಶಿ ಕೊಳೆಯಹಾದ ಬಟ್ಟೆಗಳ ಸಫಾಯಿ ನಡೆಸಿದ್ದಳು. ಪುರುಷರಿಗೆ ಮೀಸಲಾದ ಸ್ಥಳಕ್ಕೆ ಹೋಗಿ ಆದಿವಾಸಿಯಂತೆಯೇ ಮಿಂದಾಗ ಹಾಯೆನಿಸಿತು. ಹಿಂತಿರುಗುತ್ತಿದ್ದಾಗ, ಮೈ ಕೊರೆಯುವ ಚಳಿಯಲ್ಲೂ ಮರವನ್ನೇ ಆಶ್ರಯವನ್ನಾಗಿ ಮಾಡಿಕೊಂಡು, ಬಯಲಿನಲ್ಲಿ ಮಲಗುವವರೂ ಇದ್ದಾರೆಂದು ನೋಡಿ ಆಶ್ಚರ್ಯವಾಯಿತು.

ಊರ ತುಂಬ ಶಿಲ್ಪಗಳು, ದೇವಾಲಯಗಳು ಇವೆಯೆಂದು ಎಲ್ಲರೂ ಒಪ್ಪಿದರೂ, ಅವುಗಳ ಬಗ್ಗೆ ಖಚಿತವಾದ ಮಾಹಿತಿ ಯಾರಿಂದಲೂ ಪಡೆಯು ಲಾಗಲಿಲ್ಲ. ಹೀಗಾಗಿ ಹಳ್ಳಿಗನೊಬ್ಬನನ್ನು ಮಾರ್ಗದರ್ಶಕನಾಗಿ ಪಡೆದು ಹೊರಟೆ. ಹಾಳುಬಿದ್ದ ಚಿಕ್ಕದೇವಾಲಯದ ಪ್ರಾಕಾರದ ಮೇಲೆ ಒಂದೆರಡು ಕಾಮಕ್ರೀಡೆಯ ಶಿಲ್ಪಗಳಿದ್ದರೂ ಅವುಗಳಲ್ಲಿ ಅಶ್ಲೀಲವೆಂದು ತೋರು ವಂತಹದು ಏನೂ ಇರಲಿಲ್ಲ. ಗುಡಿಯ ಬಳಿ ಪೌಳಿಯಲ್ಲಿ ಎಲ್ಲ ಕಡೆಯಿಂದಲೂ ತಂದು ರಾಶಿ ಹಾಕಿದ ಶಿಲ್ಪಗಳಿವೆ. ಅವು ವೈಶಿಷ್ಟ್ಯಪೂರ್ಣವಾಗಿದ್ದು, ರಚನೆಯಲ್ಲಿ ದಕ್ಷಿಣ-ಸಂಪ್ರದಾಯದ ಛಾಯೆ ಎದ್ದುಕಾಣಿಸುತ್ತಿತ್ತು. ಹೆಚ್ಚಿನವು ದೇವಾಧಿ ದೇವತೆಗಳ ಶಿಲ್ಪಗಳಿದ್ದರೂ, ಸಾಮಾಜಿಕ-ಜೀವನ-ಚಿತ್ರಿಸುವಂತಹವೂ ಇವೆ. ದಂಪತಿಗಳು ಬಟ್ಟಲಿನಿಂದ ಸೆರೆ ಸೇವಿಸುವದರಿಂದ ಹಿಡಿದು ಶ್ವಾನ-ಮಾನವ ಸಂಭೋಗವನ್ನು ತೋರಿಸುವಂತಹವೂ ಇವೆ. 'ಮಾಮಾ-ಭಾಚಾ' ದೇವಾಲಯ ಗಳು ಒಂದು ಕಾಲ ಜೋಡಿಯಾಗಿ ನಿಂತರೂ, ಇಂದು ಮಾಮಾ ದೇವಾಲಯ ಸಂಪೂರ್ಣ ನಾಶವಾಗಿ, ಅದರಲ್ಲಿಯ ಪೂಜಾವಿಗ್ರಹ ಹತ್ತಿರದ ಕೆರೆಯಲ್ಲಿದೆ ಯಂತೆ. ಭಾಚಾ ದೇವಸ್ಥಾನ ಮಾತ್ರ ತನ್ನ ಅಸ್ತಿತ್ವ ಕಾದುಕೊಂಡಿದೆ. ಅದನ್ನು ನೋಡಿದಾಗ ಬಾದಾಮಿ ಚಾಲುಕ್ಯರ ಪಟ್ಟದಕಲ್ಲಿನ ವಾಸ್ತುಶಿಲ್ಪ ಕಣ್ಣೆದುರಿಗೆ ಬರುತ್ತದೆ. ಮೆಟ್ಟಿಲ ಹತ್ತಿರ ನಿಲ್ಲಿಸಿದ ಶಿಲಾಶಾಸನ ಹಳೇ ಕನ್ನಡ-ಲಿಪಿಯಲ್ಲಿ ಇದ್ದದ್ದು ನೋಡಿ, ನಮ್ಮವರು ಇಲ್ಲಿಯೂ ತಮ್ಮ ವಿಜಯಪತಾಕೆ ಹಾರಿಸಿದ್ದ ರೆಂದು ತಿಳಿದು ಹೆಮ್ಮೆಯೆನಿಸಿತು. ಹಾಳುಬಿದ್ದ ಶಿವಾಲಯದ ಕಂಬಗಳೂ ದಕ್ಷಿಣ-ಶೈಲಿಯನ್ನು ನೆನಪಿಗೆ ತರುತ್ತವೆ. ಈ ದೇವಾಲಯದ ಇಪ್ಪತ್ತನೇ ಕಂಬದಲ್ಲಿ ವಜ್ರವೈಡೂರ್ಯಗಳಿವೆ ಎಂದು ಜನ ಇಂದಿಗೂ ನಂಬುತ್ತಾರೆ. ಆದರೆ ಯಾವ ಕಂಬದಿಂದ ಎಣಿಸಲು ಪ್ರಾರಂಭಿಸಬೇಕೆಂದು ತಿಳಿಯದ್ದರಿಂದ ಆ ಸೊತ್ತು ಹಾಗೆಯೇ ಉಳಿದುಕೊಂಡಿದೆಯಂತೆ ! ಇನ್ನೊಂದು ದೇವಾಲಯ

ದಲ್ಲಿ ಹಂಪೆಯ ಕಡಲೆ ಮತ್ತು ಸಾಸಿವೆಕಾಳು ಗಣಪತಿಯನ್ನು ಹೋಲು ವಂತಹ ಬೃಹತ್ ಕೃತಿಗಳನ್ನು ಕಟೆದು ನಿಲ್ಲಿಸಲಾಗಿದೆ. ಗಣೇಶನ ನೂರಾರು ಭಂಗಿಗಳನ್ನು ಶಿಲ್ಪದಲ್ಲಿ ನೋಡಬೇಕಿದ್ದರೆ ಬಾರಸೂರಿಗೆ ಬರಬೇಕು. ಹಿಂದೆ ಕಟ್ಟಿದ ದೇವಾಲಯಗಳು ನಾಶವಾದ್ದರಿಂದ ಮನೆಯಂತಹ ಕಟ್ಟಡದಲ್ಲಿ, ಲಕ್ಷ್ಮಿ, ವಿಷ್ಣು, ಮಹಿಷಾಸುರಮರ್ದಿನಿಯರ ಮೂರು ಭವ್ಯವಿಗ್ರಹಗಳನ್ನು ಇಟ್ಟಿದ್ದಾರೆ. ಅಲ್ಲದೇ ಹೊರಾಂಗಣದಲ್ಲಿ ಚಿಕ್ಕ-ದೊಡ್ಡ ಅನೇಕ ವಿಗ್ರಹಗಳನ್ನು ಒಟ್ಟಿದ್ದಾರೆ. ಇವುಗಳನ್ನೇ ಆಳವಾಗಿ ಅಭ್ಯಸಿಸಿ, ಗ್ರಂಥವೊಂದನ್ನು ಬರೆದರೆ, ಯಾವ ವಿಶ್ವವಿದ್ಯಾಲಯವೂ ಡಾಕ್ಟರೇಟು-ಪದವಿ ಕೊಡುವಷ್ಟು ವಿಷಯ ಸಂಗ್ರಹವಿದೆ.

ಹಳ್ಳಿಯ ಜನ ಅಲ್ಲಿ ಇಲ್ಲಿ ಬಿದ್ದ ವಿಗ್ರಹಗಳನ್ನು ಮರದಡಿಯಲ್ಲಿಯೋ, ಕಟ್ಟೆಯೊಂದರ ಮೇಲೋ ಕೂಡಹಾಕಿ ತಮ್ಮವೇ ಆದ ಪೂಜಾಸ್ಥಾನಗಳನ್ನು ನಿರ್ಮಿಸಿಕೊಂಡಿದ್ದಾರೆ. ಇವುಗಳಲ್ಲಿ ಹತ್ತರಿಂದ ಐವತ್ತು ಇದ್ದಂತೆ, ಹತ್ತನೆಯ ಶತಮಾನದಿಂದ ಇತ್ತೀಚಿನ ಕೃತಿಗಳೂ ಸೇರ್ಪಡೆಯಾಗಿವೆ. ಅವುಗಳನ್ನೆಲ್ಲ ಭದ್ರವಾಗಿ ಒಂದೇ ಕಟ್ಟಡದಲ್ಲಿ ಇರಿಸುತ್ತೇವೆಂದು ಪ್ರಾಚ್ಯವಸ್ತು-ಇಲಾಖೆಯವರು ಹೇಳಿದರೂ ಸ್ಥಳೀಯರು, ಇದ್ದ ವಿಗ್ರಹಗಳಿಗೆ ಒಂದೊಂದು ದೇವಸ್ಥಾನ ಕಟ್ಟಬೇಕು, ಇಲ್ಲದಿದ್ದರೆ ಅವನ್ನು ಇದ್ದಲ್ಲಿಂದ ತೆಗೆಯುವದು ಬೇಡ ಎಂದು ಪಟ್ಟು ಹಿಡಿದದ್ದರಿಂದ, (ದೇವತಾ)ವಿಗ್ರಹಗಳಿಗೆಲ್ಲ ದೇವರೇ ಗತಿ! ಎಂದು ತೆರೆದ ಮೈದಾನಿನಲ್ಲಿ ಬಿದ್ದಿವೆ. ಇದಾಗಲೇ ಎಷ್ಟು ಕೃತಿಗಳು ವಿಗ್ರಹ-ಚೋರರ ಸೊತ್ತಾಗಿವೆಯೋ ಏನೋ! ಈ ಸ್ಥಳದಲ್ಲಿ ಶಿವರಾತ್ರಿಗೊಮ್ಮೆ ಜಾತ್ರೆ ಸೇರು ವದರಿಂದ ಅವುಗಳಿಗೆ ಶಿವರಾತ್ರೆ-ದೇವಾಲಯಗಳೆಂದು ಹೆಸರು. ದಿನಂಪ್ರತಿ ಹಳ್ಳಿಗರು ಬಂದು ಸ್ಥಳ ಗುಡಿಸಿ, ಹೂವು-ಪತ್ರೆಗಳನ್ನೇರಿಸಿ ಹೋಗುತ್ತಾರೆ.

ಇಂಥ ಅಪೂರ್ವ-ಶಿಲ್ಪಗಳು ಬಾರಸೂರನಲ್ಲಿದ್ದರೂ, ಆದಿವಾಸಿ-ಕಲೆಯನ್ನು ನೋಡಬಂದವರಿಗೆ ಸಂಪೂರ್ಣ ನಿರಾಶೆಯಾಗುವದರಲ್ಲಿ ಸಂಶಯವೇ ಇಲ್ಲ. ಇಲ್ಲಿಯೂ ಹೆಚ್ಚಿನ ಪ್ರಜೆಗಳು, ಬಹುಸಂಖ್ಯಾತರು, ಬಡವರು, ಹಿಂದುಳಿದವರು, 'ತೆಲಂಗರು' ಎಂದು ಕರೆಯಲ್ಪಡುವ, ಆಂಧ್ರದಿಂದ ಬಂದು ನೆಲೆಸಿದವರು. ಪರಿಸರದಲ್ಲೆಲ್ಲ ವಿಪುಲವಾದ ತಾಳೆ-ಮರಗಳಿದ್ದುದರಿಂದ ಕಲಾಲರು ನೆರೆಯುಳಿಸುತ್ತಾರೆ. ತೆಲಂಗರು ಕಂಠಪೂರ್ತಿ ಅದನ್ನು ಸೇವಿಸಿ ವಾಗ್ಯುದ್ಧದಲ್ಲಿ

ತೊಡಗುತ್ತಾರೆ. ಅಲ್ಲಿ ಮುರಿಯಾ ಮತ್ತು ಕಾಡುಕೋಣ ಕೋಡಿನ ಮಾರಿಯ (Bison horn Marias)ರ ವಸತಿಯಿದೆಯೆಂದು ಯಾರೋ ಹೇಳಿದ್ದರಿಂದ, ಅವರನ್ನು ಹುಡುಕಿ ಹೊರಟರೆ, ಅಲ್ಲಿ ಇಲ್ಲವೇ ಇಲ್ಲವೆಂದರು. ಯಾವದೋ ಗುಡಿಸಲ ಎದುರಿಗೆ ಗ್ರಾಮ್ಯವಾದ್ಯಗಾರರು ಟಮ್ ಟಮ್, ಟಮಾರ ಎಂದು ಬಾರಿಸುತ್ತಿದ್ದುದರಿಂದ ಯಾವದೋ ವಿಶೇಷಸಮಾರಂಭ ಇದ್ದಿರಬೇಕೆಂದು ವಿಚಾರಿಸಿದಾಗ ದಾರಿಹೋಕನು, "ಓ, ಆ ಮುದಿಯನ ಸೊಸೆ ಯಾರ ಜೊತೆಗೋ ಓಡಿ ಹೋಗಿದ್ದರಿಂದ ಮಗನಿಗೆ ಬೇರೆ ಮದುವೆ ಮಾಡುತ್ತಿದ್ದಾನೆ" ಎಂದ.

ಬಾರಸೂರಿಗೆ ಹೋಗುವಾಗಿನಸಗಿಂತ ಹಿಂತಿರುಗುವದು ಇನ್ನೂ ಕಷ್ಟಕರ ವಾಯಿತು. ಇನ್ನೊಂದು ರಾತ್ರೆಯಿದ್ದು, ಒಲೆಯ ಶಾಖಕ್ಕಾಗಿ ನಾಯಿಯೊಡನೆ ಸ್ಪರ್ಧಿಸುವ ಮನಸ್ಸಾಗದೇ ಕಟ್ಟಿಗೆ ತುಂಬಿದ ಟ್ರಕ್ಕೊಂದರ ಡ್ರಾಯವರನನ್ನು ವಿನಂತಿಸಿಕೊಂಡು ಗೀದಮ್‌ಗೆ ಹೋಗಬೇಕಾದರೆ ಕಲಿತ ವಿದ್ಯೆಯೆಲ್ಲ ಬಳಿಸ ಬೇಕಾಯಿತು.

## ೧೫. ಶೇಖ್ ಗುಲಾಬ್

ರಾಜ್ಯದ ಹಲವಾರು ಆದಿವಾಸಿ ಪಂಗಡಗಳಲ್ಲಿ ಅನೇಕ ವಿಧದ ಜಾನಪದ ನೃತ್ಯ-ಸಂಪ್ರದಾಯಗಳು ನಡೆದುಬಂದರೂ ಅವುಗಳನ್ನು ಅಭ್ಯಸಿಸಿ, ಹೊರ ಜಗತ್ತಿಗೆ ಪರಿಚಯಮಾಡಿಕೊಟ್ಟ ಶ್ರೇಯಸ್ಸು ಶೇಖ ಗುಲಾಬರಿಗೆ ಸೇರಬೇಕು. ವೃತ್ತಿಯಿಂದ ಶಿಕ್ಷಕರಾದರೂ, ಜೀವನವೆಲ್ಲ ವಿವಿಧ ತಂಡದವರಿಗೆ ಆದಿವಾಸಿ ನೃತ್ಯಗಳ ತರಬೇತಿ ಕೊಟ್ಟು, ಅವನ್ನು, ದಿಲ್ಲಿ ಭೋಪಾಲ್ ಮತ್ತು ಇನ್ನಿತರ ಸ್ಥಳಗಳಲ್ಲಿ ಆಡಿತೋರಿಸುವದರಲ್ಲಿ ಕಳೆದಿದ್ದಾರೆ. ಅಂತೆಯೇ ಅವರನ್ನು ಕಂಡು ಮಾತನಾಡಿಸಬೇಕು; ಸಾಧ್ಯವಿದ್ದರೆ ನೃತ್ಯಪ್ರದರ್ಶನಗಳನ್ನು ನೋಡಬೇಕು ಎಂದು ಬಹಳ ದಿನಗಳ ಆಸೆಯಿತ್ತು. ಅವರು ವಾಸಿಸುವ ಮಾಂಡ್ಲಾ ಜಿಲ್ಲೆ

ಯಲ್ಲಿಯ ಕಾಲ್ಪಿಗೆ ಹೋಗಲಾಗದ್ದರಿಂದ ಆ ಆಸೆ ಈಡೇರಿರಲಿಲ್ಲ. ಶೇಖರು ವಿದೇಶಿ-ಪ್ರವಾಸಿಗಳಿಗಾಗಿ ವಿಶೇಷ ನೃತ್ಯಸಮಾರಂಭವನ್ನು ಏರ್ಪಡಿಸಲಿದ್ದಾರೆ ಎಂದು ವೃತ್ತಪತ್ರಿಕೆಯ ಜಾಹಿರಾತುಗಳು ಸಾರಿಹೇಳಿದಾಗ ಸಿಕ್ಕ ಸದವಕಾಶ ಬಿಡುವದುಂಟೆ?

ದೇಶದಲ್ಲಿ ಐಕ್ಯತೆ ಸಾಧಿಸುವ ಹೆಸರಿನಿಂದ ಅಪಾರ ಧನ ಸೂರೆಯಾಗುತ್ತಿದ್ದರೂ ಅದರಿಂದ ಆಗುವ ಲಾಭ ಅತ್ಯಲ್ಪ. ಶೀಖ್, ಮಾರವಾಡಿ ಜನರು ರಾಜ್ಯಾತೀತವಾಗಿ ಬೆಳೆದು ಉನ್ನತಿಪಡೆದಂತೆ, ದೇಶದ ಎಲ್ಲ ಭಾಗಗಳಲ್ಲೂ ಸಮಾನ ಅವಕಾಶ ಸಿಗುವಂತಾದರೆ ನಾವೆಲ್ಲ ಮೊದಲಿಗೆ ಭಾರತೀಯರು ಆನಂತರ ಮದ್ರಾಸಿ, ಬಂಗಾಲಿ, ಪಂಜಾಬಿಗಳಾಗಲು ಸಾಧ್ಯವಿದೆ. ಒಂದು ಧರ್ಮದವರು ಇನ್ನೊಂದರ ಕಡುವೈರಿಗಳಂತೆ ಭಾಸವಾಗುವ ವಾತಾವರಣ ಹರಡುವಂತೆ ಸ್ವಾರ್ಥ-ರಾಜಕಾರಣಿಗಳೇ ಎಚ್ಚರಿಕೆ ವಹಿಸಿದ್ದಾರೆ. ಮೂಲತಃ ನಮ್ಮಲ್ಲಿರುವಷ್ಟು ಧರ್ಮ-ಸಹಿಷ್ಣುತೆ ಬೇರೆ ಯಾವ ರಾಷ್ಟ್ರದಲ್ಲೂ ಇದ್ದಿರಲಿಕ್ಕಿಲ್ಲ. ಈಗಲೂ ನಮ್ಮಲ್ಲಿ ಜನಸಾಮಾನ್ಯರು, ತಮ್ಮ ದೇಶಬಾಂಧವರನ್ನು ಧರ್ಮದ ತಳಹದಿಯ ಮೇಲೆಯೇ ಕಡೆಗಾಣಿಸಿ ನೋಡುವವರಲ್ಲ. ಸಾಮಾಜಿಕ, ಆರ್ಥಿಕ ಅಸಮಾನತೆ, ಮೂಢನಂಬಿಕೆಗಳು, ಅಸ್ವಚ್ಛತೆ ಮತ್ತು ತಪ್ಪುತಿಳುವಳಿಕೆಯಿಂದ ಎಷ್ಟೋ ಗಲಭೆಗಳು ಮೈತಾಳಿ ನಂತರ ಧರ್ಮದ ಬಣ್ಣ ಬಳಿದುಕೊಳ್ಳುತ್ತವೆ. ಮೊಹರಂದಲ್ಲಿ ಹುಲಿ ಕುಣಿಯುವವರು, 'ಪೀರ್'ನನ್ನು ಹೊರುವವರು, ಕೆಂಡ ಹಾಯುವವರು ಹಿಂದುಗಳಿದ್ದಂತೆ, ಹಬ್ಬದ ದಿನಗಳಲ್ಲಿ "ಹೋಲಿ ಮುಬಾರಕ್" "ಈದ ಮುಬಾರಕ್" ಎಂದು ಪರಸ್ಪರ ಬಣ್ಣ ಎರಚಿಯೋ, ಆಲಂಗಿಸಿಕೊಂಡೋ ಆಚರಿಸುವ ದೃಶ್ಯಗಳನ್ನು ನೋಡಿದಾಗ ಈ ಭಾವನೆಗಳ ಹಿಂದೆ ಅಡಗಿದ ಧರ್ಮಸಹಿಷ್ಣುತೆಯ ಕಲ್ಪನೆ ಬಾರದೇ ಇರದು. ಶೇಖ ಗುಲಾಬರನ್ನು ಕಾಣ ಹೋದಾಗ ಇಂತಹ ಕೆಲವು ಅನುಭವಗಳಾದವು.

ಆದಿವಾಸಿಗಳು, ಹಿಂದುಗಳ ತೀರ ಹತ್ತಿರದ ನಂಟರಾದರೂ, ಅವರ ನೃತ್ಯಗಳಲ್ಲಿ ವಿಶೇಷ ಆಸ್ಥೆವಹಿಸಿ, ಅಭ್ಯಸಿಸಿ, ಇತರರಿಗೆ ತರಬೇತಿ ಕೊಟ್ಟು ದೇಶದಲ್ಲೆಲ್ಲ ಅವು ಜನಪ್ರಿಯವಾಗುವಂತೆ ಮಾಡಿದವರು, ಆದಿವಾಸಿಯಲ್ಲ, ಹಿಂದುವಲ್ಲ, ಮಹಮ್ಮದೀಯರು ! ಅವರನ್ನು ಸಂದರ್ಶಿಸಿದ ಸ್ಥಳ, ಹತ್ತನೇ ಶತಮಾನದಿಂದ ಹಿಂದುಧರ್ಮದ ಪತಾಕೆಯನ್ನು ಗಗನದಲ್ಲಿ ಹಾರಿಸಿದ

ಖಜುರಾಹೋದ ಕಂದಾರೆ ಮಹಾದೇವನ ದೇವಾಲಯ. ಶೇಖ ಗುಲಾಬರು ಇಳಿದುಕೊಂಡ ಸ್ಥಳ ಜೈನಮಂದಿರ. ತೀರ ಭಿನ್ನವಾದ ವ್ಯಕ್ತಿ-ಪರಿಸರಗಳಲ್ಲಿ ಅದೆಂತಹ ಐಕ್ಯತೆ! ಇದು ಯಾವದೇ ಸಂಸ್ಥೆಯ ಪ್ರೋತ್ಸಾಹವಿಲ್ಲದೇ, ಕಾನೂನಿನ ಆಶ್ರಯವಿಲ್ಲದೇ, ಸನ್ಮಾನದ ಮೀಮಾಂಸೆ ಇಲ್ಲದೇ, ತೀರ ಸಹಜವಾಗಿ ಬೆಳೆದು ಬಂದ ಸೌಹಾರ್ದತೆ. ಇಂಥ ಮೈತ್ರಿಯು ಬೆಳೆಯುವಂತೆ ಸರಕಾರ, ರಾಜಕಾರಣಿಗಳು, ಮುಖಂಡರು, ಧಾರ್ಮಿಕರು ಶಕ್ತಿಮೀರಿ ಪ್ರಯತ್ನಿಸಿದರೆ ನಮ್ಮ ದೇಶ ಧರ್ಮಾತೀತವಾಗುವದರಲ್ಲಿ ಸಂಶಯವಿಲ್ಲ.

ಅನುಭವದಿಂದ ನೆರೆತ ಕೂದಲು, ತೇಜಸ್ವಿಯಾದ ಮುಖಮಂಡಲ, ಶುಭ್ರವಾದ ಖಾದಿ-ಜುಬ್ಬ, ಧೋತಿ, ಮೇಲೆ ಶಾಲು ಹೊದ್ದ ಗುಲಾಬರನ್ನು ಕಂಡಾಗ ಹಿಂದೂ ಪಂಡಿತನೊಬ್ಬನನ್ನು ನೆನಸಿಕೊಳ್ಳುವಂತಾಯಿತು.

ರಕ್ತ-ಒತ್ತಡದಿಂದ ಬಳಲುತ್ತಿದ್ದುದರಿಂದ ಮೂರು ವಾಸದ ಆಸ್ಪತ್ರೆಯ ಶುಶ್ರೂಷೆ ಪಡೆದು ಶೇಖರು ಕೇವಲ ಹತ್ತು ದಿನಗಳ ಹಿಂದೆ ಬಿಡುಗಡೆಯಾಗಿ ಬಂದಿದ್ದರು. ಸಂಪೂರ್ಣ ವಿಶ್ರಾಂತಿ ಅವಶ್ಯವೆಂದು ಡಾಕ್ಟರು ಒತ್ತಿಹೇಳಿದ್ದರು. ಆದರೆ ನೃತ್ಯದಲ್ಲಿ ಪರಿಪೂರ್ಣತೆ ಸಾಧಿಸುವದಕ್ಕೆ ವಿಶೇಷ ಗಮನಕೊಡುತ್ತಿದ್ದ ಅವರು ಆ ಮಧ್ಯಾಹ್ನವೆಲ್ಲ ಕಲಾಕಾರರಿಂದ ತಾಲೀಮು ಮಾಡಿಸುವದರಲ್ಲಿ, ಸೂಚನೆಗಳನ್ನು ಕೊಡುವವರಲ್ಲಿ ತೊಡಗಿದ್ದರು. ಸಂಜೆಗೆ ನರ್ತಕರೆಲ್ಲ ಅಲಂಕಾರ ದಲ್ಲಿ ತೊಡಗಿದಾಗ, ಗುಲಾಬರಿಗೆ ನಿಶ್ಶಕ್ತಿಯೆನಿಸಿ, ಗುಡಾರದ ಮೇಲೆ ಮಲಗಿ ವಿಶ್ರಾಂತಿಸುತ್ತಿದ್ದರು.

ಗ್ರೀನ್-ರೂಮಿಗೆ ಪ್ರವೇಶದ ನಿರ್ಬಂಧ ರೂಢಿ. ಅದರಲ್ಲಿಯೂ ಕಲಾವಿದೆ ಯರು ಅಲಂಕಾರ, ವೇಷಭೂಷಣ ಮಾಡಿಕೊಳ್ಳುವಲ್ಲಿ ಪುರುಷರಿಗೆ, ಅದರಲ್ಲೂ ಗುರುತು-ಪರಿಚಯ-ಪಾಸು ಇಲ್ಲದವರಿಗೆ ಪ್ರವೇಶ ಸಿಗುವದಂತೂ ಅಸಾಧ್ಯ. ಆದರೆ ಗುಲಾಬರ ಗ್ರೀನ್-ರೂಮಿಗೆ ಇಂತಹ ಕಟ್ಟುನಿಟ್ಟುಗಳಿಲ್ಲದ್ದು ನೋಡಿ ಹಿತವೆನಿಸಿತು. ಪರಿಚಯವಿಲ್ಲದ ಹೊಸಬ ನೀನಾರು? ಎಂದು ಕೇಳುವ ಗೋಜಿಗೆ ಯಾರೂ ಹೋಗಲಿಲ್ಲ. ಯುವಕ-ಯುವತಿಯರು ಕೂಡಿಯೇ ಅಲಂಕಾರದಲ್ಲಿ ತೊಡಗಿ ಸಮಾನತೆಯನ್ನು ಸಾಧಿಸಿದ್ದರು. "ಶೇಖಸಾಹೇಬರನ್ನು ಕಾಣಬೇಕಿತ್ತು" ಎಂದಾಗ ಆದರದಿಂದ ಸ್ವಾಗತಿಸಿದ್ದರಿಂದ ಅವರ ಬಗ್ಗೆ ಶಿಷ್ಯರಿಗಿದ್ದ ಗೌರವದ ಪರಿಚಯವಾಯಿತು.

ಯಾರೋ ಕಾಣಬಂದಿದ್ದಾರೆಂದು ಅರಿತ ಗುಲಾಬರು ಆತ್ಮೀಯವಾದ ಮುಗುಳುನಗೆ ಬೀರುತ್ತ ಕೈಜೋಡಿಸಿ "ಈ ಗುಲಾಮನಿಂದ ಯಾವ ಸೇವೆ ಯಾಗುವಂತಿದೆ ಎಂಬುದನ್ನು ಅರುಹಬೇಕು" ಎಂದಾಗ ಶಾಹೀ-ದರ್ಬಾರದ ನಮ್ರತೆ-ವಿನಯಗಳು ಕೆಲವರಲ್ಲಾದರೂ ಉಳಿದುಕೊಂಡಿವೆಯೆನಿಸಿತು. ಪರಿಚಯ ಪತ್ರ ತೋರಿಸಿದಾಗ ಹಸ್ತಲಾಘವ ಮಾಡಿ ಆಲಿಂಗಿಸಿದರು. ಗುರುಗಳ ಪ್ರೀತಿಗೆ ಪಾತ್ರನಾದ ಈ ಹೊಸಬ ಯಾರಿರಬಹುದು ಎಂದು ವಿದ್ಯಾರ್ಥಿಗಳು ತಮ್ಮ ಕೆಲಸಗಳನ್ನು ಮರೆತು ತಿರುತಿರುಗಿ ನೋಡಿದರು.

ವೃತ್ತಿಯಿಂದ ಶಿಕ್ಷಕರಾಗಿದ್ದರೂ ನೃತ್ಯ ಅವರನ್ನು ಹೇಗೆ ಆಕರ್ಷಿಸಿತು ಎಂದು ವಿಚಾರಿಸಿದಾಗ, "ಬಾಲ್ಯದಿಂದಲೂ ಆದಿವಾಸಿ ಮಕ್ಕಳೊಂದಿಗೆ ಕೂಡಿ, ಆಡಿ ಬೆಳೆದಿದ್ದರಿಂದ ಅವರ ಜೀವನದಲ್ಲಿ ವಿಶೇಷ ಆಸ್ಥೆ ಮೊದಲಿನಿಂದಲೂ ಬೆಳೆದುಬಂದಿತ್ತು. ಅವರ ನೃತ್ಯಕ್ಕೆ ಯಾವ ತಾಲೀಮೂ, ತರಬೇತಿಗಳ ಅವಶ್ಯಕತೆಯಿರಲಿಲ್ಲ. ಅವರೊಂದಿಗೆ ಆವೇಶದಿಂದ ನಾನೂ ಕುಣಿಯುತ್ತಿದ್ದೆ. ಆದಿವಾಸಿ ಹಳ್ಳಿಯ ಶಾಲೆಯಲ್ಲಿ ಶಿಕ್ಷಕನಾಗಿ ಸೇರಿಕೊಂಡ ನಂತರ ಅವರ ನೃತ್ಯ ಗಳಲ್ಲಿದ್ದ ಆಸಕ್ತಿಗೆ ಮೂರ್ತಸ್ವರೂಪ ಬಂದಂತಾಯಿತು. ಅವರ ಮಕ್ಕಳಿಗೆಲ್ಲ ಅಕ್ಷರಾಭ್ಯಾಸ, ನಾಗರಿಕ ಶಿಕ್ಷಣಾಭ್ಯಾಸದಲ್ಲಿ ಯಾವ ಅಭಿರುಚಿಯೂ ಇರಲಿಲ್ಲ. ಅವರಿಗೆ ರುಚಿಸುವ ನೃತ್ಯವನ್ನೇ ಕಲಿಸುವದರಲ್ಲಿ ಹೆಚ್ಚಿನ ಲಕ್ಷ್ಯ ಪೂರೈಸ ಲಾರಂಭಿಸಿದೆ. ಅವರ ಜೀವನವೆಲ್ಲ ಕಷ್ಟಕಾರ್ಪಣ್ಯಗಳಿಂದ ತುಂಬಿದ್ದರಿಂದ, ಅವರಿಗೆ ಕುಡಿತ-ಕುಣಿತಗಳೆಂದರೆ ಪಂಚಪ್ರಾಣ. ಕ್ರಮೇಣ, ಮಧ್ಯಭಾರತದ ವಿವಿಧ ಆದಿವಾಸಿಗಳ ನೃತ್ಯಗಳನ್ನೂ ಆಳವಾಗಿ ಅಭ್ಯಸಿಸಿ, ನೃತ್ಯಮೇಳಗಳನ್ನು ಕೂಡಿಸಲಾರಂಭಿಸಿದೆ. ವಿವಿಧ ಸಮಾರಂಭಗಳಲ್ಲಿ ಅವರ ನೃತ್ಯಗಳನ್ನು ಪ್ರದರ್ಶಿಸಿ ದಾಗ ಪ್ರೇಕ್ಷಕರು ಬಹಳವಾಗಿ ಮೆಚ್ಚಿಕೊಂಡದ್ದರಿಂದ ಹೆಚ್ಚಿನ ಪ್ರೋತ್ಸಾಹ ದೊರಕಿತು. ನೃತ್ಯಗಳ ಖ್ಯಾತಿ ಅಧಿಕಾರಿಗಳ ತನಕ ಮುಟ್ಟಿದ್ದರಿಂದ ಆಗಾಗ ಅವರು ರಾಜ್ಯಗಳ, ದೇಶ-ವಿದೇಶಗಳ ನಾಯಕರಿಗಾಗಿ ನೃತ್ಯ-ಕೂಟಗಳನ್ನು ಏರ್ಪಡಿಸಿದರು..." ಎಂದು ವಿವರಿಸುತ್ತಿದ್ದಾಗ ಯುವಕನೊಬ್ಬ ತನ್ನ ಅಲಂಕಾರ ಸರಿಯಾಗಿದೆಯೋ ಎಂದು ಪರೀಕ್ಷಿಸಲು ವಿನಂತಿಸಿಕೊಂಡ.

ರಾಷ್ಟ್ರೀಯ ಖ್ಯಾತಿ ಮತ್ತು ಪ್ರಶಸ್ತಿಗಳು ಹೇಗೆ ದೊರಕಿದವು ಎಂದು ವಿಚಾರಿಸಿದಾಗ, "ನಮ್ಮ ದೇಶದಲ್ಲಿ ಮಧ್ಯಪ್ರದೇಶ ಆದಿವಾಸಿಗಳಿಗಾಗಿ ಖ್ಯಾತಿ

ಪಡೆದಿದೆ ಮತ್ತು ಅವರ ನೃತ್ಯಗಳು ಜನಪ್ರಿಯತೆ ಪಡೆದಿವೆ. ಅಂತೆಯೇ ರಾಜ್ಯೋತ್ಸವದ ಹೊತ್ತಿಗೆ ಭೋಪಾಲಕ್ಕೂ, ಪ್ರಜಾರಾಜ್ಯೋತ್ಸವದಂದು ದಿಲ್ಲಿಗೂ ಆಮಂತ್ರಣ ಬರಲಾರಂಭಿಸಿತು. ಅಲ್ಲದೇ ವಿವಿಧ ಸ್ಪರ್ಧೆಗಳಲ್ಲಿ ಬಹುಮಾನಗಳನ್ನು ಗೆದ್ದುದರಿಂದ ಜನತೆ ಮತ್ತು ಸರಕಾರದ ಲಕ್ಷ್ಯ ನಮ್ಮ ತಂಡದ ಕಡೆ ಸೆಳೆಯಿತು. ಅರೆನಗ್ನ-ನೃತ್ಯಗಳು, ರಾತ್ರಿಯಿಡೀ ನಡೆಯುವ ನೃತ್ಯಗಳು ನಾಗರಿಕರ ಅಭಿರುಚಿಗೆ ಸರಿಹೋಗದ್ದರಿಂದ, ಸಾಂಪ್ರದಾಯಿಕವಾಗಿ ನಡೆದು ಬಂದ ನೃತ್ಯಗಳ ತಳಹದಿಯ ಮೇಲೆ ಹೊಸ ನೃತ್ಯಗಳನ್ನು ಜೋಡಿಸಬೇಕಾಯಿತು. ವೇಷಭೂಷಣಗಳನ್ನು ಆದಿವಾಸಿಗಳದ್ದೇ ಬಳಸಿದರೂ ಸಮಾನತೆಗಾಗಿ, ಆಕರ್ಷಣೆಗಾಗಿ ಅಲ್ಲಿ ಇಲ್ಲಿ ಬದಲಿಸಬೇಕಾಯಿತು ..." ಎನ್ನುತ್ತಿದ್ದಾಗ ಚಹಾ ಬಂದಿತು.

"ವಿದ್ಯಾರ್ಥಿಗಳು ಬರುತ್ತಹೋಗುತ್ತಲೇ ಇರುವದರಿಂದ ಪ್ರತಿವರ್ಷ ಹೊಸ ತಂಡಕ್ಕೆ ತರಬೇತಿಕೊಡುವದು ಕಷ್ಟದಾಯಕ ಕೆಲಸವಲ್ಲವೇ?" ಎಂದು ವಿಚಾರಿಸಿದಾಗ, "ಎಲ್ಲರಲ್ಲಿಯೂ ನೃತ್ಯದ ಅಭಿರುಚಿ ಏಕಪ್ರಕಾರವಾಗಿ ಇರುವದಿಲ್ಲ. ಆದ್ದರಿಂದ ಉತ್ತಮವೆಂದು ಪರಿಗಣಿಸಲಾದವರನ್ನು ಮಾತ್ರ ವಿಶೇಷ ತರಬೇತಿ ಕೊಟ್ಟು ತಂಡದಲ್ಲಿ ಸೇರಿಸಿಕೊಳ್ಳಲಾಗುತ್ತದೆ. ಅವರು ವಿದ್ಯಾರ್ಥಿ ಜೀವನ ಮುಗಿಸಿ ಇಲ್ಲವೇ ನಡುವೆಯೇ ಬಿಟ್ಟುಹೋದರೂ, ವಿಶೇಷ ನೃತ್ಯ ಕೂಟಗಳಲ್ಲಿ ಅವರನ್ನು ಕರೆಯಿಸಿಕೊಳ್ಳುತ್ತೇವೆ. ಮೂವರು ಸಹೋದ್ಯೋಗಿಗಳು, ಸ್ವತಃ ಉತ್ತಮ ನರ್ತಕರು. ಅಲ್ಲದೇ ಆದಿವಾಸಿ-ನೃತ್ಯದಲ್ಲಿ ಪಾಂಡಿತ್ಯ ಗಳಿಸಿದ ಒಂದು ಕುಟುಂಬವೇ ಈ ಸಲ ನಮ್ಮೊಡನೆ ಬರುವಂತಾದುದಕ್ಕೆ ನಮಗೆಲ್ಲ ಅಭಿಮಾನ. ಇಂದು ರಾತ್ರಿ ಅವರ ನೃತ್ಯಗಳನ್ನು ನೀವೇ ನೋಡುವಿರಂತೆ." ಎಂದು ಹೇಳುತ್ತಿರುವಾಗ ರಂಗಸಜ್ಜಿಕೆಯ ಬಗ್ಗೆ ವಿಚಾರ-ವಿಮರ್ಶೆ ಮಾಡಲು ಅಧಿಕಾರಿಯೊಬ್ಬ ಶೇಖರನ್ನು ಕಾಣಲು ಬಂದ.

ಬಾಯಿ, ಕಿವಿ, ಕಣ್ಣುಗಳಿಗೆ ಬಿಡುವು ಸಿಕ್ಕು, ಸುತ್ತಮುತ್ತಲು ಕಣ್ಣು ಹಾಯಿಸಿದಾಗ ದಶಾವತಾರದ ವೇಷಗಳಂತೆ ಆಕರ್ಷಣೀಯ ಪೋಷಾಕು ಧರಿಸಿ ನಿಂತ ನೃತ್ಯಗಾರರು ಕಣ್ಣಿಗೆ ಹಬ್ಬವನ್ನುಂಟುಮಾಡಿದರು. ತಲೆಗೆ, ಕೊರಳಿಗೆ, ಭುಜಗಳಿಗೆ, ಸೊಂಟಕ್ಕೆ ಕವಡೆ-ಸರಗಳನ್ನು ಧರಿಸಿದವರು, ದೊಡ್ಡ ರುಮಾಲು ಕಟ್ಟಿ ತುದಿಯನ್ನು ಕಾಲ ತುದಿಯವರೆಗೆ ಇಳಿಬಿಟ್ಟವರು, ಮರದ-ಕಾಲುಗಳನ್ನು

ಕಟ್ಟಿಕೊಂಡು ಎತ್ತರ ಹೆಜ್ಜೆ ಸಿಕೊಂಡವರು, ಮೃದಂಗ, ತಮಟೆ, ತಾಳಗಳನ್ನೆಲ್ಲ ಹಿಡಿದವರಿದ್ದರು. ಹೆಂಗಳೆಯರೆಲ್ಲ ಆದಿವಾಸಿಗಳ ಕಿರಿಸೀರೆ ಉಟ್ಟವರು, ಕೊರಳ ತುಂಬ ಬೆಳ್ಳಿಯ ಆಭರಣಗಳನ್ನು ತೊಟ್ಟವರು, ಬಳೆಗಳ ರಾಶಿ ಹೊತ್ತವರು, ತಲೆಗೆ ಮಣಿಗಳ ಸರ ಕಟ್ಟಿಕೊಂಡವರು, ಬಗೆಬಗೆಯ ಬುಟ್ಟಿಗಳನ್ನು ಹೊತ್ತವರು ಸಮಾವೇಶಗೊಂಡಿದ್ದರು. ಮಾತುಕತೆಗೆ ತಡೆ ಉಂಟಾದ್ದಕ್ಕೆ ಗುಲಾಬರು ಕ್ಷಮೆ ಕೋರಿದಾಗ "ಅಷ್ಟು ವೇಳೆ ವ್ಯರ್ಥವಾಗಲಿಲ್ಲ. ಕಲಾವಿದರ ವೇಷಭೂಷಣ ಅಭ್ಯಸಿಸುವದರಲ್ಲಿ ತೊಡಗಿದ್ದೆ" ಎಂದಾಗ ಅವರಿಗೆ ಆನಂದ ವಾಯಿತು. 'ಕಲಾವಿದರ ಛಾಯಾಚಿತ್ರಗಳನ್ನು ತೆಗೆಯಬಹುದೆ?' ಎಂದು ಕೇಳಿದಾಗ, 'ಗ್ರೀನ್‌ರೂಮಿನಲ್ಲಿ ತೆಗೆಯಬಹುದು. ಆದರೆ ಈ ಸ್ವಾತಂತ್ರ್ಯ ರಂಗದ ಮೇಲೆ ಕೊಡಲು ನಮಗೆ ಅಧಿಕಾರವಿಲ್ಲ. ಅದಕ್ಕಾಗಿ ಈ ಸಮಾರಂಭ ವನ್ನು ನಿಯೋಜಿಸಿದ ಅಧಿಕಾರಿಗಳ ಅಪ್ಪಣೆ ಪಡೆಯಬೇಕು' ಎಂದರು. ರಂಗದ ಮೇಲೆ ಛಾಯಾಗ್ರಹಣ ಅಷ್ಟು ಸುಲಭವಾಗಲಿಕ್ಕಿಲ್ಲವೆಂದು ಅನಿಸಿದ್ದರಿಂದ, ಕ್ಯಾಮರಾ ಮತ್ತು ಫ್ಲ್ಯಾಶ್‌ಗಳನ್ನು ಸಜ್ಜುಗೊಳಿಸಿ ಕ್ಲಿಕ್, ಕ್ಲಿಕ್ ಮಾಡಿದಾಗ, ಕಲಾಕಾರರಲ್ಲಿ ಹೊಸ ಚೇತನ ಬಂದಂತಾಗಿ, ಭಾವ-ಚಿತ್ರಗಳನ್ನು ತೆಗೆಸಿಕೊಳ್ಳಲು ತಾವಾಗಿ ಮುಂದೆ ಬರಹತ್ತಿದರು. ಗೊತ್ತುಪಡಿಸಿದ ಸಮಯದಲ್ಲಿ ಕಾರ್ಯ ಕ್ರಮವನ್ನು ಪ್ರಾರಂಭಿಸಬೇಕು ಎಂದು ನಿಯೋಜಕರು ಗಡಿಬಿಡಿ ಮಾಡಿದ್ದರಿಂದ ಎಲ್ಲರೂ ರಂಗದತ್ತ ಧಾವಿಸಿದರು.

ನೃತ್ಯ-ಸಮಾರಂಭವನ್ನು ನೋಡಲು ಬಂದ ಪ್ರವಾಸಿಗಳಲ್ಲಿ ವಿದೇಶೀಯರೇ ಹೆಚ್ಚು ಜನ ಇದ್ದಾರೆಂದು ಊಹಿಸಿ ಅವರಿಗಾಗಿ ನೃತ್ಯ-ಪರಿಚಯವನ್ನು ಇಂಗ್ಲಿಶ್, ಫ್ರೆಂಚ್, ಜರ್ಮನ್ ಭಾಷೆಗಳಲ್ಲಿ ಬಿತ್ತರಿಸುವ ಏರ್ಪಾಡು ಮಾಡ ಲಾಗಿತ್ತು. ಓರಾವೊ ಆದಿವಾಸಿಗಳ ಸಾಮೂಹಿಕ ಸಂಗಮ್-ನೃತ್ಯದಿಂದ ಕಾರ್ಯಕ್ರಮ ಪ್ರಾರಂಭವಾಗಿ ನಂತರ ಗೊಂಡರ, ಸೈಲಾ, ದದರಿಯಾರ ನೃತ್ಯ ಗಳಾದವು. ಇವುಗಳಲ್ಲಿ ಸೈಲಾ ನೃತ್ಯ ಕಲಾಪೂರ್ಣವಾಗಿತ್ತಲ್ಲದೇ ಮೃದಂಗ ವಾದ್ಯಗಾರನ ಹಾರಾಟದ ಕುಣಿತವನ್ನು ಎಲ್ಲರೂ ಮೆಚ್ಚಿದರು. ಮದುವೆಯ ಕಾಲದಲ್ಲಿ ಹಾಸ್ಯಕ್ಕಾಗಿ ಮಾಡುವ ಧುಲಿಯಾರ ನೃತ್ಯ ರಂಗುರಂಗಾಗಿತ್ತು. ಗೊಂಡರು ಮರಕಾಲು ಕಟ್ಟಿಕೊಂಡು ಮಾಡುವ ಗೊಂಡಿ-ನೃತ್ಯದಲ್ಲಿ ಸಮ ತೋಲನ ಉಳಿಸಿಕೊಂಡು ಹೆಜ್ಜೆಹಾಕುವದನ್ನು ನೋಡಿ ಪ್ರೇಕ್ಷಕರು ವಿಸ್ಮಯ

ವನ್ನು ವ್ಯಕ್ತಪಡಿಸಿದರು. ದೇವೀ ಆರಾಧನೆಯ ಗೊಂಡರ ಓವಾರಾ ನೃತ್ಯದಲ್ಲಿ ಬಳಸಿದ ಉರಿಯುವ ಜ್ವಾಲೆ, ಚೀರಾಟಗಳು ಭಯಾನಕವಾಗಿ ಕಂಡವು. ಆಹೀರರ ದೀಪಾವಳಿ ನೃತ್ಯ, ಭಾತ್ರಾರ ಧುರ್ವಾ ನೃತ್ಯಗಳು ದೇವರನ್ನು ಮೆಚ್ಚಿಸಲು ಮಾಡುವಂತಹವು. ಕಾರ್ಯಕ್ರಮದ ಕೊನೆಯಲ್ಲಿ ಇಪ್ಪತ್ತು ಅಂಶಗಳ ಕಾರ್ಯಕ್ರಮ-ಪ್ರಚಾರಕ್ಕಾಗಿ ಮಾಡಿದ ನೃತ್ಯವನ್ನು ನೋಡಿ, ಬಂದ ವಿದೇಶೀಯನೊಬ್ಬನು, 'ಇದು ಚೆನ್ನಾಗಿದೆಯೇ?' ಎಂದು ವಿಚಾರಿಸಿದಾಗ ಏನು ಹೇಳಬೇಕೆಂದು ತಿಳಿಯದೇ ಹಾರಿಕೆಯ ಉತ್ತರ ಕೊಡಬೇಕಾಯಿತು.

'ಕಾರ್ಯಕ್ರಮ ಉತ್ತಮವಾಗಿತ್ತು' ಎಂದು ಶೇಖರನ್ನು ಅಭಿನಂದಿಸಿದಾಗ ಕೃತಜ್ಞತೆ ಸೂಚಿಸಿ, ಮನಸ್ಸಿದ್ದರೆ, ಮರುದಿನ ತಾವು ಇಳಿದುಕೊಂಡ ಜೈನಮಂದಿರಕ್ಕೆ ಬಂದರೆ, ವಿವರವಾಗಿ ಮಾತನಾಡಬಹುದೆಂದರು. ಇದಾಗಲೇ ಛಾಯಾಚಿತ್ರ ತೆಗೆಸಿಕೊಳ್ಳಲಾಗದವರು, ವಿನಂತಿಸಿಕೊಂಡು ವಿವಿಧ ಭಂಗಿಯಲ್ಲಿ ನಿಂತು ಕ್ಯಾಮರಾದಲ್ಲಿ ತಮ್ಮನ್ನು ಮೂಡಿಸಿಕೊಂಡರು. ರಂಗದ ಮೇಲೆ ಇಷ್ಟೊಂದು ಕುಣಿದರೂ ಅವರ ಉತ್ಸಾಹ ಒಂದಿಷ್ಟೂ ಕಡಿಮೆಯಾಗದೇ ತಮ್ಮ ವಾಸಸ್ಥಳದ ವರೆಗೆ ವಾದ್ಯಗಳನ್ನು ನುಡಿಸುತ್ತ, ನರ್ತಿಸುತ್ತ ಹೋದದ್ದನ್ನು ನೋಡಿ ತಲೆದೂಗದೇ ಇರಲಾಗಲಿಲ್ಲ. ಸ್ತ್ರೀ-ಪುರುಷರೆಂಬ ಭೇದಭಾವವಿಲ್ಲದೇ ನಗುತ್ತ, ಕಲೆಯುತ್ತ ಅವರು ಹೊರಟದ್ದು ನೋಡಿ ಆಧುನಿಕರೆನಿಸಿಕೊಂಡವರಿಗೆಲ್ಲ ಹೊಟ್ಟೆಕಿಚ್ಚಾಗಿರಬೇಕು!

ಮರುದಿನ ಜೈನಮಂದಿರಕ್ಕೆ ಹೋದಾಗ, ನೀರು ಸೇದುವದು, ಬಟ್ಟೆ ಒಗೆಯುವದು, ಸ್ನಾನಮಾಡುವದು ಮುಂತಾದ್ದರಲ್ಲಿ ತೊಡಗಿದ ಕಲಾವಿದರೆಲ್ಲ ಮುಗುಳುನಗೆಯಿಂದ ಸ್ವಾಗತಿಸಿದರು. ಸಂಭ್ರಮದಿಂದ ಶೇಖರು ಇಳಿದುಕೊಂಡ ಕೋಣೆಯನ್ನು ತೋರಿಸಿದರು. ಹಿಂದಿನ ದಿನದ ನೃತ್ಯಗಳ ವಿವರಗಳನ್ನೆಲ್ಲ ಪೂರೈಸುತ್ತ "ಕಲಾಕಾರರೆಲ್ಲ ಹೆಚ್ಚಾಗಿ ಮಾಂಡ್ಲಾ ಮತ್ತು ರೇವಾ ಜಿಲ್ಲೆಯವರಾಗಿದ್ದು, ಗೊಂಡ, ಧುಲಿಯಾ, ಜರಾವೊ ಪಂಗಡಗಳಿಗೆ ಸೇರಿದವರು" ಎಂದು ಶೇಖರು ಹೇಳಿದರು. ಪದ್ಮಶ್ರೀ ಬಿರುದು ಅವರಿಗೆ ದೊರೆತದ್ದನ್ನು ಅವರು ಏಕೆ ಹೇಳಲಿಲ್ಲವೆಂದು ದೂರಿದಾಗ, ತಾವು ನೃತ್ಯದಲ್ಲಿ ಮಾಡಿದ ಸೇವೆಯ ಮೊರತಾಗಿ, ಆದಿವಾಸಿ-ಕಥೆ ಮತ್ತು ಹಾಡುಗಳನ್ನು ಸಂಗ್ರಹಿಸಿದ್ದರಿಂದ ೧೯೬೨ರಲ್ಲಿ ಭಾರತ-ಸರಕಾರ ತಮಗೆ ಉತ್ತಮ ಶಿಕ್ಷಕನೆಂದು ಪದ್ಮಶ್ರೀ ಕೊಟ್ಟು

ಸನ್ಮಾನಿಸಿದೆ ಎಂದು ಅರ್ಥಪೂರ್ಣವಾಗಿ ನಕ್ಕರು. ನಂತರ ಬೇರೆ ಬೇರೆ ತಂಡಗಳ ಮುಖಂಡರನ್ನು ಕರೆದು, ಬೇಕಾದ ಮಾಹಿತಿಯನ್ನು ಒದಗಿಸಲು ಸೂಚಿಸಿದರು. ಅವರೊಡನೆ ಎರಡು ತಾಸು ಚರ್ಚಿಸಿ ಹೊರಟುನಿಂತಾಗ, ಒಮ್ಮೆ ತಮ್ಮ ಊರಾದ ಬೀಜದಾಂಡಿಗೆ ಬರಲು ಶೇಖ ಗುಲಾಬರು ಆಮಂತ್ರಿಸಿದರು.

## ೧೬. ಶಿರಥಗಡ್

ಜಲಪಾತದಂತಹ ನಿಸರ್ಗದ ಚಮತ್ಕಾರ ನೋಡಿ ನೋಡಿ ತಣಿಯುವ ಉತ್ತಮ ವಿಧಾನ ಯಾವುದು ಎಂಬುದು ಬಹುದಿನಗಳಿಂದ ಕಾಡುತ್ತಿದ್ದ ಪ್ರಶ್ನೆ. ಯಾಕಂದರೆ ಸುಪ್ರಸಿದ್ಧವಾದ ಜೋಗ ಮತ್ತು ನಾಯಗರಾ ಜಲಪಾತಗಳನ್ನು ತೀರ ಭಿನ್ನ ಸೌಕರ್ಯಗಳೊಂದಿಗೆ ನೋಡುವಂತಾಗಿತ್ತು. ಸ್ವಂತ ಊರಿನಿಂದ ಕೇವಲ ಅರವತ್ತು ಕಿಲೋಮೀಟರ್ ದೂರವಿರುವ ಮೊದಲನೇಯದನ್ನು ನೋಡಲು, ಮುಂದಮಾರುತನನ್ನೇ ಆಧರಿಸಿ ಇರುವೆ-ವೇಗದಿಂದ ಚಲಿಸುವ ದೋಣಿಯಲ್ಲಿ ಎಂಟು ತಾಸು ಪ್ರಯಾಣ ಮಾಡಿ ಗೇರಸೊಪ್ಪೆ ತಲುಪಿ, ಮರುದಿನ ಬೆಳಗಿನಿಂದ ಸಂಜೆಯವರೆಗೆ ಕಾಡುದಾರಿ ತುಳಿದು, ದೂರದಿಂದ ಜಲಪಾತದ ಅಬ್ಬರ ಕೇಳುವಂತಾದಾಗ ಮೈನವಿರೆದ್ದಿತ್ತು. ಆ ದಿನಗಳಲ್ಲಿ ಅಲ್ಲಿ ಊಟ, ತಿಂಡಿ, ವಾಸಕ್ಕಾಗಿ ಯಾವ ಏರ್ಪಾಡೂ ಇಲ್ಲದ್ದರಿಂದ, ಶಾಲಾಕಟ್ಟಡವೊಂದರ ಹೊರಗಿನ ಕಟ್ಟೆಯ ಮೇಲೆ ಮಲಗಿ, ಸಂಗಡ ಒಯ್ದ ಅವಲಕ್ಕಿಯಿಂದ ಹಸಿವೆ ಮರೆತು, ರಾಜಾ, ರಾಣಿ, ಅಬ್ಬರ ತಡಸಲುಗಳನ್ನು ನೋಡಿ, ಕಣಿವೆ ಇಳಿದು ಹತ್ತಿದ ದಿನಗಳನ್ನು ನೆನೆಸಿಕೊಂಡರೆ, ಆ ಎಳೆತನದ ಸಾಹಸ ಸಾರ್ಥಕವಾಯಿತು ಎನಿಸುತ್ತದೆ. ಅದೇ ನಾಯಗರಾ ತಡಸಲನ್ನು ಆಧುನಿಕ ಸೌಲಭ್ಯಗಳೊಡನೆ, ಆರಾಮವಾಗಿ ಎತ್ತರದಿಂದ, ಭೂಗರ್ಭದೊಳಗಿಂದ, ಗಗನದೊಳಗಿಂದ ನೋಡಿದಾಗ ಅದೂ ಅದ್ಭುತರಮ್ಯವಾಗಿ ಕಂಡಿತ್ತು. ಜೋಗ-ಜಲಪಾತಕ್ಕೆ ಎಲ್ಲ ತರದ ಆಧುನಿಕ ಸೌಲಭ್ಯಗಳನ್ನು ಒದಗಿಸಿದರೆ ಅದು ಇನ್ನೂ ಆಕರ್ಷಣೀಯವಾಗಿ

ಕಾಣಿಸುತ್ತಿತ್ತೇ, ಇಲ್ಲವೇ ಬ್ರಿಟಿಶರ ಕಾಲದಲ್ಲಿ ಇದ್ದ ಹಾಗೇ ಈಗ ನೋಡುವಲ್ಲಿ ಅದು ಹೆಚ್ಚು ಆಕರ್ಷಕವಾಗಿರುತ್ತಿತ್ತೇ ಎಂಬ ಸಮಸ್ಯೆ ಮಧ್ಯಪ್ರದೇಶದ ತಿರಥಗಡ್ ನೋಡಿದ ನಂತರ ಬಗೆಹರಿಯಿತು.

ಬಸ್ತರ್ ಜಿಲ್ಲೆಯಲ್ಲಿರುವ ತಿರಥಗಡ್ ನೋಡಲೇಬೇಕಾದ ಸ್ಥಳವೆಂದು ಜಗದಲಪುರದ ಗಣ್ಯ ವ್ಯಕ್ತಿಯೊಬ್ಬರು ಸೂಚಿಸಿದ್ದರಿಂದ ಮತ್ತು ಮಧ್ಯ ಪ್ರದೇಶದ ಪ್ರವಾಸ-ಖಾತೆ ಅದಕ್ಕೆ ಸಾಕಷ್ಟು ಪ್ರಸಿದ್ಧಿಯನ್ನೂ ಕೊಟ್ಟಿದ್ದರಿಂದ, ಅಲ್ಲಿ ಹೋಗಲು ನಿಶ್ಚಯಿಸಿದ್ದಾಯಿತು. ಅಲ್ಲಿ ನೇರ ಹೋಗುವ ವಾಹನ ಯಾವುದೂ ಇಲ್ಲವೆಂದೂ ಕೊಂಟಾದ ಬಸ್ಸಿನಲ್ಲಿ ಹೋಗಿ ಕವಲುದಾರಿ ಒಡೆಯು ವಲ್ಲಿ ಇಳಿದರೆ ಮುಂದೆ ಸುಲಭವಾಗಿ ಹೋಗಬಹುದೆಂದೂ ಅವರಿವರನ್ನು ವಿಚಾರಿಸಿದಾಗ ತಿಳಿಯಿತು.

ಸೂರ್ಯೋದಯದ ಮುಂಚೆಯೇ ಕೊಂಟಾ ಬಸ್ಸು ಹೊರಡುತ್ತದೆಂದು ರಾಜ್ಯಸಾರಿಗೆ ಬೋರ್ಡು ಸೂಚಿಸಿದ್ದರಿಂದ, ತಿಂಡಿ-ತೀರ್ಥವನ್ನು ದಾರಿಯಲ್ಲಿ ಎಲ್ಲಾದರೂ ಕೊಂಡರಾಯಿತೆಂದು, ತಿಕೀಟು ಕೊಳ್ಳಲು ಕಿಟಕಿಯತ್ತ ಹೋದರೆ, "ಬಾಬು, ಕಂಟಕ್ಟರನಿನ್ನೂ ಬಂದಿಲ್ಲ. ವಾಹನದಲ್ಲಿಯೇ ಕೊಳ್ಳಿ"ರೆಂದ. ಸಿಬ್ಬಂದಿ ಯಿಲ್ಲದ ಬಸ್ಸಿನಲ್ಲಿ ಕಾಯುತ್ತ ಕುಳಿತ ನಂತರ ಅರ್ಧತಾಸಿಗೆ ಕಂಡಕ್ಟರನು ಹಲ್ಲುಗಳನ್ನು 'ಮಂಜನ'ಕಡ್ಡಿ (ಬೇವಿನ ಕಡ್ಡಿ)ಯಿಂದ ಉಜ್ಜಿಕೊಳ್ಳುತ್ತ ನಿರ್ವಿಷ ಕ್ಕೊಮ್ಮೆ ಎಂಜಲನ್ನು ಗಾಳಿಯಲ್ಲಿ ತೂರುತ್ತ, ಪ್ರಯಾಣಿಕರೆಲ್ಲ ಕಿಡಕಿಯಿಂದ ತಿಕೀಟು ಪಡೆದೇ ಬಸ್ಸಿನಲ್ಲಿ ಕೂಡ್ರಬೇಕೆಂದು ಬಜಾಯಿಸಿ ಹೇಳಿ ಹೋದ. ಆದಾಗಲೇ ಪ್ರವಾಸಿಗಳು ಕಿಕ್ಕಿರಿದು ತುಂಬಿದ್ದರಿಂದ, ಸಾಮಾನು ಇಡದೇ ಕೆಳಗಿಳಿದರೆ ಸ್ಥಳ ಹೋಗುತ್ತದೆ. ಸಾಮಾನು ಇಟ್ಟರೆ ಕಳೆದುಹೋಗುವ ಭಯ. ಅಂತೆಯೇ ಸಹಪ್ರಯಾಣಿಕನ ಮನ ಒಲಿಸಿ ಅವನ ಒಂದು ಪೊಟ್ಟಣದಿಂದ ಸ್ಥಳ ಕಾದಿರಿಸಿ ತಿಕೀಟು ತರಲು ತಿರುಗಿ ಧಾವಿಸಿದೆ. ಉಳಿದವರು ತಮ್ಮ ಸ್ಥಳ ಬಿಟ್ಟು ಕದಲಲೇ ಇಲ್ಲ. ಅವರಿಗೆಲ್ಲ ಕಂಡಕ್ಟರನ ಇಂತಹ ಮಾತುಗಳನ್ನು ಅಲಕ್ಷಿಸಿ ರೂಢಿಯಾಗಿಹೋಗಿತ್ತು.

ತಿರಥಗಡಕ್ಕೆ ಹೋಗಲು ಯಾವ ಊರಿನ ತಿಕೀಟು ಕೊಳ್ಳಬೇಕೆಂದು ತಿಳಿಯದೇ ತಲೆ ತುರಿಸಿಕೊಂಡೆ. ಕಂಡಕ್ಟರನಿಗೆ ವಿಚಾರಿಸಿದಾಗ ಅದು ಎಲ್ಲಿದೆ, ಎಂದು ತನಗೆ ತಿಳಿಯದೆಂದ. ಸಹಪ್ರಯಾಣಿಕರಿಗೆ ವಿಚಾರಿಸಿ ವಾಹನದಲ್ಲಿ

ತಿಕೀಟು ಕೊಳ್ಳುವದೆಂದು ಸರ್ವಾನುಮತದಿಂದ ನಿರ್ಧಾರವಾದ್ದರಿಂದ ತಿರುಗಿ ಸ್ವಸ್ಥಾನಕ್ಕೆ ಹಿಂತಿರುಗಬೇಕಾಯಿತು. ಡ್ರೈಯವರನು ಚಹಾ ಕುಡಿದು, ವೀಳ್ಯ ಜಗಿಯುತ್ತ ಸಿಗರೇಟಿನ ಹೊಗೆ ಬಿಡುತ್ತ ತನ್ನ ಆಸನದಲ್ಲಿ ಕುಳಿತು ಹದಿನೈದು ನಿಮಿಷಗಳಾದರೂ ಕಂಡಕ್ಟರನ ಪತ್ತೆಯೇ ಇಲ್ಲದ್ದರಿಂದ ಇವನ ಮನೆ ಹಾಳಾಗ ಎಂದು ಬೈಯುತ್ತ ಅವನು ಇರಬಹುದಾದಂತಹ ಚಹಾ-ಬೀಡಿ ಅಂಗಡಿಗಳನ್ನು ಹುಡುಕುತ್ತ ಹೊರಟ. ಅಷ್ಟರಲ್ಲಿ ಕಂಡಕ್ಟರನು ಬಂದು, ಡ್ರೈಯವರನು ಬಂದಿಲ್ಲವೆಂದು ಶಾಪ ಹಾಕುತ್ತ ಅವನನ್ನು ಹುಡುಕುತ್ತ ಹೊರಟ. ಇನ್ನೊಂದು ಅರ್ಧ ಗಂಟೆ ಕಳೆದ ನಂತರ ಒಬ್ಬರನ್ನೊಬ್ಬರು ಬೈಯುತ್ತ ಇಬ್ಬರೂ ಹಿಂದಿರುಗಿದರು. ಬಸ್ಸು ಹೊರಟಿತು. ತಿರಥಗಡದ ಅಪರೂಪದ ಪ್ರವಾಸಿಗೆ ಯಾವ ಊರಿನ ತಿಕೀಟು ಕೊಡಬೇಕೆಂದು ಕಂಡಕ್ಟರನಿಗೆ ತಿರುಗಿ ತಲೆನೋವು ಪ್ರಾರಂಭವಾಯಿತು. ಪ್ರವಾಸಿಗಳಲ್ಲಿ ಒಬ್ಬನು ಕೆಸಲೂರದ್ದು ಕೊಡುವಂತೆ ಹೇಳಿದರೆ, ಇನ್ನೊಬ್ಬ ಕೊಕನಾರದ್ದು ಕೊಟ್ಟರೆ ಸರಿ ಎನ್ನುವ. ಕೊನೆಗೆ ದರಬಾ ತಿಕೀಟು ಕೊಡುವದು, ನಂತರ ಬೇಕಿದ್ದರೆ ಬೇರೆ ಕೊಟ್ಟರಾಯಿತೆಂದಾಗ ಎಲ್ಲರೂ ಒಪ್ಪಿದರು.

ಊರ ಹೊರಗೆ ಇರುವ ಕೆರೆಯ ಅಂಚಿನ ರಸ್ತೆಯನ್ನು ಬಳಸಿ ಮೋಟಾರು ಓಡಿತು. ಎರಡೂ ಮಗ್ಗಲಿಗೆ ಚಿಕ್ಕದಾಗಿ ಚೊಕ್ಕಟವಾಗಿರುವ ಮನೆಗಳ ಹಳ್ಳಿಗಳು. ನೆಲಕ್ಕೆ ಹಾಸಬಹುದಾದಂತಹ ಕೆಂಪು ಫರಶಿಕಲ್ಲುಗಳನ್ನು ಹಂಚಿನಂತೆ ಚಪ್ಪರಕ್ಕೆ ಹೊದಿಸಲಾಗಿತ್ತು. ಕಡುಬಡವರ ಮನೆಮಾಳಿಗೆ ಹುಲ್ಲು ಇಲ್ಲವೆ ಎಲೆಗಳಿದ್ದವು. ಗೋಡೆಗಳನ್ನು ಕೆಮ್ಮಣ್ಣಿನಿಂದ ಓರಣವಾಗಿ ಸಾರಿಸಿ ರಂಗವಲ್ಲಿಯ ವಿವಿಧ ನಕ್ಷೆಗಳನ್ನು ಬಿಡಿಸಲಾಗಿತ್ತು. ಗುಡಿಸಲ ಸುತ್ತಲಿರುವ ವಿಶಾಲ ಅಂಗಳವನ್ನು ಸಾರಿಸಿ ಜೋಲಿಗಳನ್ನು ನಿಲ್ಲಿಸಲಾಗಿತ್ತು. ಮನೆಯ ಹತ್ತಿರದ ಬೈಲಿನಲ್ಲಿ ಕುಸ್ತಿ ಆಟಗಾರರಿಗಾಗಿ ಏರ್ಪಡಿಸಿರುವ ಕಟಾಂಜನದ ಚೌಕಟ್ಟಿನಲ್ಲಿ ದನ-ಕರುಗಳನ್ನು ಕಟ್ಟಿದರು. ಹೆದ್ದಾರಿಯಲ್ಲಿ ಬರುಹೋಗುವವರ ಕಣ್ಣಿಗೆ ಬೀಳುವಂತೆ ನಿಲ್ಲಿಸಿದ ಮೃತ್ಯುಸ್ತಂಭಗಳು ಇದು ಮಾರಿಯುರ ಹಳ್ಳಿ ಎಂದು ಸಾರಿದವು.

ದೂರದ ಹೊಲಗಳಿಂದ ಆದಿವಾಸಿಗಳ ಮೆರವಣಿಗೆಯೊಂದು ಮುಖ್ಯ ಬೀದಿಯತ್ತ ಬರುವದನ್ನು ವೀಕ್ಷಿಸುತ್ತಿದ್ದಾಗ ನಾವು ಹೊರಟ ಬಸ್ಸು ಹೃದಯಾಘಾತದಿಂದ ನಡುದಾರಿಯಲ್ಲಿ ನಿಂತುಬಿಟ್ಟಿತು. ಹಿಂದಿನ ರಾತ್ರಿಯಿಡೀ ಅದು

ಡಿಪೋದಲ್ಲಿ ಇದ್ದರೂ ಅದರ ದುರಸ್ತಿಯತ್ತ ಗಮನ ಕೊಡದ್ದರಿಂದ ಅಲ್ಲಿಯೇ ಸ್ಪ್ಯಾನರ್, ಸ್ಕ್ರೂಡ್ರೈವರ್ ಸಂಶೋಧಿಸಿ ಕಾರುಭಾರ ಪ್ರಾರಂಭಿಸಿದರು. ಮಧ್ಯಪ್ರದೇಶ ಸಾರಿಗೆ-ಇಲಾಖೆಯವರು ನಾವು ಇಳಿಯಬೇಕಾದ ಸ್ಥಳ, ನೋಡಬೇಕಾದ ಹಳ್ಳಿಗಳನ್ನು ಹೇಗೆ ತಿಳಿದುಕೊಳ್ಳುತ್ತಾರೋ ಏನೋ! ಗಂಟೆಯನ್ನು ಬಾರಿಸದೇ, ಕಂಡಕ್ಟರನಿಗೆ ವಿನಂತಿಸಿಕೊಳ್ಳದೇ ಪ್ರವಾಸಿಗಳಿಗೆ ಬೇಕಾದಲ್ಲಿಯೇ ಬಸ್ಸು ನಾದುರಸ್ತಿಯಾಗುವ ಏರ್ಪಾಡು ಮಾಡಿರುತ್ತಾರೆ! ಅಂತೆಯೇ ಮೆರವಣಿಗೆಯನ್ನು ಅತಿ ಹತ್ತಿರದಿಂದ ನೋಡಲು, ಮಾರಿಯ ಹಳ್ಳಿಯೊಂದನ್ನು ಹತ್ತಿರದಿಂದ ನಿರೀಕ್ಷಿಸಲು ಸಾಧ್ಯವಾಯಿತು.

ಮೆರವಣಿಗೆ ಹತ್ತಿರವಾಗುತ್ತಿದ್ದಂತೆ ಯುವಕನೊಬ್ಬ ಜೇಬಿನಿಂದ ಒಂದೊಂದಾಗಿ ಗರ್ನಾಲ್ ತೆಗೆದು ಉರಿಹಚ್ಚಿ ಗಗನದತ್ತ ಎಸೆದಾಗ, ಅದು ಕಿಡಿಕಾರುತ್ತ ಭೊಡ್ ಭೊಡ್ ಭೊಡಲ್ ಎಂದು ಸ್ಫೋಟವಾಗಿ ಪರಿಸರದವರ ಲಕ್ಷ್ಯ ತನ್ನತ್ತ ಸೆಳೆದುಕೊಳ್ಳುವದರಲ್ಲಿ ಯಶಸ್ವಿಯಾಗುತ್ತಿತ್ತು. 'ಯಾರೋ ಪುಣ್ಯಮಾಡಿದವ' ಎಂಬ ಸಹಪ್ರಯಾಣಿಕರ ಉದ್ಗಾರದಿಂದ ಇದು ಶುಭ ಸೂಚಕ ಮೆರವಣಿಗೆಯಾಗಿರದೇ ಶವಸಂಸ್ಕಾರದ್ದೆಂದು ತಿಳಿಯಿತು. ಮುಂದೆ ಮುಂದೆ ಹೊರಟ ಪುರುಷರ ತಂಡದ ಹಿಂದೆ ಬಟ್ಟೆಯಲ್ಲಿ ಮುಚ್ಚಿದ ಶವದ ಹಿಂದೆ, ಹೆಂಗಳೆಯರ ಗುಂಪು ಇತ್ತು. ಶವಸಂಸ್ಕಾರವನ್ನು ಹೆಂಗಳೆಯರು ಕಣ್ಣಾರೆ ಕಂಡು ಹೇಗೆ ಸಹಿಸಿಕೊಳ್ಳುತ್ತಾರೋ ಎಂದು ಒಬ್ಬ ಅನುಮಾನವನ್ನು ವ್ಯಕ್ತ ಪಡಿಸಿದಾಗ, ಇನ್ನೊಬ್ಬ ಪ್ರಯಾಣಿಕ, "ಗೌರವಾರ್ಥವಾಗಿ ಶವವನ್ನು ಹಿಂಬಾಲಿಸುವದು ವಾಡಿಕೆ. ಆದರೆ ಚುರಮುರಿ ಬೀರಿ, ಧಾರ್ಮಿಕ-ವಿಧಿಗಳು ಮುಗಿದ ನಂತರ ಹೆಂಗಳೆಯರಿಗೆ ಮನೆಗೆ ಹೋಗಹೇಳಿ, ನಂತರ ಉಳಿದ ವಿಧಿಗಳನ್ನು ಮುಗಿಸುತ್ತಾರೆ" ಎಂದು ಇನ್ನೊಬ್ಬ ವಿವರಿಸುತ್ತಿರುವಾಗಲೇ ಸತ್ತಂತೆ ನಿಶ್ಚಲ ವಾಗಿದ್ದ ನಮ್ಮ ವಾಹನ ತಿರುಗಿ ಜೀವಕಳೆ ತುಂಬಿಕೊಂಡು ಚಲಿಸುವಂತಾದಾಗ ಹೆಚ್ಚಿನ ಆನಂದವಾಯಿತು.

ಹತ್ತಿರದ ಹಳ್ಳಿಯಲ್ಲಿ ವಾರದ ಸಂತೆ. ಆದಿವಾಸಿಗಳು ಹಬ್ಬದ ಉತ್ಸಾಹದಿಂದ ಹೊರಟಿದ್ದಾರೆ. ಕುಂಬಾರನು ಕೆಮ್ಮಣ್ಣಿನ ಆಕರ್ಷಕವಾದ ಮಡಿಕೆಗಳನ್ನು ಕೋಲಿನ ಎರಡು ತುದಿಗಳಿಂದ ಹಗ್ಗದ ಆಧಾರದಿಂದ ಇಳಿಬಿಟ್ಟು ಹೊರಟಿದ್ದಾನೆ. ಹನುಮಾನನು ಗಿರಿಪರ್ವತವನ್ನು ಹೊತ್ತ ಚಿತ್ರವನ್ನು ನೆನಪಿಗೆ ತರುವಂತೆ

ಒಬ್ಬ ಬಿದಿರು-ಬುಟ್ಟಿಗಳ ದೊಡ್ಡ ರಾಶಿಯನ್ನೇ ತಲೆಯ ಮೇಲೆ ಹೊತ್ತಿದ್ದಾನೆ. ಕಾಡಿನಿಂದ ಹೆಕ್ಕಿ ತಂದ ಹುಣಿಸೆಹಣ್ಣು ಕೊಳ್ಳಲು ವ್ಯಾಪಾರಿಗಳು ರಸ್ತೆ ಅಂಚಿನಲ್ಲಿ ತಕ್ಕಡಿಯೊಂದಿಗೆ ಸ್ಥಾಪಿತರಾಗಿದ್ದಾರೆ. ದಕ್ಷಿಣದ ಸಾಂಬಾರ್ ಸಾರುಗಳ ಪ್ರೇಮಿಗಳ ರಾಜ್ಯದಿಂದ ವ್ಯಾಪಾರಿಗಳು ಇಲ್ಲಿಯ ತನಕ ಬಂದು ಹುಣಿಸೆಹಣ್ಣು ಖರೀದಿಸಿ ಹೋಗುತ್ತಾರೆಂದು ಪ್ರಯಾಣಿಕನೊಬ್ಬ ಹೇಳಿದ.

ಈ ಕವಲುದಾರಿಯಿಂದ ತಿರಥಗಡ್ ಹತ್ತಿರವಾಗುತ್ತದೆ ಎಂದು ಯಾರೋ ಕೂಗಿದರು. ಕಾಡನ್ನು ಹಿಂದೆ ಹಾಕಿ ಗುಡ್ಡ ಹತ್ತಿ ಇಳಿದ ಬಸ್ಸಿಗೆ ಬ್ರೆಕ್ ಹಾಕಿದರು. ಅರೆ ನಿಮಿಷದಲ್ಲಿ ಮೋಟಾರ್ ತಿರುಗಿ ಓಡಿ ಮಾಯವಾದಾಗ ನಿರ್ಜನ-ಪ್ರದೇಶದಲ್ಲಿ ಬಂದಿಳಿದ ಅರಿವಾಯಿತು. ಏನೂ ಸಿಗದಿದ್ದರೂ ಕೊನೆಯ ಪಕ್ಷ ಚುರುಮುರಿ ಮಾರುವ ಅಂಗಡಿಯಾದರೂ ಇದ್ದೀತೆಂಬ ಊಹೆಯೂ ಸುಳ್ಳಾಯಿತು. ಹೊಟ್ಟೆ ಹಸಿದಿದ್ದರೂ, ಪ್ರಶಾಂತವಾದ ವಾತಾವರಣದಲ್ಲಿ ಹೊಸ ಹುಮ್ಮಸ್ಸಿನಿಂದ, ಕಾಡುಹಾದಿ ತುಳಿಯುತ್ತ ಹೊರಟೆ. ಮುಂಜಾವಿನ ಎಳೆ ಬಿಸಿಲಿನಲ್ಲಿ ಒಂದೆಡೆ ದಟ್ಟವಾದ ಕಾಡು ಹೊತ್ತು ನಿಂತ ಎತ್ತರದ ಗುಡ್ಡವಿದ್ದರೆ, ಇನ್ನೊಂದೆಡೆ, ಮಾನವನಿರ್ಮಿತ ತೇಗು-ಮರಗಳ ವನ. ಮರಗಳು ಯಾರು ಬೆಳೆಸಿದರೆ ತಮಗೇನೆಂದು ಕಣ್ಣು ಮುಚ್ಚಾಲೆ ಆಟದಲ್ಲಿ ಮೈಮರೆತಿದ್ದವು. ಪರ್ಣ ಸಂಗ್ರಹದಲ್ಲಿ ತೊಡಗಿದ ಆದಿವಾಸಿ ಕುಮಾರಿಯರು, ಈತನ್ಯಾರೋ ಅರಣ್ಯದ ಅಧಿಕಾರಿ ಇದ್ದಿರಬಹುದೇ ಎಂದು ಸಂಶಯದ ಕಣ್ಣುಗಳಿಂದ ನೋಡಿದರು. ಕಾಡಿನಲ್ಲಿ ಗೈದು ತಿನ್ನುವ ಬಡಪಾಯಿಗಳು ಭಾರವಾದ ಕೊಡಲಿ, ಹಾರೆಗೋಲುಗಳನ್ನು ಭುಜಕ್ಕೇರಿಸಿ ವೇಗದಿಂದ ಹೊರಟಿದ್ದರು. ಆ ಶಾಂತ ವಾತಾವರಣದಲ್ಲಿ ದೂರದಲ್ಲಿ ಜೀವಂತ ಮರದ ಕೊಲೆ ನಡೆಸಿದ ಸದ್ದು ಸ್ಫುಟವಾಗಿ ಕೇಳಿ ಬರುತ್ತಿತ್ತು. ಇಂಥವರಿಗೆ ಅರಣ್ಯಾಧಿಕಾರಿಗಳ ಆಶೀರ್ವಾದ ಇರುವಾಗ, ಯಾವ ಸರಕಾರ ತಾನೇ ಏನು ಮಾಡೀತು? ಅನತಿದೂರದಲ್ಲಿ ಆದಿವಾಸಿ ಗುಂಪೊಂದು ಬರುತ್ತಿತ್ತು. ಇಬ್ಬರು ಹೊತ್ತ ಕೋಲಿನಿಂದ ಸರಾಯಿ ತುಂಬಿದ ಭಾರಿ ಗಡಿಗೆಯೊಂದನ್ನು ತೂಗ ಹಾಕಿದ್ದರು. ನಡಿಗೆಯ ವೇಗಕ್ಕೆ ಸೆರೆ ತುಳುಕದಂತೆ ನಾಲ್ವರು ಗಡಿಗೆಯನ್ನು ನಿಯಂತ್ರಿಸುತ್ತಿದ್ದರು.

ರಸ್ತೆ ವಸನಿಬಿಡವಾದ್ದರಿಂದ ಚಕ್ಕಡಿಗಳು ಒಟ್ಟಾಗಿ ಹೋಗುವವೇ ಪಾಡಿಕೆ. ಏರು-ತಗ್ಗು ಹೆಚ್ಚಾಗಿರುವಲ್ಲಿ ಇಕ್ಕಟ್ಟಾಗಿರುವ ರಸ್ತೆಯ ಮೇಲೆ

ಸುರಕ್ಷಿತತೆಯ ಮೇಲ್ವಿಚಾರಣೆ ಮಾಡಲು ಹಳ್ಳಿಯ ದೇವತೆಗಳು, ಮೂರ್ತಿಗಳ ರೂಪ ತಾಳಿ ಅಲ್ಲಲ್ಲಿ ನಿಂತಿದ್ದವು. ದಾರಿಹೋಕರು ಹುಲ್ಲು, ಎಣ್ಣೆಗಳನ್ನು ಅರ್ಪಿಸಿ ಭಯಭಕ್ತಿಯಿಂದ ಗೌರವ ಸಲ್ಲಿಸಿಯೇ ಮುಂದೆ ಹೋದ ಕುರುಹುಗಳೆಲ್ಲ ಅಲ್ಲಿ ಇದ್ದವು. ದೇವರು ಆಕಾರರಹಿತನೆಂದು ಇವರೆಲ್ಲ ಮನಸಾ ಒಪ್ಪಿಕೊಂಡು ಯಾವುದಾದರೊಂದು ಬಂಡೆಗೋ ಕಲ್ಲಿಗೋ ದೇವರ ಮಾನ್ಯತೆ ಕೊಡುವರು! ದೂರದ ಊರುಗಳಿಗೆ ಪಯಣ ತೆಗೆದವರು ಅಲ್ಲಲ್ಲಿ ವಿರಮಿಸಿ ಮುಂದೆ ಹೋಗುವದು ವಾಡಿಕೆ. ಅಂತಹ ಸ್ಥಳಗಳಲ್ಲಿ ಗೋಮಯದ ರಾಶಿಯೊಂದಿಗೆ ಉರಿಸಿದ, ಉರಿಯುವ ಒಣಕಟ್ಟಿಗೆ ಅಲ್ಲಲ್ಲಿ ಹರಡಿಕೊಂಡಿರುತ್ತದೆ. ಜೊತೆಗೆ ಅಡಿಗೆಗೆ ಬಳಸಿದ ಮೂರು ಕಲ್ಲಿನ ಒಲೆ, ಹಸಿರು ಎಲೆಯ ದೊನ್ನೆಗಳು ಬಿದ್ದಿದ್ದವು. ಅಲ್ಲಲ್ಲಿ ಬಿದ್ದ ಎಂಜಲು-ಚೂರು ತಿನ್ನಲು ಮುತ್ತಿದ ಹಕ್ಕಿ, ಇರುವೆಗಳೂ ಅಲ್ಲಿದ್ದವು.

ಎದುರಿನ ರಸ್ತೆ ಹುಡಿಮಣ್ಣಿನಿಂದ ಕೂಡಿತ್ತು. ಚಕ್ಕಡಿಗಳ ಓಡಾಟ ಹೆಚ್ಚಿದಲ್ಲಿ ಯಾರೋ ನಾಶಿಪುಡಿಯನ್ನು ಹರವಿದಂತೆ ಭಾಸವಾಗುತ್ತಿತ್ತು. ಕಾಡೆಲ್ಲ ತಮ್ಮದನ್ನಾಗಿ ಮಾಡಿಕೊಂಡ ನಿಶಾಚರಪ್ರಾಣಿಗಳು ತಮ್ಮ ಕಾಲು ಗುರುತುಗಳನ್ನು ಮಣ್ಣಿನಲ್ಲಿ ಬಿಟ್ಟು ಹೋಗಿವೆ. ಹೆಣ್ಣಿನ ಸಂಶೋಧನೆಯಲ್ಲಿ ಹೊರಟ ಗಂಡು-ಮೊಲ, ಮರಿಯೊಂದಿಗೆ ಹೋದ ತಾಯಿ-ಮೊಲದ ಹೆಜ್ಜೆಗಳನ್ನೆಲ್ಲ ಗುರುತಿಸಬಹುದು. ಒಂದೆಡೆ ತಾಯಿ-ಮೊಲ ಮರಿಗೆ ಹಾಲುಣ್ಣಿಸಿರಬೇಕು. ಒಂದೆರಡು ಹನಿ ಮಣ್ಣಿನಲ್ಲಿ ಸಿಡಿದ ಕುರುಹುಗಳಿವೆ. ಹುಲಿರಾಯನಿಗಂಜಿ ಕಾಲಿಗೆ ಬುದ್ಧಿ ಹೇಳಿದ ಕಾಡುಹಂದಿಯ ಹೆಜ್ಜೆಗಳು ಆಳವಾಗಿದ್ದರಿಂದ ವೇಗವಾಗಿ ಓಡಿರಬೇಕೆಂದು ಊಹಿಸಬಹುದು. ಒಂದೆಡೆಗೆ ಕರಡಿಯ ಪಂಜಿನ ಗುರುತು ರಸ್ತೆಗೆ ಅಡ್ಡವಾಗಿ ಮೂಡಿತ್ತು. ಕಾಡು-ಕೋಳಿಗಳೂ ಹಾದುಹೋದ ಗುರುತುಗಳು ಇದ್ದವು. ಕಾಡುಪ್ರಾಣಿ-ಪಂಡಿತನು ಗುರುತಿಸಬಹುದಾದ ಅನೇಕ ಹೆಜ್ಜೆಗಳ ಗುರುತುಗಳಿದ್ದವು.

ಎದುರಿನಿಂದ ಹರಟೆ ಹೊಡೆಯುತ್ತ ಬರುತ್ತಿದ್ದ ಆದಿವಾಸಿಗಳಲ್ಲಿ ಒಬ್ಬನು ಧೈರ್ಯದಿಂದ 'ಜೈರಾಮಜಿಕಿ' ಹೇಳಿ 'ಈ ಕಾಡಿನಲ್ಲಿ ಒಬ್ಬರೇ ಎಲ್ಲಿಗೆ ಹೊರಟಿರುವಿರಿ?' ಎಂದು ವಿಸ್ಮಯಪಟ್ಟ. ಈಗ ರಸ್ತೆ ಏರಿನದಾಗಿದ್ದರಿಂದ ಏರಿ ಹೋದೆ. ಎದುರಿನ ನೋಟದಿಂದ ದಣಿವೆಲ್ಲ ಮಾಯವಾಯಿತು.

ಗುಡ್ಡಬೆಟ್ಟಗಳಿಂದ ಹರಿದುಬಂದು ನೀರು ತಗ್ಗಿನಲ್ಲಿ ಸಂಚಯವಾಗಿ ಮುಂದೆ ಕಿರಿಯ ಅಬ್ಬಿಯಾಗಿ ಜುಳುಜುಳು ನಾದಮಾಡುತ್ತ ತಡಸಲಿನತ್ತ ಧಾವಿಸುತ್ತಿತ್ತು. ದಂಡೆಯ ಮೇಲೆ ಕೊಬ್ಬಿ ನಿಂತ ಗಿಡಮರಗಳು ನೀರಿನ ಸಂಚಯಕ್ಕೆ ಹಸಿರು ಚೌಕಟ್ಟು ಹಾಕಿದ್ದವು. ಕೊಳದ ಬಳಿಯ ಕಿರು ಬಯಲಿನಲ್ಲಿ ಆದಿವಾಸಿಗಳು ಮಾಡಿದ ಪಂಕ್ತಿಯ ಕುರುಹುಗಳಿದ್ದವು. ಒಲೆಗಳು, ಉರಿದ ಕಟ್ಟಿಗೆ, ದೊನ್ನೆಗಳು, ಕೋಳಿಯ ಪುಚ್ಛಗಳು ಹಸಿವನ್ನು ಹೊಡೆದೆಬ್ಬಿಸಿದವು. ಸೊಗಸಾದ ಸೃಷ್ಟಿ ಸೌಂದರ್ಯವನ್ನು ಸವಿಯಬಹುದಾಗಿತ್ತೆ ವಿನಃ ತಿನ್ನುವಂತಿರಲಿಲ್ಲವಲ್ಲ !

ಸ್ವಲ್ಪ ಮುಂದೆ ಸಂಚಿತ ನೀರು ಮೂರು ನಾಲ್ಕು ಧಾರೆಗಳಲ್ಲಿ ಮೇಲಿನಿಂದ ಕೆಳಗೆ ಧುಮ್ಮಿಕ್ಕುತ್ತಿತ್ತು. ದೊಡ್ಡ ಬಂಡೆಗಲ್ಲುಗಳು ಧಾರೆಯನ್ನು ಅಡ್ಡಗಟ್ಟಿ, ನೊರೆ ಮಾಡಿ, ಕಣಿವೆಯಲ್ಲಿ ಹಾಲು-ನೊರೆಯನ್ನು ಚಿಮ್ಮಿಸುತ್ತಿದ್ದವು. ಎಡ ಬಲದಲ್ಲಿ ಎತ್ತರವಾದ ಪರ್ವತಾವಳಿ, ನಡುವೆ ಆಳವಾದ ಕಂದಕ, ಸತತ ನೀರಿನ ಸೆಳೆತದಿಂದಾಗಿ ಮಧ್ಯದಲ್ಲಿ ಒಂದು ನಡುಗಡ್ಡೆ ಉಂಟಾಗಿದೆ. ಯಾವನೋ ಪುಣ್ಯಾತ್ಮ ಅಲ್ಲಿ ಮೂರು ಗುಡಿಗಳನ್ನು ಕಟ್ಟಿಸಿ ತೀರ್ಥಸ್ಥಳವನ್ನಾಗಿ ಪರಿವರ್ತಿಸಿದ್ದಾನೆ. ಸಾಹಸಿಗಳಿಗೆ ಕಣಿವೆಯಲ್ಲಿ ಇಳಿದು ಹೋಗಲು ಕಚ್ಚಾ-ಪಾವಟಣಿಗೆಗಳಿವೆ. ಆಚೆ ದಂಡೆಯ ಮೇಲೆ ಸರಕಾರಿ-ವಿಶ್ರಾಂತಿಗೃಹ ಒಂದಿದ್ದರೂ ಅದು ಕೇವಲ ಅಧಿಕಾರಿಗಳಿಗೆ ಮೀಸಲು ಎಂದು ಬೇರೆ ಹೇಳಬೇಕಿಲ್ಲ. ಸರಕಾರಿ ವಾಹನ, ಪೆಟ್ರೋಲ್, ವಿಶ್ರಾಂತಿಗೃಹಗಳನ್ನು ಬಳಸಿ, ವಿಶ್ರಾಂತಿ ಪಡೆದು ಮೇಲು ಖರ್ಚಿಗೆ ಸಾರ್ವಜನಿಕರ ಹಣವನ್ನು ಕಿಸೆಗೆ ಸೇರಿಸುವದರಲ್ಲಿ ಸಾರ್ವಜನಿಕ ಸೇವಾ-ಖಾತೆ ದೇಶದಾದ್ಯಂತ ಖ್ಯಾತಿ ಪಡೆದಿದೆ.

ನೀರಿನ ಸೆಳೆತಕ್ಕೆ ಮಣ್ಣೆಲ್ಲ ಕೊಚ್ಚಿಕೊಂಡು ಹೋಗಿ, ಶಿಲೆಗಳಲ್ಲಿ ತಳೆದ ವಿವಿಧಾಕೃತಿಗಳು ನೋಡುವಂತಹವು. ಒಂದು ಬಂಡೆಯಂತೂ ನಿರಾಧಾರವಾಗಿ ಕಮಾನಿನಂತೆ ನಿಂತುದನ್ನು ನೋಡಿ ಪ್ರಕೃತಿಮಾತೆ ಬಹು ದೊಡ್ಡ ಕಲಾವಿದೆಯೆನಿಸಿತು. ಅದನ್ನು ಇದನ್ನು ನೋಡುತ್ತ ನಿರ್ಜನ-ರಮಣೀಯತೆಯಲ್ಲಿ ಮೈಮರೆತಾಗ ದೂರದಲ್ಲಿ ಕೋವಿ ಹಾರಿದ ಸದ್ದು ಕೇಳಿಸಿತು. ಹಕ್ಕಿಗಳೆಲ್ಲ ಆರ್ತಸ್ವರದಿಂದ ಮರಿಗಳನ್ನು ಎಚ್ಚರಿಸಿದವು. ಈ ಏಕಾಂತಸ್ಥಳದಲ್ಲಿ ಕಳ್ಳಕಾಕರಿಂದಾಗಲಿ, ಕಾಡುಪ್ರಾಣಿಗಳಿಂದಾಗಲಿ ಯಾವದೇ ಗಂಡಾಂತರ ಒದಗಬಹುದು ಅಂಥ ಸಂದರ್ಭಗಳಲ್ಲಿ ಸಹಾಯಕ್ಕೆ ಒಬ್ಬರೂ ಒದಗುವಂತಿಲ್ಲ.

ಹೀಗಾಗಿ ಬರುವಾಗ ಆದಿವಾಸಿ ಕೇಳಿದ ಪ್ರಶ್ನೆಯ ಆಳ ಅರಿಯುವಂತಾಯಿತು. ಬಂದ ದಾರಿಯಿಂದ ಹಿಂತಿರುಗಿದೆ.

ಈ ಜಲಪಾತಕ್ಕೆ ಇಲ್ಲಿಯ ಕೆಲ ಆದಿವಾಸಿಗಳಂತೆ ಆಧುನಿಕತೆಯ ಸೋಂಕು ತಗಲದ್ದರಿಂದ ಅದು ನಿಸರ್ಗಕ್ಕೆ ತುಂಬ ಹತ್ತಿರವಾಗಿದೆ. ಪ್ರಕೃತಿಯ ನಿಕಟ ಪರಿಚಯವಾಗಬೇಕಿದ್ದರೆ ಅದರ ಪರಿಸರವನ್ನು ಮಾನವನು ಬದಲಿಸದಿದ್ದಲ್ಲಿ ನೋಡಿದಾಗ ಮಾತ್ರ ಅದರ ಹೆಚ್ಚಿನ ಪರಿಣಾಮವಾಗುವದೆಂಬ ನಿರ್ಣಯಕ್ಕೆ ಬಂದು ಮುಖ್ಯರಸ್ತೆಗೆ ಬಂದು ಮುಂದಿನ ಪ್ರಯಾಣಕ್ಕಾಗಿ ಬಸ್ಸಿಗೆಂದು ಕಾತರತೆಯಿಂದ ಕಾದೆ.

# ೧೭. ಮುರಿಯಾ ಮೇಲಾ

ಶತಮಾನಗಳ ಹಿಂದಿನ ಜೀವನದ ಒಳನೋಟ ಕೊಡುವ ಮಧ್ಯಪ್ರದೇಶದ ಆದಿವಾಸಿಗಳು, ಬಸ್ತರ ಜಿಲ್ಲೆಯಲ್ಲಿಯೇ ನೆಲೆವೀಡು ಮಾಡಿಕೊಂಡಿದ್ದಾರೆ. ಕೊಂಡಾಗಾಂವ ಮತ್ತು ನಾರಾಯಣಪುರ ತಾಲೂಕುಗಳಲ್ಲಿ ಹರಡಿಕೊಂಡ ಮುರಿಯಾರು ತುಂಬ ಆಕರ್ಷಕರಾಗಿದ್ದು, ರಂಗುರಂಗಿನ, ಬೆಡಗಿನ ಜೀವನ ನಡೆಸುವದರಲ್ಲಿ ಹೆಸರುವಾಸಿಯಾಗಿದ್ದಾರೆ. ಆದರೆ ಅವರು ಜನಸಂಚಾರವಿಲ್ಲದ, ನಿಬಿಡವಾದ ಕಾಡು ಮತ್ತು ಗುಡ್ಡಗಾಡುಗಳಲ್ಲಿ ವಾಸಿಸುವದರಿಂದ, ಅವರನ್ನು ತೀರ ಹತ್ತಿರದಿಂದ ನೋಡುವದು ತೊಡಕಿನ ಕೆಲಸ. ವಾರಕ್ಕೊಮ್ಮೆ ಸೇರುವ ಸಂತೆಯಲ್ಲಿಯೋ ಅಥವಾ ವರ್ಷಕ್ಕೊಮ್ಮೆ ಸೇರುವ ಸುಗ್ಗಿ ಹಬ್ಬದಲ್ಲೊ ಅವರು ಒಂದೆಡೆ ಸೇರಿದಾಗ, ನಿರಾತಂಕವಾಗಿ ಅವರ ಜೀವನವನ್ನು ಅಭ್ಯಸಿಸಬಹುದು. ನಾರಾಯಣಪುರದಲ್ಲಿ ಸೇರುವ ಮೇಲಾ ಆ ಪ್ರದೇಶದಲ್ಲಿ ಅತಿ ದೊಡ್ಡದು.

ಅಂಚೆ, ತಂತಿ, ವರ್ತಮಾನಗಳು ಇಲ್ಲದ ಮುರಿಯಾ ಹಳ್ಳಿಗಳಿಗೆ ಜಾತ್ರಾ ದಿನದ ವಿವರಗಳು ಹೇಗೆ ಮುಟ್ಟುತ್ತವೆ ಎಂಬುದೇ ಆಶ್ಚರ್ಯದ ಮಾತು.

ಬಹುಶಃ ಸಂತೆಗಳಲ್ಲಿ ಮುಖದಿಂದ ಕಿವಿಗೆ ಹರಡಿದ ಸಮಾಚಾರ ಕಾಡಿನ ಪುಟ್ಟ ಹಳ್ಳಿಗಳಿಗೆ ತಲುಪುತ್ತಿರಬೇಕು. ಮೇಲಾಗಿ ಇನ್ನೆರಡು ದಿನಗಳಿರಬೇಕಾದರೇ ಮುರಿಯಶಾರು ಗಂಟುಮೂಟೆ ಕಟ್ಟಿಕೊಂಡು ಹೊರಟುಬಿಡುತ್ತಾರೆ. ಹಚ್ಚ ಹಸಿರು ಕಾಡಿನ ಕಾಲುದಾರಿಗಳಲ್ಲಿ ಕೆಂಪು, ಕೇಸರಿ, ಗುಲಾಬಿ, ಹಳದಿ ಮತ್ತು ಬಿಳೀ ಬಟ್ಟೆಗಳನ್ನು ಧರಿಸಿ, ಭಾರವಾದ ಒಜ್ಜೆಗಳೊಂದಿಗೆ ವಾಯುವೇಗದಿಂದ ಹೊರಟ ಭೂಮಾತೆಯ ಈ ಖಾಸಾ ಮಕ್ಕಳನ್ನು ನೋಡುವದೇ ಕಣ್ಣಿಗೊಂದು ಸೊಗಸು. ಅವರು ಮುಖ್ಯ ಬೀದಿ, ರಾಜಮಾರ್ಗಗಳಿಗೆ ದುಂಬಾಲುಬೀಳದೇ ಮುಳ್ಳು, ಕಂಟಿ, ಕಲ್ಲುಗಳನ್ನು ಲೆಕ್ಕಿಸದೇ ತಮ್ಮದೇ ಕಾಲುದಾರಿ ತುಳಿಯುತ್ತ ವೇಗವಾಗಿ ನಡೆದಾಗ, ದೂರದಿಂದ ಮೋಡಗಳಂತೆ ತೇಲುತ್ತ ಹೋದ ಭಾಸ ವಾಗುತ್ತದೆ. ಪ್ರಯಾಣದಲ್ಲಿ ಅವರು ಗಿಳಿವಿಂಡುಗಳು ಹಾರಿದಂತೆ ಒಟ್ಟಾಗಿ ಹೊರಡುತ್ತಾರೆ. ಒಂದೆಡೆ ವಿಶ್ರಾಂತಿಸುವಾಗ ಮಕ್ಕಳು ನಾಯಕನನ್ನು ಅನು ಕರಿಸುವ ಆಟ ನೆನಪಿಗೆ ಬರುತ್ತದೆ. ರೆಂಬೆಗಳು ವಿಸ್ತಾರವಾಗಿ ಹರಡಿದ ಮರದ ನೆರಳಿನಲ್ಲಿ ಕುಳಿತು, ತುಂಬಾದಲ್ಲಿ ತುಂಬಿ ತಂದ ನೀರನ್ನು ಕುಡಿದು ದಣಿವಾರಿಸಿ ಕೊಳ್ಳುವರು. ರಸಿಕರು ಜೊತೆಯಲ್ಲಿ ತಂದ ಲಾಂದಾ, ಮಹುವಾ ಸೆರೆಗಳನ್ನು ಅಲ್ಪಸ್ವಲ್ಪ ಸೇವಿಸಿ, ಗೆಳೆಯರೊಂದಿಗೂ ಪಾಲುಗೊಂಡು ಪ್ರಯಾಣವನ್ನು ಮುಂದುವರಿಸುವರು.

ಒಡ್ಡು ಹಾಕಿ ನಿರ್ಮಿಸಿದ ವಿಶಾಲವಾದ ಕೆರೆಯ ದಡದಲ್ಲಿ, ವಿಸ್ತಾರವಾದ ಬಯಲಿದೆ. ಸುತ್ತಮುತ್ತಲು ಬೆಳೆದು ನಿಂತ ಹೆಮ್ಮರಗಳು ಕಾಡನ್ನು ಹೋಲುವ ಈ ತಾಣ, ಮುರಿಯಾ ಮೇಲಾಕ್ಕೆ ಅತಿ ಯೋಗ್ಯ ಸ್ಥಳವೆನಿಸಿತು. ಸೂರ್ಯಾಸ್ತದ ಗಗನ ಹೊಂಗಿರಣಗಳಿಂದ ಹೊಳೆಯುತ್ತಿತ್ತು. ಈ ಹಿನ್ನೆಲೆ ಯಲ್ಲಿ ಒಡ್ಡಿನ ಬದಿಯಿಂದ ಸಾಮಾನುಗಳನ್ನು ಹೊತ್ತು ಒಂಟಿ ಸಾಲಿನಲ್ಲಿ ಹೊರಟ ಆದಿವಾಸಿಗಳ ತಂಡ, ಚಲಚ್ಚಿತ್ರವನ್ನು ನೆನಪಿಗೆ ತರುತ್ತದೆ. ಉದ್ದ ಗಳಕ್ಕೆ ಹಗ್ಗಗಳಿಂದ ತೂಗುಬಿಟ್ಟ ಬೆತ್ತದ ಬುಟ್ಟಿಗಳಲ್ಲಿ ಅಡಿಗೆಗೆ ಬೇಕಾಗುವ ಅಲ್ಪ ಸಾಮಾನುಗಳಿವೆ. ನೀರು, ಸೆರೆಗಳನ್ನು ತುಂಬಿದ ತುಂಬಾಗಳೂ ಹೆಗಲಿ ನಿಂದ ಜೋತುಬಿದ್ದಿರುತ್ತವೆ. ಮಾರಾಟಕ್ಕೆ ತಂದ ಬುಟ್ಟಿ, ಚಾಪೆ, ಕಸಬರಿಗೆ ಗಳೂ ತಲೆಯನ್ನು ಅಲಂಕರಿಸಿವೆ. ತಮ್ಮ ಸತತ ಸಂಗಾತಿಗಳಾದ ಬಿಲ್ಲು-ಬಾಣ, ಟಾಂಕಿ (ಕೊಡಲಿ)ಗಳನ್ನು ಮರೆತಿಲ್ಲ ಅವರು. ಯುವಕರು ತಮ್ಮ ನೃತ್ಯದ

ಸಾಮಾನುಗಳಿರುವ ಬೆತ್ತದ ಬುಟ್ಟಿಗಳನ್ನು ಹೊತ್ತಿದ್ದಾರೆ. ಮೇಲಾಸ್ಥಳಕ್ಕೆ ಹೋಗಲು ಇಳಿಜಾರಾದ ಕಾಲುಹಾದಿಯನ್ನು ತಡೆತಡೆದು ಇಳಿಯುತ್ತ, ಬಯಲಿನಲ್ಲಿ ಬೆಳೆದ ಮಹುವಾ, ಸಾಲ, ಸಾಗವಾನಿ(ತೇಗು)ಮರಗಳಲ್ಲೊಂದನ್ನು ಆರಿಸಿ, ಅದರ ಕೆಳಗೆ ಬೀಡುಬಿಡಲಾರಂಭಿಸಿದರು. ಅಲ್ಲಲ್ಲಿ ಬಿದ್ದ ಮರಗಳ ಒಣರಂಬೆ, ಬರಲುಗಳನ್ನು ತಂದು ನೆಲವನ್ನು ಸ್ವಚ್ಛವಾಗಿ ಗುಡಿಸಿ, ಧೂಳು ಏಳದಂತೆ ನೀರು ಸಿಂಪಡಿಸಿ, ಸಾಮಾನುಗಳನ್ನು ಬಿಡಿಸಲಾರಂಭಿಸಿದರು. ಹೆಂಗಳೆಯರು ಅಡಿಗೆ-ಸಾಮಾನುಗಳನ್ನು ಜೋಡಿಸಲಾರಂಭಿಸಿದರು. ಯುವಕನೊಬ್ಬ ಕೊಡಲಿಯಿಂದ ಕಾಲುವೆಯಂತಹ ಪುಟ್ಟ ಹೊಂಡ ತೋಡಿದ. ಹೊತ್ತು ತಂದ ಕಟ್ಟಿಗೆಯನ್ನು ಅದೇ ಕೊಡಲಿಯಿಂದ ಸೀಳಿದ. ಹೊಂಡದಲ್ಲಿ ಕಟ್ಟಿಗೆ ಒಟ್ಟಿ ಒಲೆ ಹೂಡಲಾಯಿತು. ಬೆಳಕಿಗಾಗಿ, ಬೆಚ್ಚಗಿಡುವದಕ್ಕಾಗಿ ಧಗಧಗ ಉರಿಯುವ ಬೆಂಕಿಯೊಂದನ್ನು ಮಾಡಿ, ಅದರ ಸುತ್ತ ದೊನ್ನೆಗಳನ್ನು ರಚಿಸುತ್ತಲೋ, ಅಕ್ಕಿಯನ್ನು ಹೆಕ್ಕುತ್ತಲೋ ಹರಟುತ್ತ ಕೆಲಸಗಳಲ್ಲಿ ಮೈ ಮರೆತರು.

ಕೊಂಡಾಗಾಂವ, ಜಗದಲಪುರದಂತಹ ದೂರದೂರದ ಊರಿನಿಂದ ಬಂದ ವ್ಯಾಪಾರಿಗಳು ತಾತ್ಪೂರ್ತಿಕ ಅಂಗಡಿಗಳನ್ನು ನಿಲ್ಲಿಸುವದರಲ್ಲಿ ಮಗ್ನರಾಗಿದ್ದರು. ಒಂದೆಡೆ ಲೋಹದಂಗಡಿಗಳಲ್ಲಿ ಹಿತ್ತಾಳೆಪಾತ್ರೆಗಳನ್ನು ಸೈನಿಕ-ಶಿಸ್ತಿನಿಂದ ನಿಲ್ಲಿಸಿ ದರೆ, ಬಡವರ ಬೆಳ್ಳಿಯಂತೆ ಇದ್ದ ಎಲುಮಿನಿಯುಮ್ ಪಾತ್ರೆಗಳನ್ನು ನೆಲದ ಮೇಲೆಲ್ಲ ಹರವಿಹಾಕಿದ್ದರು. ಟಾಂಕಿ, ಹಾರೆ, ಹಾಗೂ ಕತ್ತಿಗಳನ್ನು ಜೋಡಿಸಿ ಇಟ್ಟಿದ್ದರು. ತಿಂಡಿಗಳ ಅಂಗಡಿಗಳಲ್ಲಿ ಚುರಮುರಿ, ಅರಳು, ಸೇವು, ಲಾಡು, ಬತ್ತಾಸಗಳಿದ್ದವು. ಕೇವಲ ಆದಿವಾಸಿಗಳು ಮಾತ್ರ ಉಡಬಲ್ಲ ರಬ್ಬುಬಣ್ಣದ ಸೀರೆಗಳ ರಾಶಿಯನ್ನೇ ಹಾಕಿದ್ದರು. ಮಣಿಸರ, ಕವಡೆಸರ, ಗರಿಗಳು, ಪುಚ್ಛಗಳು, ಬಾಚಣಿಕೆ, ಬೆಳ್ಳಿಯನ್ನು ನಾಚಿಸುವಂತಹ ಮಿನುಗುವ ಕೃತಕ ಆಭರಣಗಳು, ಪೀಪಿ, ಬಲೂನು ಎಲ್ಲವೂ ಮಾರಾಟಕ್ಕೆ ಬಂದಿದ್ದವು. ವಿವಿಧ-ವಿನೋದಾವಳಿಗಳನ್ನು ಪೂರೈಸುವ ಹಾವಾಡಿಗ, ತೂಗುವ ತೊಟ್ಟಿಲು, ಡೊಂಬರಾಟ, ವಿಚಿತ್ರ ಮನುಷ್ಯನ ಪ್ರದರ್ಶನ, ದೇವದರ್ಶನ ಮಾಡಿಸುವವರೆಲ್ಲ, ಮರುದಿನದ ವ್ಯಾಪಾರದ ಬಗ್ಗೆ ವಿಚಾರವಿಮರ್ಶೆ ನಡೆಸಿದ್ದರು.

ಮರುದಿನ ಬೆಳಕು ಹರಿಯುವದರೊಳಗೆ ಮೇಲಾಸ್ಥಳ ಚಟುವಟಿಕೆ

ಯಿಂದ ತುಂಬಿ ತುಳುಕಿತು. ಮಾರಿಯಾರು ಹತ್ತಿರದ ಕಾಡಿನಲ್ಲಿ ಪ್ರಾತರ್ವಿಧಿ ಮುಗಿಸಿಕೊಂಡು, ಕೆರೆಗೋ, ಹತ್ತಿರದ ಮಡುವಿಗೋ ಸ್ನಾನಕ್ಕೆ ತೆರಳಿದರು. ನಿರ್ಜನ ಕಾಡಿನ ಪರಿಸರಲ್ಲಿ ಸ್ವಚ್ಛಂದವಾಗಿ ಇರುವಂತೆಯೇ, ಬರಿಮೈಯಿಂದ ಆದಿವಾಸಿ ಮಹಿಳೆಯರು ಸ್ನಾನಕ್ಕಿಳಿದಾಗ ಪಾಶ್ಚಾತ್ಯ ನಗ್ನ-ಶಿಬಿರವನ್ನು ನೆನಪಿಗೆ ತರುತ್ತಾರೆ. ಅಂತರವಿಷ್ಟೇ ಅಲ್ಲಿಯ ನಗ್ನತೆ ಕೃತಕವಾದರೆ ಇದು ಸಹಜವಾದದ್ದು. ಅಲ್ಲಿ ಎಲ್ಲರೂ ದುಂಡಗಿರಬೇಕೆಂಬ ಕಡ್ಡಾಯವಿದ್ದರೆ ಇಲ್ಲಿ ಅದಿಲ್ಲ. ಕೂದಲು ಹಿಕ್ಕಿ, ಬಾಚಿ, ಮುಡಿಕಟ್ಟಿ, ಕೆಂಪು, ಹಳದಿ ರಿಬನ್‌ಗಳಿಂದ ತಯಾರಿಸಿದ ಹೂವು, ಕ್ಲಿಪ್, ಬಾಚಣಿಗೆ, ಗರಿಗಳನ್ನು ಧರಿಸಿದರೆಂದರೆ ಅವರ ಅಲಂಕಾರ ಪೂರ್ಣ ವಾದಂತೆ. ಶಿರಶೃಂಗಾರಕ್ಕಾಗಿ ಇಷ್ಟು ಆಸ್ಥೆ ವಹಿಸುವವರು ಉಬ್ಬೆದೆಗಳನ್ನು ಮುಚ್ಚಲು ಯಾವ ಯತ್ನವನ್ನೂ ಮಾಡುವದಿಲ್ಲ. ಹೀಗಾಗಿ ಕೊರಳ ಆಭರಣ ಗಳೆಲ್ಲ ಸ್ತನಾಲಂಕಾರಗಳಂತೆ ಭಾಸವಾಗುತ್ತದೆ. ಕಿಲಕಿಲನೆ ನಗುತ್ತ ಸಖಿಯ ರೊಂದಿಗೆ ಮೇಲಾಸ್ಥಳಕ್ಕೆ ಹೊರಟ ಆದಿವಾಸಿ ಯುವತಿಯರೆದುರು, ಹೊಯ್ಸಳ ಶಿಲಾಬಾಲಿಕೆಯರು, ಖಜುರಾಹೊ ಸುರಸುಂದರಿಯರು ಮಣ್ಣು ಮುಕ್ಕಬೇಕು !

ಮುರಿಯಾ ಯುವಕರೂ ಅಲಂಕಾರದಲ್ಲಿ ಹಿಂದೆ ಬೀಳುವದಿಲ್ಲ. ಯಕ್ಷ ಗಾನದ ಹೆಣ್ಣುವೇಷಧಾರಿಗೆ ಇರುವಂತಹ ಕೇಶರಾಶಿಯನ್ನು ಮಾಟವಾಗಿ ಬಾಚಿ, ಮುಡಿಕಟ್ಟಿ, ಅದಕ್ಕೊಂದು ಬಾಚಣಿಗೆ ಸಿಕ್ಕಿಸಿ, ಅದರ ಮೇಲೆ ನೆತ್ತಿ ಯನ್ನು ಮುಚ್ಚದ ಎತ್ತರವಾದ, ಬಿಗಿಯಾದ ರುಮಾಲು ಸುತ್ತಿಕೊಳ್ಳುವರು. ರುಮಾಲು ಎದುರಿನಿಂದ ನೋಡುವವರಿಗೆ ಭವ್ಯವಾಗಿ ಕಂಡರೂ, ಮೇಲಿನಿಂದ ನೋಡುವವರಿಗೆ ಬಟ್ಟೆಯ ಅಸ್ಥಿಪಂಜರದಂತೆ ಭಾಸವಾಗುವದು. ಇದಕ್ಕೆ ಆಕರ್ಷಕವಾದ ಹಕ್ಕಿಯ ಗರಿಗಳನ್ನು ಸಿಕ್ಕಿಸಿಕೊಂಡರೆಂದರೆ ಗಂಡು-ನವಿಲೂ ನಾಚಿ ತಲೆ ತಗ್ಗಿಸಬೇಕು. ರಸಿಕರು ಕೆಂಪು, ಕೇಸರಿ, ಹಳದಿ ಗೊಂಡೆ ಹೂಗಳನ್ನು ರುಮಾಲಿಗೆ ಸಿಕ್ಕಿಸಿಕೊಂಡು ಕಿವಿಗೂ ಮುಡಿದುಕೊಂಡಾಗ ಕಾಮದೇವನ ಸೈನಿಕರು ಧರೆಗೆ ಇಳಿದಂತೆ ಭಾಸವಾಗುತ್ತದೆ. ಕವಡೆ, ಮಣಿಸರಗಳಿಂದ ಮುಡಿ ಯನ್ನು ಅಲಂಕರಿಸಿಕೊಳ್ಳುವವರಿದ್ದಾರೆ. ತೋಳು, ಮುಂಗೈಗಳಿಗೆ ಲೋಹದ ಬಳೆಗಳನ್ನು ತೊಡುತ್ತಾರೆ. ಕಿರಿಪಂಚೆಯನ್ನು ಕಚ್ಚೆ ಹಾಕಿ ನಂತರ ಲುಂಗಿಯಂತೆ ಚಮತ್ಕಾರವಾಗಿ ಉಡುವ ಕಲೆಯನ್ನು ಸಾಧಿಸಿದ್ದಾರೆ. ವಿನೋದದ ಸಂಗತಿ ಯೆಂದರೆ ಯುವಕರು, ಯುವತಿಯರಿಗಿಂತ ಹೆಚ್ಚಿನ ಬಟ್ಟೆ ಧರಿಸುತ್ತಾರೆ.

ಹೆಂಗಳೆಯರು ಮೇಲ್ಭಾಗವನ್ನು ಮುಚ್ಚಿಕೊಳ್ಳುವದಿಲ್ಲ. ಗಂಡಸರು ಮೈಗೆ ಅಂಟುವ ಕಿರಿ ಬನಿಯನ್‌ಗಳನ್ನು ಧರಿಸಿ ಅದರೊಳಗೆ ಬೀಡಿ, ನೋಟು ಮುಂತಾದವನ್ನು ಸೇರಿಸಿರುತ್ತಾರೆ. ಸ್ವಲ್ಪ ಸ್ಥಿತಿವಂತರು ಶರ್ಟ, ಜೆಕೆಟ್ ಧರಿಸಿದರೆ, ಹಳಬರು ಕಂಬಳಿಯಿಂದ ತಾವೇ ತಯಾರಿಸಿದ ಬೆಚ್ಚಗಿನ ಕೋಟು ತೊಟ್ಟಿರುತ್ತಾರೆ. ಸೈನ್ಯದವರು ಉಟ್ಟು ಬಿಟ್ಟ ಸಮವಸ್ತ್ರ, ಪಾಶ್ಚಾತ್ಯರು ದಾನವಾಗಿ ಕೊಟ್ಟ ಬಟ್ಟೆಗಳನ್ನು ಧರಿಸಿದವರೂ ಇದ್ದರು.

ಮಾರಿಯಾರು ಸಮಾನತೆಯಲ್ಲಿ ವಿಶ್ವಾಸವಿಟ್ಟವರಾದ್ದರಿಂದ ಅವರಲ್ಲಿ ಗಂಡು ಹೆಣ್ಣು ಎಂಬ ಹಿಣ ಮಡಿವಂತಿಕೆಯಿಲ್ಲ. ಅಂತೆಯೇ ಗೆಳೆಯ-ಗೆಳತಿಯರು ಪಾಶ್ಚಿಮಾತ್ಯರನ್ನೂ ನಾಚಿಸುವಂತೆ, ಕೈ-ಕೈಹಿಡಿದು, ಇಲ್ಲವೆ ಸೊಂಟ ಬಳಸಿ ಮೇಲಾದಲ್ಲಿ ಮೋಜಾಗಿ ನಡೆಯುತ್ತಿರುತ್ತಾರೆ. ಅವರ ಆತ್ಮೀಯತೆ, ಸ್ನೇಹ ಪರತೆ, ಸರಳ ನಡತೆಗಳು, ನಾಗರಿಕರೆನಿಸಿಕೊಂಡ ಬೇರಾವ ಭಾರತೀಯರಲ್ಲೂ ಕಾಣಸಿಗದು. ಎಳೆದಾಟ, ಓಡಾಟ, ಗಹಗಹಿಸುವ ನಗೆ, ಅವರಿಗೆ ಉಸಿರಾಡಿಸಿ ದಷ್ಟು ಸಹಜವಾಗಿ ಬರುತ್ತದೆ. ತಾನು ಕೊಳ್ಳಬೇಕೆಂದಿರುವ ಬಳೆ, ಸೀರೆಗಳನ್ನು ಏಕಾಗ್ರತೆಯಿಂದ ನೋಡುತ್ತ ನಿಂತಾಗ, ಪರಿಚಯದವನೋರ್ವನು ಅನಿರೀಕ್ಷಿತ ವಾಗಿ ಅವಳನ್ನು ಹಾಯ್ದಾಗ, ಇಲ್ಲವೆ ತಬ್ಬಿಕೊಂಡಾಗ, ಹೌಹಾರುವ ಬದಲಾಗಿ ನಗೆಯ ತೆರೆಯನ್ನು ತೇಲಬಿಟ್ಟು, ಆತನನ್ನು ಗುದ್ದಿ, ಕಿವಿ ಹಿಂಡಿ ಮುಯ್ಯಿ ತೀರಿಸಿಕೊಳ್ಳುವಳು. ಅವರ ಈ ಸರಳತನದ ದುರುಪಯೋಗವನ್ನು ಪಡೆದು, ಆಧುನಿಕರು, ಬೇಕೆಂದೇ ಅವರಿಗೆ ಢಿಕ್ಕಿಹೊಡೆದು ಮೈ ಸ್ಪರ್ಶಿಸಿ ಸುಖಿಸಲು ಯತ್ನಿಸುವರು. ಆದರೆ ಆ ಅಬಲೆಯರಿಗೆ ಪಟ್ಟಣದವರ ಈ ವರ್ತನೆ ಅರ್ಥ ವಾಗದೇ, ಹೌಹಾರಿ ಹೆದರಿದ ಮಗು ತಾಯಿಯನ್ನು ಸೇರಿಕೊಳ್ಳುವಂತೆ ಓಡಿ ತಮ್ಮ ತಂಡವನ್ನು ಸೇರಿಕೊಳ್ಳುವರು. ಕ್ಯಾಮರಾ ಕಂಡಾಗಲೂ ಹುಲಿಯನ್ನು ಕಂಡ ಹುಲ್ಲೆಯಂತೆ ಕಾಲಿಗೆ ಬುದ್ಧಿ ಹೇಳುವಳು. ಅವರೆಲ್ಲ ಗುಂಪು ಗುಂಪಾಗಿಯೇ ತಿಂಡಿ, ತೀರ್ಥ ಸ್ವೀಕರಿಸುವರು, ಜೇಪ್ಪೆಮಾಡುವರು, ಜಾತ್ರೆಯ ತೋಟ್ಟಿಲಲ್ಲಿ ಕುಳಿತು ತೂಗಿಸಿಕೊಳ್ಳುವರು.

ಕಾಡಿನಲ್ಲಿ ಬೆಳೆದ ಮಾರಿಯಾರಿಗೆ ಕಟ್ಟಿಗೆಯನ್ನು ನೀರಿನಂತೆ ಬಳಸಿ, ನೀರನ್ನು ಅಮೃತದಂತೆ ಬಳಸಿ ರೂಢಿ. ಅಂತೆಯೇ ಹೊರುವಷ್ಟು ಕಿರಿಡನ್ನು ತಮ್ಮೊಂದಿಗೆ ತಂದು, ಕಡಿಮೆ ಬಿದ್ದುದನ್ನು ಸುತ್ತಮುತ್ತಲಿನಿಂದ ಸಂಗ್ರಹಿಸು

ತ್ತಾರೆ. ಅವರ ಅಡಿಗೆ ಒಂದು ಸಾಮಾಜಿಕ ಚಟುವಟಿಕೆ. ಯುವಕರು ನೀರು ಹೊತ್ತು ತಂದರೆ, ಯುವತಿಯರು ಊಟಕ್ಕೆ ಬೇಕಾಗುವ ದೊನ್ನೆಗಳನ್ನು ಜೊತೆಯಲ್ಲಿ ತಂದ ಹಸಿರು ಎಲೆಗಳಿಂದ ತಯಾರಿಸುವರು. ಹೆಂಗಳೆಯರು ಮಣ್ಣಿನ, ಇಲ್ಲವೇ ಎಲುಮಿನಿಯಮ್ ಪಾತ್ರೆಗಳಲ್ಲಿ ಅನ್ನ, ಪಲ್ಯ ಬೇಯಿಸಲು ಇಡುವರು. ಮಾರಾಟಕ್ಕಾಗಿ ತಂದ ಸಾಮಾನು ವಿಕ್ರಯವಾದರೆ, ಬಂದ ಹಣ ದಿಂದ ಒಂದಿಷ್ಟು ತರಕಾರಿ, ಮಾಂಸವನ್ನು ಅಡಿಗೆಗೆ ಸೇರಿಸುವರು. ಸುತ್ತ ಮುತ್ತಲ ಸ್ಥಳದ ಸ್ವಚ್ಛತೆಯನ್ನು ಅವರು ಕಾಯ್ದುಕೊಳ್ಳಲು ಯತ್ನಿಸಿದರೂ ಕಾಗೆ, ದನಕರುಗಳು ದೊನ್ನೆಗಳನ್ನು ಎಲ್ಲೆಡೆ ಹರವಿ ಕೊಳಚೆ ಮಾಡಿಬಿಡುತ್ತವೆ.

ಹಿಂದಿನ ದಿನವೇ ಬರಲಾಗದವರು ಜಾತ್ರೆಯ ದಿನ ನಸುಕಿನಲ್ಲೆ ಎದ್ದು ಕೊಡಲಿ ಮತ್ತು ಕೋಳಿಗಳೊಂದಿಗೆ ನಾರಾಯಣಪುರಕ್ಕೆ ಬಂದು ಸೇರಿದರೆಂದರೆ ಮೇಲಾಕ್ಕೆ ರಂಗೇರುತ್ತದೆ. ಡೊಂಬರಾಟದವರು ಡೋಲು ಬಾರಿಸಿ, ಬಿನ್ನಾಣ ಗಿತ್ತಿಯರಿಂದ ಅಂಗವಿನ್ಯಾಸವನ್ನು ಮಾಡಿಸುತ್ತ, ಸಿನಿಮ ಹಾಡುಗಳಿಂದ ಪ್ರೇಕ್ಷಕರನ್ನು ಆಕರ್ಷಿಸಲು ಯತ್ನಿಸಿದರೂ ಈ ನಟನೆಯ ಪ್ರೇಮದಾಟ ರುಚಿಸದಿದ್ದ ಮಾರಿಯಾ ಯುವಕರು, ಪ್ರಿಯತಮೆಯ ಕೈ ಹಿಡಿದುಕೊಂಡು, ಆಟಿಗೆಯ ಬಂದೂಕಿನಿಂದ ಫುಗಾ (ಬಲೂನ)ಗಳನ್ನು ಗುರಿಯಿಟ್ಟು ಹೊಡೆ ಯುವ ಆಟ ನೋಡಲು ಹೋಗುತ್ತಾರೆ. ತಾನು ಬಿಲ್ಲು-ಬಾಣಗಳನ್ನು ಇದಕ್ಕೂ ಉತ್ತಮವಾಗಿ ಬಳಸಿ ಬೇಟೆಯನ್ನು ಕೆಡವಬಲ್ಲೆ ಎಂದು ಅಭಿಮಾನ ತಾಳಿ ಮುಂದಕ್ಕೆ ಹೋಗುತ್ತಾರೆ. ಹತ್ತುಪೈಸೆಯ ಪೀಪಿ, ನಾಲ್ಕಾಣೆಯ ಫುಗಾ ಕೊಂಡು ಮಗುವಿನಂತೆ ಆನಂದಿಸುವರು. ಹವೆಯಿಂದ ತಿರುಗುವ ಗಿರಗಟ್ಲಿ ನೋಡಿ ಅವರಿಗೆ ಬಹಳೇ ವಿಸ್ಮಯ ! ಅವನ್ನೂ ಕೊಂಡು, ಆಭರಣದಂತೆ ಕೂದಲಿಗೆ ಅದನ್ನು ಸಿಕ್ಕಿಸಿ ಮೇಲಾ ತುಂಬ ಓಡಾಡುವ ಯುವಕರನ್ನು ನೋಡಿದಾಗ ಅಲ್ಲಿಯ ಹವಾಗಿರಣಿ(windmills)ಗಳನ್ನು ಹೊತ್ತ ಹಾಲಂಡೇ ಭಾರತಕ್ಕೆ ಬಂದ ಭಾಸವಾಗುತ್ತದೆ. ಗಂಡು ಹೆಣ್ಣು ಜೋಡಿ ಜೋಡಿಯಾಗಿ ತೂಗು ತೊಟ್ಟಿಲಲ್ಲಿ ಕುಳಿತಾಗ ಅವರು ಆಕಾಶದಲ್ಲಿ ಓಡಾಡಿದಂತೆ ಹಿಗ್ಗಿ ಆನಂದಿಸುತ್ತಾರೆ.

ದೂರದ ಗುಡಿಯಲ್ಲಿ ನಗಾರೆಯ ವಾದ್ಯ ಭೋರ್ಗರೆಯಲು ಪ್ರಾರಂಭಿಸಿ ದಾಗ ಮಾರಿಯರ ನಡಿಗೆ ಚುರುಕಾಗುವದು. ಎಲ್ಲರೂ ಅತ್ತ ಧಾವಿಸುವರು:

ದಂತೇಶ್ವರಿ ದೇವಿಯನ್ನು ಪಲ್ಲಕ್ಕಿಯಲ್ಲಿ ಕೂಡ್ರಿಸಿ, ಕೆಂಪು, ಬಿಳಿ, ಪತಾಕೆಗಳನ್ನು ಗಾಳಿಯಲ್ಲಿ ಹಾರಿಸುತ್ತ ತೋರಣ ಹಿಡಿದವರು, ನಗಾರೆ ಬಾರಿಸುವವರೊಂದಿಗೆ ಮುಖ್ಯ ಪೂಜಾರಿ ಕೋಡಂಗಿಯಂತೆ ಕೆಂಪು ಬಟ್ಟೆ ಧರಿಸಿ, ಆವೇಶ ಬಂದವನಂತೆ ಕುಣಿಯುತ್ತ ಹೊರಡುವನು. ಅವನೊಡನೆ ಸ್ಪರ್ಧಿಸಲಾಗದವರು ಹಿಂಬಾಲಿಸುತ್ತಾರೆ. ಮೆರವಣಿಗೆಯ ನಂತರ ಭಕ್ತವೃಂದ ತಮ್ಮ ಹರಕೆಗಳನ್ನು ಒಪ್ಪಿಸಲು ಮುಂದಾಗುತ್ತದೆ. ಅನಂತರ ಪೂಜೆ-ಪುರಸ್ಕಾರಗಳಾಗುತ್ತವೆ. ಪ್ರಸಾದವನ್ನು ಹಂಚಲಾಗುತ್ತದೆ. ಆದಿವಾಸಿಗಳು ಭಯಭಕ್ತಿಯಿಂದ ತಮ್ಮ ಯಥಾಶಕ್ತಿ ಕಾಣಿಕೆ ಒಪ್ಪಿಸುತ್ತಾರೆ,

ಹಿರಿಯರು, ಹೊಣೆಗಾರಿಕೆಯುಳ್ಳವರು ಆದೇ ಸಂಜೆ ಹಳ್ಳಿಗಳಿಗೆ ಮರಳಿದರೆ, ತರುಣ-ತರುಣಿಯರು ತಂತಮ್ಮ ನಿವಾಸಸ್ಥಾನಕ್ಕೆ ಮರಳಿ, ಅಡಿಗೆ-ಊಟ ಮುಗಿಸಿ ಸ್ವಲ್ಪ ಸ್ವಲ್ಪ ಮದ್ಯ ಸೇವಿಸುತ್ತಾರೆ. ಬೆಂಕಿಯ ಸುತ್ತಲೂ ವರ್ತುಲಾಕಾರದಲ್ಲಿ ಕುಳಿತು, ಕಾಯಿಸಿಕೊಳ್ಳುತ್ತ ಹರಟೆಯಲ್ಲಿ ಮೈಮರೆಯುವರು. ಅದು ಬೇಸರವಾದಾಗ ಮೆಲುದನಿಯಲ್ಲಿ ಹಾಡಲಾರಂಭಿಸುವರು. ಕೆಲವರು ಜೊತೆಯಲ್ಲಿ ತಂದ ಕಹಳೆ, ತುತೂರಿಗಳನ್ನೂ ಊದಲಾರಂಭಿಸುವರು. ಪರಿಸರದಲ್ಲಿ ಪ್ರತಿಧ್ವನಿಯೆಬ್ಬಿಸುವರು. ಬೀಸುವ ತಂಗಾಳಿಗೆ ಬೆಂಕಿಯ ಕಾವು ಹಿತವೆನಿಸಿ, ಹಾಡುಗಳ ಜೋಗುಳಕ್ಕೆ ಕಿರಿಯರು ತೂಕಡಿಸುತ್ತ ನಿದ್ರಾವಶರಾಗುವರು. ಎಲ್ಲ ಕಡೆ ಕತ್ತಲೆ ತಾಂಡವವಾಡುತ್ತಿದ್ದಾಗ, ಬೆಂಕಿಯ ಬೆಳಕಿನ ಸುತ್ತಲಿದ್ದವರೆಲ್ಲ ಎದ್ದು ಕಾಣಿಸುವರು. ಸೆರೆಯ ಅಮಲೋ, ಬೆಂಕಿಯ ತಾಪವೋ, ಯೌವನದ ಕಾವೋ, ಮೆಲ್ಲನೆ ಅವರನ್ನು ಆವರಿಸಿ, ಉದ್ರೇಕಿಸುವದು. ಪ್ರಣಯಿಗಳು ಕತ್ತಲೆಯ ಆಶ್ರಯ ಪಡೆದು, ರಮಿಸುವರು. ವರ್ಷದಲ್ಲಿ ಸಿಗುವ ಇಂತಹ ಒಂದು ಸವಿ ದಿನಕ್ಕಾಗಿ, ಉಳಿದ ದಿನಗಳಲ್ಲಿ ಬೆನ್ನುಮುರಿದು ದುಡಿದು ಚಾತಕ-ಪಕ್ಷಿಯಂತೆ ಸುಗ್ಗಿಯ ಮೇಲಾವನ್ನು ಎದುರುನೋಡುವಷ್ಟು ಸಹನಶೀಲತೆ ಬೆಳೆಸಿಕೊಂಡಿದ್ದಾರೆ ಅವರು.

# ೧೮. ಭಾಂಕೇರ

ಪಶುಪಕ್ಷಿಗಳನ್ನು ಸಂರಕ್ಷಿಸುವ ಸಲುವಾಗಿ ಕಾಡುಗಳನ್ನು ಕಾದಿರಿಸುವಂತೆ, ಬಸ್ತರ ಜಿಲ್ಲೆಯ ಅಬುಜ್‌ಮಾರದಲ್ಲಿ ನೈಸರ್ಗಿಕವಾಗಿ ಆದಿವಾಸಿಗಳನ್ನು ಕಾದಿರಿಸಿದಂತಾಗಿದೆ. ಎತ್ತರವಾದ ಪರ್ವತಾವಳಿಗಳು, ಆಳವಾದ ಕಂದರಗಳು, ಹತ್ತಾರು ಹಳ್ಳಿಗಳು, ದಟ್ಟವಾದ ಕಾಡುಗಳಿಂದಾಗಿ, ಅಲ್ಲಿ ಯಾವ ವಾಹನಸೌಕರ್ಯಗಳೂ ಇಲ್ಲ. ಮುಂದುವರಿದ ಜಗತ್ತು ವಾಯುವೇಗದ ಕೊನ್‌ಕೊರ್ಡ-ವಿಮಾನಗಳಲ್ಲಿ ಹಾರುವಾಗ ಇವರು ಇನ್ನೂ ಸಾಯಕಲ್ ನೋಡಿಲ್ಲ. ಕೆಲವು ಕಡೆ ಕಾಲುದಾರಿಯೂ ಇಲ್ಲದ್ದರಿಂದ ಚಂದ್ರಲೋಕಕ್ಕೆ ಹೋಗಿಬರುವದಕ್ಕಿಂತ ಅಬುಜ್‌ಮಾರಿಯರ ಭೇಟಿಗೆ ಹೋಗುವದು ಕಷ್ಟಕರವಾಗಿದೆ ! ಶತಮಾನಗಳಿಂದ ಅವರು ಒಂದಿಷ್ಟೂ ಬದಲಾಗದೇ ಕೆಲವರಲ್ಲಿ ಸಂಗ್ರಹಾಲಯದಲ್ಲಿ ಇಡಬಹುದಾದ ವಸ್ತುಗಳಂತಹ ವ್ಯಕ್ತಿಗಳಿದ್ದಾರೆ. ಸಾಲದ್ದಕ್ಕೆ ಅರಣ್ಯ, ಲೋಕೋಪಯೋಗಿ, ಪೋಲಿಸ ಖಾತೆಯವರು ಮತ್ತು ಮಿಶನರಿಗಳು ಅವರನ್ನು ತಮ್ಮ ಸ್ವಾರ್ಥಕ್ಕಾಗಿ ಬಳಸಿಕೊಂಡದ್ದರಿಂದ, ತಮ್ಮವರಲ್ಲದವರನ್ನು ಅವರು ಸದಾಕಾಲ ಸಂದೇಹದಿಂದ ನೋಡುವದು ಸ್ವಾಭಾವಿಕ. ಆದ್ದರಿಂದ ಅವರನ್ನು ನಿತ್ಯಜೀವನದಲ್ಲಿ ನೋಡಲಿಚ್ಛಿಸುವವರು, ಆ ಪ್ರದೇಶ ಮತ್ತು ಜನರ ಪರಿಚಯವಿರುವವನನ್ನು ಮಾರ್ಗದರ್ಶಕನೆಂದು ಕರೆದುಕೊಂಡು ಹೋದರೆ, ಸ್ವಲ್ಪ ಸಹಾಯವಾಗಬಹುದು. ಇಲ್ಲವಾದರೆ ಕಾಡಿನ ದಾರಿ ತಪ್ಪಿ, ಹಸಿದು ಬಳಲಿ ಬೆಂಡಾಗಬೇಕಾದೀತು. ಇಲ್ಲವೇ ಕಾಡುಪ್ರಾಣಿಗಳಂತೆ ಆದಿವಾಸಿಗಳು ಹರಡಿದ ಬಲೆಯಲ್ಲಿ ಸಿಕ್ಕಿಹಾಕಿಕೊಂಡು ಒದ್ದಾಡಬೇಕಾದೀತು. ಅಬುಜ್‌ಮಾರಿಯರನ್ನು ಕಾಣುವ ಮಾತು ದೂರವೇ ಉಳಿಯಿತು.

ನಾರಾಯಣಪುರ ತಾಲೂಕಿನಲ್ಲಿರುವ ಛೋಟೆಡೊಂಗರ, ಅಬುಜ್-ಮಾರಕ್ಕೆ ಹೋಗಲು ಹೆದ್ದಾರಿ ಇದ್ದಂತೆ. ಅಲ್ಲಿಯ ಸುಖದೇವ್‌ನು ವೃತ್ತಿಯಿಂದ ಮೇಸ್ತ್ರಿಯಾದ್ದರಿಂದ ಸುತ್ತಮುತ್ತಲಿನ ಹಳ್ಳಿಗಳಲ್ಲಿ ಓಡಾಡಿ ಅವರ ಸಣ್ಣ ಪುಟ್ಟ ಕೆಲಸ ಮಾಡಿಕೊಟ್ಟಿದ್ದರಿಂದ ಎಲ್ಲರಿಗೂ ಪರಿಚಿತನಿದ್ದಾನೆ. ಅಲ್ಲದೇ ಆದಿವಾಸಿ

ಯೊಬ್ಬಳನ್ನು ಮದುವೆಯಾಗಿದ್ದಾನೆ. ಹೀಗಾಗಿ ಅವನನ್ನೆ ಮಾರ್ಗದರ್ಶಿಯಾಗಿ ಮಾಡಿಕೊಂಡೆ. ಕಾಣಲು ವಾಮನಮೂರ್ತಿಯಂತೆ ಇದ್ದರೂ ಅವನಲ್ಲಿ ಇರುವ ಉತ್ಸಾಹ, ಶಕ್ತಿ, ಸಾಮರ್ಥ್ಯಗಳು ಮತ್ತು ಕಾಡುಮೇಡುಗಳ ನಿಕಟ ಪರಿಚಯು ಕ್ಕಾಗಿ ತಲೆದೂಗಬೇಕು. ಕಾಡಿನ ದಾರಿ ತುಳಿಯುಬೇಕಾದರೆ ತನ್ನ ಸಾಹಸಜೀವನದ ಹಲವು ಮುಖಗಳ ಪರಿಚಯು ಮಾಡಿಕೊಟ್ಟ. ಜಗದಲಪುರದಂತಹ ಪಟ್ಟಣದಲ್ಲಿ ಜನ್ಮವೆತ್ತಿದರೂ ಶಿಕ್ಷಣದತ್ತ ಮನಸ್ಸು ಹಾಕದೇ ಇದ್ದುದರಿಂದ ಚಿಕ್ಕ ವಯಸ್ಸಿನಲ್ಲಿ ಹೊಲಗಳಲ್ಲಿ ಜೀತದಾಳಾಗಿ ದುಡಿಯುಬೇಕಾಯಿತು. ಬಳಗದವನೊಬ್ಬ, ನಾರಾಯಣಪುರದಲ್ಲಿ ದರ್ಜಿಯಾಗಿ ಕೆಲಸ ಮಾಡುತ್ತಿದ್ದರಿಂದ ಅವನಲ್ಲಿ ಇದ್ದು ಮೇಸ್ತ್ರಿಯು ಕೆಲಸ ಕಲಿತ. ಛೋಟೆ ಡೊಂಗರದ ಸಾಹುಕಾರನ ಮನೆ ಕಟ್ಟಿಸುವಾಗ ಕೆಲಸದಲ್ಲಿ ಆತ ತೋರಿಸಿದ ಶ್ರದ್ಧೆಯಿಂದಾಗಿ ತಮ್ಮಲ್ಲಿಯೇ ಇದ್ದುಬಿಡು, ಎಲ್ಲ ಸವಲತ್ತುಗಳನ್ನು ಕೊಡುವೆನೆಂದಾಗ ಅಲ್ಲೇ ಬೀಡುಬಿಟ್ಟಿದ್ದಾನೆ. ದೂರ ದೂರದ ಹಳ್ಳಿಗಳಲ್ಲಿ ಚೂರುಪಾರು ಕೆಲಸ ಮಾಡಿ, ಕಾಳು-ಕಡಿಗಳ ರೂಪದಲ್ಲಿ ವೇತನ ಪಡೆದು, ನೆಮ್ಮದಿಯಾಗಿಯೇ ಬಾಳುತ್ತಿದ್ದಾನೆ. ಅವನ ಹೆಂಡತಿ ಚುರಮುರಿ, ಅವಲಕ್ಕಿ ತಯಾರಿಸಿ ಮಾರುವದರಿಂದ ಸ್ವಲ್ಪ ಸಂಪಾದನೆಯಾಗುತ್ತದೆ. ಐದು ಎಕರೆ ಕಾಡಿನ ಭೂಮಿಯುನ್ನು ತನಗೆ ಮಂಜೂರ್ ಮಾಡುವಂತೆ ಸರಕಾರಕ್ಕೆ ಅರ್ಜಿ ಸಲ್ಲಿಸಿದ್ದಾನೆ. ಅದು ಸಿಕ್ಕಾಗ ಕೃಷಿಕಾರನಾಗುವ ಕನಸು ಕಾಣುತ್ತಿದ್ದಾನೆ.

ವಾಸಸ್ಥಾನ ಬಿಟ್ಟು ರಸ್ತೆಗಿಳಿದಾಗ, ಆದಿವಾಸಿ ಯುವಜನರು, ಹತ್ತಿರದ ಗುಡ್ಡದಿಂದ ಮಣ್ಣನ್ನು ಅಗೆದು ತಂದು ರಸ್ತೆಯು ಮೇಲೆ ಹರವುದರಲ್ಲಿ ತೊಡಗಿದ್ದರು. ಗಿಡ್ಡವಾದರೂ ಆರೋಗ್ಯವಂತರಾಗಿದ್ದರು. ಯುವಕರು ಶುಭ್ರವಾದ ರುಮಾಲು ಸುತ್ತಿಕೊಂಡು ಹೂವಿನಿಂದ ಅಲಂಕರಿಸಿದ್ದರು. ಕೊರಳಿಗೆ ಬಣ್ಣಬಣ್ಣದ ಮಣಿಸರಗಳಿದ್ದವು. ಶುಭ್ರವಾದ ಕಿರಿಧೋತರ ಉಟ್ಟಿದ್ದರು, ಯುವತಿಯರು ಇನ್ನೂ ಆಕರ್ಷಕವಾಗಿ ಉಡುಪು ಧರಿಸಿ ನಗುಮುಖದಿಂದ ದುಡಿಯುತ್ತಿದ್ದರು. ಮಣ್ಣಿನ ಮಕ್ಕಳು ಇಷ್ಟೊಂದು ಶುಭ್ರಬಟ್ಟೆಗಳನ್ನು ಕೆಲಸ ಮಾಡುವಾಗ ಧರಿಸುವದುಂಟೆ? ಎಂದು ಆಶ್ಚರ್ಯ ವ್ಯಕ್ತಪಡಿಸಿದಾಗ “ಮಾರಿಯುರು ರಂಗುರಂಗಿನ ಜೀವನ ನಡೆಸುವದರಲ್ಲಿ ಹೆಸರುವಾಸಿ. ಬಟ್ಟೆ ಕೊಳೆಯಾದರೆ, ಕೆಲಸ ಮಾಡುವದನ್ನಾದರೂ ಬಿಟ್ಟಾರು, ಆದರೆ ಸ್ವಚ್ಛ ಬಟ್ಟೆ ಧರಿಸುವದನ್ನು

ಬಿಡಲಾರರು. ಹಿಂದೊಮ್ಮೆ ಅವರ ವಸತಿ ಭೋಟೆಡೊಂಗರದಲ್ಲೇ ಇತ್ತು. ಇಲ್ಲಿಯ ತನಕ ರಸ್ತೆಯಾಗಿ ನಾಗರಿಕರ ಓಡಾಟ ಹೆಚ್ಚಾಗಿದ್ದರಿಂದ ಅವರು ಇನ್ನೂ ಹಿಂದೆ ಕಾಡಿನೊಳಗೆ ಸರಿಯುತ್ತಿದ್ದಾರೆ.” ಎಂದು ಸುಖದೇವ್ ಹೇಳಿದ. ಆಗ ಹಿಂದಿನ ದಿನ ಪ್ರವಾಸಿ-ಮಂದಿರದಲ್ಲಿ ನಡೆದ ತಮಾಷೆಯನ್ನು ನೆನೆಸಿಕೊಂಡೆ. ಸುತ್ತಲಿನ ಹಳ್ಳಿಗಳನ್ನು ಸುತ್ತಿ ಬಂದು ದಣಿವಾರಿಸಿಕೊಳ್ಳಲು ಊಟ ಮುಗಿಸಿ ವಿಶ್ರಮಿಸಿದ್ದೆ. ಇನ್ನೇನು ಕಣ್ಣು ಹತ್ತಬೇಕು. ಕಿಲಿಕಿಲಿ ಹೆಣ್ಣು-ನಗೆಗೆ ಎಚ್ಚರವಾಯಿತು. ಹಿಂದೆಯೇ ಬಳೆಯ ಸದ್ದು. ಆ ದೊಡ್ಡ ಕಟ್ಟಡ, ಸುತ್ತಲಿನ ಆವಾರವೆಲ್ಲ ನಿರ್ಜನವಾಗಿದ್ದರಿಂದ, ಇವರಾರು ಎಂದು ತಲೆಯೆತ್ತಿ ನೋಡಿದೆ. ಹೂದೋಟದ ಚಿಟ್ಟೆಗಳಷ್ಟೇ ಸ್ವಚ್ಛಂದವಾಗಿ ವಿಹರಿಸುತ್ತಿದ್ದ ಆದಿವಾಸಿಗಳು ಕಣ್ಣಿಗೆ ಬಿದ್ದರು, ಪ್ರವಾಸಿ-ಮಂದಿರದ ಹೂದೋಟದಲ್ಲಿದ್ದ ಕೆಂಪು, ಹಳದಿ ಗೊಂಡೆ ಹೂಗಳನ್ನೆಲ್ಲ ಕಿತ್ತುಕೊಂಡು, ಮುಡಿ, ರುಮಾಲುಗಳಲ್ಲಿ ಮುಡಿದುಕೊಳ್ಳುತ್ತಾ ಇದ್ದರು. ಯುವತಿಯೊಬ್ಬಳು ಮುಡಿದ ದೊಡ್ಡ ಕೆಂಪು ಹೂವನ್ನು ಯುವಕನು ಹಾರಿಸಿಕೊಂಡು ತುಂಟ-ನಗೆ ನಕ್ಕಾಗ ಆಕೆ ಅವನನ್ನು ನಸು ಮುನಿಸಿನಿಂದ ಗುದ್ದಿದಳು; ಎಂಟು-ಹತ್ತು ಯುವಜನರು, ಚಿಟ್ಟೆಗಳಂತೆಯೇ ಹೂದೋಟದಲ್ಲಿ ಓಡಾಡುತ್ತಿದ್ದರು. ಕಾಲು ದಣಿದಾಗ, ಹತ್ತಿರದ ಬಾವಿಗೆ ಹೋಗಿ ಕೈಕಾಲು ತೊಳೆದುಕೊಂಡು, ನೀರು ಸೇದಿ ನೆರಳಲ್ಲಿ ಕುಳಿತು ಬುತ್ತಿ ಬಿಚ್ಚಿದರು. ಆಗಲೂ ನಗುನಗುತ್ತ, ಒಬ್ಬರ ಎಲೆಯೊಳಗಿಂದೊಬ್ಬರು ಹಂಚಿಕೊಳ್ಳುತ್ತ ಊಟ ಮುಗಿಸಿದರು. ನಂತರ ಮಂದಿರದ ಹಾಲಿನಲ್ಲಿದ್ದ ವಿಶಾಲ ಕನ್ನಡಿಯ ಮುಂದೆ ನಿಂತು ಯುವತಿಯರು ತಮ್ಮ ಅರೆನಗ್ನ ದೇಹವನ್ನು ನೋಡಿಕೊಂಡು ಹಿಗ್ಗಿ ಕಿಲಕಿಲ ನಕ್ಕರು. ಅವರನ್ನು ಹಿಂದಿನಿಂದ ಕೀಟಲೆ ಮಾಡಿ ಯುವಕರು ನಕ್ಕರು. ಮುಡಿ, ಹೂವು, ಕೊರಳಹಾರ ನೋಡಿಕೊಳ್ಳುತ್ತ ಸಂತೋಷ ಪಟ್ಟರು. ನಂತರ ಹೊರಗಿನ ತಂಪಾದ ಸಿಮೆಂಟಿನ ನೆಲದ ಮೇಲೆ ಉರುಳಿ ಹೊರಳಾಡಿದರು. ಗಂಡು ಹೆಣ್ಣು ಭೇದಭಾವವಿಲ್ಲದೇ ಅಕ್ಕಪಕ್ಕದಲ್ಲಿ ವಿಶ್ರಮಿಸಿದರು.

ಅನಾಯಾಸವಾಗಿ ಎದುರಿಗೇ ಬಂದ ರಸ್ತೆಯ ಪಕ್ಕದ ಮುರಿಯ ಪಂಗಡದವರನ್ನು ಕ್ಯಾಮರಾದಲ್ಲಿ ಸೆರೆಹಿಡಿಯಲು ಸಿದ್ಧತೆ ಮಾಡಿಕೊಳ್ಳುತ್ತಿರುವಾಗಲೇ ಈ ಅಪರಿಚಿತ ನಾಗರಿಕನನ್ನು ನೋಡಿ ಹುಲಿಯನ್ನು ಕಂಡ

ಹರಿಣಿಯರಂತೆ ದೂರ ಓಡಿಹೋಗಿ ಮರಗಳ ಮರೆಯಲ್ಲಿ ನಿಂತು ಮಿಕಿ ಮಿಕಿ ನೋಡಲಾರಂಭಿಸಿದರು. ಸುಖದೇವನ ಸಹಕಾರದಿಂದ ಅವರನ್ನು ಒಟ್ಟು ಗೂಡಿಸುವ ಪ್ರಯತ್ನಗಳೆಲ್ಲ ವಿಫಲಗೊಂಡವು. ಹಿಂದಿನ ದಿನವೇ ಅವರಿಗೆ ತಿಳಿಯದಂತೆ ಅತಿ ಹತ್ತಿರದಿಂದ ನೋಡುವ ಸಂದರ್ಭ ಬಂದದ್ದನ್ನು ನೆನಸಿ ಸಂತೋಷವಾಯಿತು. ರಸ್ತೆ ಬಿಟ್ಟು ಕಾಡಿನ ದಾರಿ ತುಳಿಯಲಾರಂಭಿಸಿದಾಗ ಮಾರಿಯಾ ಯುವಜನರು ತಾವೇ ಗೆದ್ದೆವು ಎಂಬಂತೆ ಸಾಮೂಹಿಕವಾಗಿ ನಗುತ್ತ ಮತ್ತೆ ಕೆಲಸಕ್ಕೆ ತೊಡಗಿದರು. ಕಾಡುಕೋಣ, ಹಂದಿ, ಜಿಂಕೆಗಳು ತುಳಿದ ಹಾದಿಯಿಂದ ನಾವು ಮುಂದುವರಿದೆವು. ಸುಖದೇವನಿಗೆ ಅಲ್ಲಿಯ ಪರಿಸರದ ಬಗ್ಗೆ ಚೆನ್ನಾಗಿ ಪರಿಚಯವಿದ್ದ ಹಲವಾರು ವೈಜ್ಞಾನಿಕ ವಿಚಾರಗಳ ಬಗ್ಗೆ ಸಾಮಾನ್ಯನ ಅನಿಸಿಕೆಗಳನ್ನು ತಿಳಿದುಕೊಳ್ಳುವಂತೆ ಆಯಿತು.

ಈ ಪ್ರದೇಶದಲ್ಲಿ ಕಾಡು ಎಲ್ಲಿ ಮುಗಿಯುತ್ತದೆ, ಹಳ್ಳಿ ಎಲ್ಲಿ ಪ್ರಾರಂಭ ವಾಗುತ್ತದೆ ಎಂದು ದೃಢವಾಗಿ ಹೇಳಲು ಬರುವದಿಲ್ಲ. ಅಂತೆಯೇ ಕಾಡಿನ ದಾರಿ ತುಳಿಯುವಾಗಲೇ ತಂದೆ-ಮಕ್ಕಳಿಬ್ಬರು ಮಹುವಾ ಮರದ ಆಶ್ರಯ ದಲ್ಲಿ ಕೆಲಸಕ್ಕೆ ತೊಡಗಿದ್ದು ಕಂಡಿತು. ಭತ್ತವನ್ನು ಹೊಟ್ಟಿನಿಂದ ಬೇರ್ಪಡಿಸಲು ಯುವಕನು ಅಡ್ಡಕಟ್ಟಿದ ಬಿದಿರನ್ನು ಹಿಡಿದು ಕಾಲಿನಿಂದ ತೆನೆಗಳನ್ನು ತುಳಿಯುತ್ತಿದ್ದನು. ಅವನ ಬೆವತ ಹಣೆ, ಮಾಂಸ ಖಂಡಗಳಿಂದ ತುಂಬಿದ ಎದೆ, ಕುಣಿದಂತೆ ಕಾಣುತ್ತಿದ್ದ ತುಳಿತದ ಭಂಗಿ, ಸುತ್ತಲ ರಮ್ಯ ಪರಿಸರ, ಚಲಚ್ಚಿತ್ರದ ದೃಶ್ಯದಂತೆ ತೋರುತ್ತಿತ್ತು. ಸುಖದೇವನು ಯುವಕನಿಗೆ "ಈ ಬಾಬು ನಿಮ್ಮನ್ನು ಭೆಟ್ಟಿಯಾಗಲು ತುಂಬ ದೂರದಿಂದ ಬಂದಿದ್ದಾರೆ. ಆದ್ದರಿಂದ ನಿಮ್ಮೆಲ್ಲರ ನೃತ್ಯ ಏರ್ಪಡುವಂತಾದರೆ ತುಂಬ ಸಂತೋಷಗೊಳ್ಳುತ್ತಾರೆ" ಎಂದ. ಯುವಕನು ಕೂಡಲೇ ಮೀರಿದ ಉತ್ಸಾಹದಿಂದ, ತಮ್ಮ ಹಳ್ಳಿಯ ನೃತ್ಯಮೇಳ ಕೂಡಿಸಲು ಹೊರಟ. 'ಹಾಡು ನೃತ್ಯಗಳೆಂದರೆ ಇವಕ್ಕೆ ಜಗತ್ತೇ ಮರೆಯುತ್ತದೆ' ಎಂದು ಮುದಿ ತಂದೆ ತನ್ನ ಹರೆಯವನ್ನು ನೆನಪಿಸಿಕೊಳ್ಳುತ್ತ ಸೇದುವ ಬೀಡಿಯನ್ನು ಬಿಸುಟು ಮಗ ಅರ್ಧಕ್ಕೆ ಬಿಟ್ಟ ಕೆಲಸವನ್ನು ಮುಂದು ವರಿಸಿದ.

ಹಳ್ಳಿಯತ್ತ ಹೆಜ್ಜೆ ಹಾಕಿದಾಗ ಊರ ಪಟೇಲ ಯಾವುದೋ ಕೆಲಸದ ಮೇಲೆ ಹೊರಟವನು ಎದುರಾದ್ದರಿಂದ ಕೆಲಸ ಇನ್ನೂ ಸುಲಭವಾಯಿತು.

ನಾವು ಬಂದ ಉದ್ದೇಶ ಆತನಿಗೆ ಹೇಳಿದಾಗ ಹೆಮ್ಮೆಯಿಂದ ಅಥಿತಿಗಾಗಿ ನೃತ್ಯ ಕೂಟ ಏರ್ಪಡಿಸಲು ಹಳ್ಳಿಯವರಿಗೆ ಅಪ್ಪಣೆಯಿತ್ತ. ಹಳ್ಳಿಯ ಎಲ್ಲ ಚಟುವಟಿಕೆಗಳಿಗೆ ಕೇಂದ್ರದಂತೆ ಇದ್ದ "ಘೋಟುಲ"ಕ್ಕೆ ನಮ್ಮನ್ನು ಕರೆದೊಯ್ದರು. ಘೋಟುಲ, ಆದಿವಾಸಿ ಯುವಕರೇ ನಡೆಸುವ ಛಾತ್ರಾಲಯದಂತಿರುತ್ತದೆ. ಕುಳಿತುಕೊಳ್ಳಲೆಂದು, ಯುವಕನೊಬ್ಬ ಯಾರದೋ ಮನೆಯಿಂದ ಕಿರಿದಾದ ಚಾರಪಾಯಿ (ಮಂಚ) ತಂದನು. ಕುಡಿಯಲು ತುಂಬಾ (ಪೊಳ್ಳು ಮಾಡಿದ ಸೋರೆಕಾಯಿ)ದಲ್ಲಿ ನೀರು ತಂದರು. ಆಗಿಂದಾಗ್ಗೆ ತಯಾರಿಸಿದ ಎಲೆಗಳ ದೊನ್ನೆ, ಕುಡಿಯಲು ಲೋಟವಾಯಿತು. ಘೋಟುಲದ ಸದಸ್ಯರೆಲ್ಲ ತಂತಮ್ಮ ಕೆಲಸದ ಮೇಲೆ ಹೋಗಿದ್ದರಿಂದ ಹೆಚ್ಚಿನವರು ಸಿಗಲಿಲ್ಲವೆಂದು ಕರೆಯಲು ಹೋದ ತರುಣನು ಗೊಣಗುತ್ತ ತಿರುಗಿ ಬಂದ. ಅವರೆಲ್ಲ ಎಲ್ಲಿಯೇ ಇದ್ದರೂ ಕರೆದುತರುವಂತೆ ತಿಳಿಹೇಳಿ ಪಟೇಲನು ಇನ್ನೊಮ್ಮೆ ಆತನನ್ನು ಕಳಿಸಿದ.

ಘೋಟುಲದ ಚಟುವಟಿಕೆಗಳೆಲ್ಲ ಸೂರ್ಯಾಸ್ತದ ನಂತರ ಪ್ರಾರಂಭವಾಗಬೇಕಾದವು. ಇಂದು ಬೆಳಿಗ್ಗೆಯೇ ಅಲ್ಲಿ ಗದ್ದಲ ಪ್ರಾರಂಭವಾದ್ದರಿಂದ ಏನೋ ವಿಶೇಷವಿರಬೇಕೆಂದು ಹಳ್ಳಿಗರು ಅಲ್ಲಿಗೆ ಬಂದು ಸೇರಲಾರಂಭಿಸಿದರು. ಕೃಷಿಕಾರನೊಬ್ಬ ನಾರಿನೊಂದಿಗೆ ಬಂದು ಘೋಟುಲದ ಬೇಲಿಯನ್ನೇ ಆಧಾರವಾಗಿಟ್ಟುಕೊಂಡು ಹಗ್ಗವನ್ನು ಹೊಸೆಯಲಾರಂಭಿಸಿದ. ಸಂತೆಗೆ ಹೊರಟ ನಾರಿಯೋರ್ವಳು ತಲೆಯ ಮೇಲೆ ಧಾನ್ಯದ ಬುಟ್ಟಿ, ಕಂಕುಳಲ್ಲಿ ಮಗುವನ್ನು ಹೊತ್ತುಕೊಂಡೇ ಮರದ ಆಶ್ರಯದಲ್ಲಿ ನಿಂತಳು. ಕೊತವಾಲನು ಬಂದಾಗ ಎಲ್ಲರೂ ಸ್ವಾಗತ ಕೋರಿ, ಮಗನ ಸುಟ್ಟುಕೊಂಡ ಗಾಯ ಮಾದಿದೆಯೇ ಎಂದು ಕೇಳಿದರು. ಅವನು ನಮ್ಮತ್ತ ತಿರುಗಿ, "ನೋಡಿ ಬಾಬು, ನೀವೆಲ್ಲ ಓದು-ಬರೆಹ ಕಲಿತವರು. ನಾವೆಲ್ಲ ಹಳ್ಳಿ-ಮುಕ್ಕರು. ಆದರೂ ಉಳಿದವರಂತೆ ನಮಗೂ ನಾವು-ನೋವು ಇದೆ ಎಂದು ಮರೆಯಲಾಗುವದೆ? ಒಂದು ವಾರದ ಹಿಂದೆ, ನನ್ನ ಹತ್ತು ವರ್ಷದ ಮಗ ಆಡುತ್ತ ಆಡುತ್ತ ಬಂದು ಒಲೆಯ ಮೇಲೆ ಬಿದ್ದು ಬಲಗೈಯನ್ನು ಸುಟ್ಟುಕೊಂಡಿದ್ದಾನೆ. ನಮಗೆ ತಿಳಿದ ಗಿಡ-ಮೂಲಿಕೆಗಳ ಔಷಧಗಳಿಂದ ಯಾವ ಲಾಭವೂ ಸಿಗದ್ದರಿಂದ ದೂರದ ಧವಾಖಾನೆಗೆ ಹೋದರೆ ಅವರು ತಂದ ಔಷಧಿ ಮುಗಿದಿದೆ ಎಂದು ತಿರುಗಿ ಕಳಿಸುವದು ನ್ಯಾಯವೇ?" ಎಂದು ನನ್ನನ್ನೇ ನ್ಯಾಯಾಧೀಶನಾಗಿ ಮಾಡಿದಾಗ ಮುಂಜಗರ

ಪಾಯಿತು. ಕಾಡಿನ ಹಾದಿಯು ಬಗ್ಗೆ ಬಲ್ಲವರು ಮೊದಲೇ ಎಚ್ಚರಿಸಿದ್ದರಿಂದ, ಆಯೊಡೆಕ್ಸ್, ಬರ್ನಾಲ್‌ಗಳಂತಹ ತೀರ ಬಳಕೆಯ ಔಷಧಗಳು ಬಳಿಯಲ್ಲಿದ್ದವು. ಮಗನನ್ನು ಕರೆತರುವಂತೆ ಹೇಳಿ, ಹತ್ತಿಯಿಂದ ಗಾಯವನ್ನು ಸ್ವಚ್ಛ ಮಾಡಿ ಬರ್ನಾಲ್ ಹಚ್ಚಿದೆ. ಮಗುವಿನ ತಂದೆ, "ದೇವರಂತೆ ಬಂದಿರಿ" ಎಂದು ತನ್ನ ಕೃತಜ್ಞತೆ ಸೂಚಿಸಿದ. ಹತ್ತಿರದ ಔಡಲಎಲೆಯನ್ನು ತಂದು ಇನ್ನಷ್ಟು ಮುಲಾಮನ್ನು ಕೇಳಿ ಪಡೆದ. "ಡಾಕ್ಟರರು" ಬಂದಿರುವ ಬಗ್ಗೆ ಸುಖದೇವನ ಪ್ರಚಾರದಿಂದಾಗಿ ಹಳ್ಳಿಯ ಇನ್ನು ಹಲವರು ಬಂದು ಬಂದು ಪುಟ್ಟ ಗಾಯಗಳಿಗೆ ಔಷಧ ಪಡೆಯಲಾರಂಭಿಸಿದರು. ಅತ್ಯಗತ್ಯದ ಉಪಚಾರವೂ ಈ ಬಡಪಾಯಿ ಗಳಿಗೆ ದುರ್ಲಭವಾದದ್ದು ನೋಡಿ ಮರುಗುವಂತಾಯಿತು.

ಘೋಟುಲದ ವಿದ್ಯಾರ್ಥಿಗಳಲ್ಲಿ ತುರುಸಿನ ಚಟುವಟಿಕೆ ಕಂಡುಬಂದಿತು. ಕಿರಿಯನೊಬ್ಬ ಧೂಳು ಏಳದಂತೆ ನೆಲಕ್ಕೆ ನೀರು ಸಿಂಪಡಿಸಿದ. ಸ್ವಲ್ಪ ದೊಡ್ಡವನು ಸ್ವಚ್ಛವಾಗಿ ಗುಡಿಸಿದ. ನರ್ತನಕಾರರು ಒಂದು ಕೈಯಲ್ಲಿ ಅಲಂಕಾರದ ಪೇಳಿ, (ಬಿದಿರಿನ ಕಿರಿಪೆಟ್ಟಿಗೆ) ಇನ್ನೊಂದು ಕೈಯಲ್ಲಿ ಭಾರವಾದ ಗಂಟೆ, ಗೆಜ್ಜೆಗಳೊಂದಿಗೆ ಬರಹತ್ತಿದರು. ಹುಡುಗಿಯರ ತಂಡವೊಂದು ಬರಿ ಎದೆ ಬಿಟ್ಟುಕೊಂಡರೂ ಮುಖ ಮುಚ್ಚುವಂತೆ ಚೌಕಡಿ ಶಾಲುಗಳನ್ನು ಹೊದ್ದು ಕೊಂಡು, ತಲೆ ತಗ್ಗಿಸಿಕೊಂಡು ಘೋಟುಲದಲ್ಲಿ ನುಗ್ಗಿತು. ಅಲ್ಲಿಂದ ನೆರೆದ ವರನ್ನು, ಹೊಸಬರನ್ನು. ನೋಡುತ್ತ ಕಿಸಕ್ಕನೆ ನಕ್ಕಿತು. ಇನ್ನಷ್ಟು ಗೆಳತಿಯರನ್ನು ಕರೆತರಲು ಚಿಕ್ಕ ತಂಡವೊಂದು ಹಳ್ಳಿಯತ್ತ ಹೊರಟಿತು. ಹತ್ತಾರು ನರ್ತಕರು ಸೇರಿದೊಡನೆ ಅಲಂಕಾರಕ್ಕೆ ಪ್ರಾರಂಭವಾಯಿತು. ಮುಖಕ್ಕೆ ಮಸಿ ಬಳಿದು ಕೊಂಡರು. ಮುಖ ಕಾಣದಷ್ಟು ಮಸುಕಾದ ಕನ್ನಡಿಯಲ್ಲಿ ನೋಡುತ್ತ, ಎಂಟು ಹತ್ತು ಮೊಳದ ವಿವಿಧ ಬಣ್ಣಗಳ ಬಟ್ಟೆಯ ರುಮಾಲನ್ನು ತಲೆಗೆ ಸುತ್ತಿ ಕೊಂಡು, ಕೆಂಪು ಗೊಂಡೆಗಳನ್ನು ತೂಗುಬಿಟ್ಟು, ಬಿಳಿಯ ಮಣಿಸರಗಳನ್ನು ರುಮಾಲಿನಿಂದ ಇಳಿಯಬಿಟ್ಟರು. ಪ್ರತಿಷ್ಠೆಯ ಪ್ರತೀಕಗಳಾದ ಪಕ್ಷಿಗಳ ಬಣ್ಣ ಬಣ್ಣದ ಪುಕ್ಕಗಳನ್ನು ಜಾಗರೂಕತೆಯಿಂದ ತಲೆಗೆ ಸಿಕ್ಕಿಸಿಕೊಂಡರು. ಕೊರಳಿಗೆ ಕೆಂಪು, ನೀಲಿ, ಬಿಳೀ ಬಣ್ಣದ ಮಣಿಸರಗಳನ್ನು ಹಾಕಿಕೊಂಡರು. ಬರಿಮೈಯಿಂದ ಇರುವದು ವಾಡಿಕೆಯಾದರೂ ಒಬ್ಬಿಬ್ಬರು ಮೈಗೆ ಅಂಟಿಕೊಳ್ಳುವ ಕಿರಿಯ ಬನಿಯನ್ ತೊಟ್ಟಿದ್ದರು. ಕೆಂಪುಬಣ್ಣದ ತುಂಬ ನೆರಿಗೆಯ ಬಟ್ಟೆಯನ್ನು

ಸೊಂಟಕ್ಕೆ ಸುತ್ತಿ ಗಂಟೆ, ಗೆಜ್ಜೆಗಳನ್ನು ಬಿಗಿದುಕೊಂಡರು. ಇವನ್ನು ಕಟ್ಟಿಕೊಳ್ಳುವಾಗ ಸಮತೋಲ ಇರುವಂತೆ ನೋಡಿಕೊಳ್ಳುವದು ಅತಿ ಮಹತ್ವದ್ದು ಆದ್ದರಿಂದ ಎರಡು ಮೂರು ಸಲ ಬಿಡಿಸಿ ತುಂಬ ಜಾಗರೂಕತೆ ವಹಿಸಿ ಬಿಗಿದುಕೊಂಡರು. ಬಲಗೈಯಲ್ಲಿ ಕನ್ನಡಿ ಇಲ್ಲವೇ ಕರವಸ್ತ್ರ, ಎಡಗೈಯಲ್ಲಿ ಕೊಡಲಿ ಇಲ್ಲವೇ ಕೊಡೆ ಹೊತ್ತು ಸಿದ್ಧರಾದರು.

ವಿದ್ಯಾರ್ಥಿನಿಯರು ಕಾಣಿಸಿಕೊಂಡರು. ಐದಾರು ಎಳೆಗಳ ಬಿಳಿ ಮಣಿಸರಗಳನ್ನು ಹಣೆಯ ಮೇಲೆ ಬರುವಂತೆ ತಲೆಗೆ ಸುತ್ತಿಕೊಂಡಿದ್ದರು. ಹಿಂಬದಿಗೆ ಕವಡೆ-ಸರಗಳನ್ನು ಮಲ್ಲಿಗೆದಂಡೆಯಂತೆ ಮಾಟವಾಗಿ ಸುತ್ತಿದ್ದರು. ಕಟ್ಟಿಗೆಯ ಪುಟ್ಟ ಬಾಚಣಿಗೆ ಎಲುಮಿನಿಯಮ್‌ದ ಮುಳ್ಳಿನ ಅಕ್ಕಡಗಳನ್ನು ಮುಡಿಗೆ ಸೇರಿಸಿದ್ದರು. ಹಲವು ಬಣ್ಣಗಳ ಮಣಿಸರಗಳೊಂದಿಗೆ ಮೊಗಲರ ಕಾಲದ ನಾಣ್ಯಗಳ ಸರಗಳೂ ಕೆಲವರ ಕೊರಳಿಗಿದ್ದವು. ಗಾಜಿನ, ಬೆಳ್ಳಿಯ ಬಳೆಗಳು ಮುಂಗೈಗೆ ಇದ್ದವು. ಉಟ್ಟ ತೀರ ಕಿರಿಬಟ್ಟೆ, ಕೈಕಾಲುಗಳನ್ನು ಮುಚ್ಚಲು ತೀರಾ ಅಸಮರ್ಥವಾಗಿತ್ತು. ಪುರುಷರೊಡನೆ ಹೋಲಿಸಿದಾಗ ಹೆಂಗಳೆಯರ ಅಲಂಕಾರ ತೀರ ಕಡಿಮೆಯೆನಿಸಿತು. ಬಹುಶಃ ಪಶುಪಕ್ಷಿಗಳಲ್ಲಿರುವಂತೆ, ಗಂಡನ್ನೇ ಅನುಕರಿಸಿ ಆದಿವಾಸಿ ಗಂಡು ಹೆಚ್ಚಿನ ಅಲಂಕಾರದಿಂದ ಹೆಣ್ಣನ್ನು ಆಕರ್ಷಿಸುವ ಪರಿಪಾಠ ಬೆಳೆಸಿಕೊಂಡಿರಬೇಕು ಅನಿಸಿತು. ಎಷ್ಟೆಂದರೂ ನಿಸರ್ಗಕ್ಕೆ ತೀರ ಹತ್ತಿರದ ಮಕ್ಕಳಲ್ಲವೇ ಅವರು?

ಹುಡುಗರು ಘೋಟುಲ ಕಟ್ಟಡದಿಂದ ಅಂಗಳಕ್ಕೆ ಇಳಿದರು. ಸೊಂಟದ ಗೆಜ್ಜೆ-ಗಂಟೆಗಳಿಂದ ನಾದ ಹೊರಡಿಸುತ್ತ ನರ್ತನ ಪ್ರಾರಂಭಿಸಿದಾಗ ಹುಡುಗಿಯರೂ ಬಂದು ಅವರನ್ನು ಸೇರಿಕೊಂಡರು. ಮುಂಭಾಗವಲ್ಲಿ ವಿದ್ಯಾರ್ಥಿಗಳು, ಹಿಂಭಾಗವಲ್ಲಿ ಅವರಿಗೆ ಸಮಾಂತರವಾಗಿ ವಿದ್ಯಾರ್ಥಿನಿಯರು, ಇನ್ನೊಂದು ಸಾಲು ಮಾಡಿದರು. ಮುಂದಿನ ಸಾಲಿನವರು, ಬಲಗೈಯನ್ನು ಇನ್ನೊಬ್ಬನ ಭುಜದ ಮೇಲೆ ಇಟ್ಟು, ಎಡಗೈಯಲ್ಲಿ ಕೊಡಲಿ, ಕೊಡೆ ಹಿಡಿದರು. ಹಿಂದಿನ ಸಾಲಿನವರು ಕೈಗಳಿಂದ ಅಕ್ಕಪಕ್ಕದವರ ಸೊಂಟ ಬಳಸಿದರು. ಕೆಳದನಿಯಲ್ಲಿ "ರೇಲೋರೇಽಽ ರೇಲೋ ರೇಲೋಽಽ" ಎಂದು ಗಂಡುಧ್ವನಿಗಳು ಹಾಡಿದ ನಂತರ ಹೆಣ್ಣುಧ್ವನಿಗಳು ಅನುಕರಿಸಿದವು. ಒಮ್ಮೆ ಕಿರಿ ಹೆಜ್ಜೆ ಹಾಕುತ್ತ ಸಮ್ಮುಖ ಬಂದರೆ, ಅನಂತರ ಹಿಂದ ಹೆಜ್ಜೆ ಹಾಕುತ್ತ ಹೊರಟ ಸ್ಥಾನಕ್ಕೆ ಮರಳುವರು.

ಯಾವ ಏರಿಳಿತಗಳಿಲ್ಲದೆ ಏಕತಾನತೆಯಿಂದ ನಡೆದ ನೃತ್ಯ-ಹಾಡುಗಳು ಕೆಲ ಹೊತ್ತಿನ ನಂತರ ನೀರಸವೆನಿಸಿದವು. ಹೊಸಬನನ್ನೂ ತಮ್ಮ ನೃತ್ಯದಲ್ಲಿ ಸೇರಿಸಿ ಕೊಂಡಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು ಅನಿಸಿತು. ಅವರ ಉತ್ಸಾಹವನ್ನು ಕುಗ್ಗಿಸುವ ಮನಸ್ಸಿಲ್ಲದೇ ಪ್ರತಿಯೊಬ್ಬರ ಛಾಯಾಚಿತ್ರ ತೆಗೆಯಲು ಯತ್ನಿಸಿದೆ. ಲಜ್ಜೆಯಿಂದಾಗಿ ಅವರೆಲ್ಲ ಸಹಜವಾಗಿ ನಿಲ್ಲದ್ದರಿಂದ ಒಬ್ಬನನ್ನು ಮುಂದೆ ನಿಲ್ಲಿಸಿ ಅವನ ಛಾಯೆ ಕ್ಯಾಮರಾದಲ್ಲಿ ಹೇಗೆ ಮೂಡುವದೆಂದು ಇತರರಿಗೆ ತೋರಿಸಿದಾಗ ಮೈಚಳಿಬಿಟ್ಟು ಹುರುಪುಗೊಂಡರು. ಕೊಟ್ಟ ಸೂಚನೆಗೆ ಮಾನ್ಯತೆ ಕೊಟ್ಟು, ಶಾಲನ್ನು ಬಿಟ್ಟು ಫೋಟೊ ತೆಗೆಸಿಕೊಂಡರು. ತಮ್ಮ ಚಿತ್ರ ನೋಡುವ ಅವಕಾಶ ಅವರಿಗೆ ಎಂದೂ ಬರದಿದ್ದರೂ ಕ್ಯಾಮರಾದಲ್ಲಿ ಅದು ಮೂಡಿದೆ ಎಂಬ ಕಲ್ಪನೆ ಬಂದೇ ಪುಲಕಿತರಾದರು.

ಬೇರೆಲ್ಲ ಕೆಲಸ ಬಿಟ್ಟು ನಮಗಾಗಿ ಈ ಕುಣಿತವನ್ನು ಏರ್ಪಡಿಸಿದ್ದರಿಂದ ಸುಖದೇವನ ಸೂಚನೆಯಂತೆ ಘೋಟುಲದ ಸದಸ್ಯರಿಗೆ ಹತ್ತರ ನೋಟನ್ನು ಕೊಟ್ಟೆ. "ಬಾಬು ಎಷ್ಟು ಬೆವತಿದ್ದೇವೆ ನೋಡಿ, ನಿಮ್ಮ ಹೆಸರಿನಿಂದ ಚೆನ್ನಾಗಿ ಲಾಂದಾ(ಸೆರೆ) ಸುರಿಯುತ್ತೇವೆ. ಇನ್ನೆರಡರ ನೋಟು ಕೊಡಿ" ಎಂದು ನಿರ್ದಾಕ್ಷಿಣ್ಯವಾಗಿ ಧೀರ ವಿಧ್ಯಾರ್ಥಿಯೊಬ್ಬ ಹೇಳಿದ್ದರಿಂದ ಹಾಗೇ ಮಾಡಿದೆ. ವಾಡಿಕೆಯಂತೆ ಪಟೇಲ-ಕೊತವಾಲರಿಗೂ ಗೌರವಧನ ಕೊಟ್ಟಾದ ನಂತರ ಸುಖದೇವನಿಗೆ, "ಅವರ ಘೋಟುಲ ನೋಡಿ ಹೆಚ್ಚಿನ ಮಾಹಿತಿ ಸಂಗ್ರಹಿಸ ಬೇಕಾಗಿತ್ತಲ್ಲ" ಎಂದಾಗ, "ಇದು ತೀರ ಚಿಕ್ಕದು, ದೊಡ್ಡ ಘೋಟುಲವಿದ್ದ ಹಳ್ಳಿಗೆ ಕರೆದುಕೊಂಡು ಹೋಗಿ ವಿವರಗಳನ್ನು ಪೂರೈಸುತ್ತೇನೆ," ಎಂದು ಆಶ್ವಾಸನ ಕೊಟ್ಟ. ಪಟೇಲನು ಹಳ್ಳಿಯ ಅಂಚಿನ ತನಕ ಬಂದು ಬೀಳ್ಕೊಂಡ. ದಾರಿಯಲ್ಲಿ ಅವರ ನೃತ್ಯದ ಹಾಡನ್ನು ನಾನು ಗುಣಗುಣಿಸುತ್ತ ಹೊರಟದ್ದನ್ನು ಕೇಳಿ ಸುಖದೇವನು, "ಬಲು ಬೇಗ ಕಲಿತುಬಿಟ್ಟಿರಿ ಬಾಬು" ಎಂದು ಮೆಚ್ಚಿಗೆ ! ವ್ಯಕ್ತಪಡಿಸಿದ.

## ೧೯. ಮೂರ್ತಿಕಾರರು

ನಮ್ಮಲ್ಲಿಯಂತೆ ಮಧ್ಯಪ್ರದೇಶದಲ್ಲಿಯೂ ಕಲ್ಲು, ಕೊರಡು ಕಡೆದು, ಮೂರ್ತಿಗಳನ್ನು ನಿರ್ಮಾಣಮಾಡುವ ಕಲೆ, ಅನಾದಿಕಾಲದಿಂದ ಬೆಳೆದು ಬಂದಿದೆ. ಹತ್ತನೆಯ ಶತಮಾನದ ಹೊತ್ತಿಗೆ ಶಿಲ್ಪಕಲೆ, ಪರಿಪಕ್ವತೆಯ ಹಂತಕ್ಕೆ ಬಂದು ಮುಟ್ಟಿತ್ತು, ಎಂದು ಖಜುರಾಹೋದ ದೇವಾಲಯಗಳಲ್ಲಿಯ ಸುರಸುಂದರಿಯರ ಮತ್ತು ಇನ್ನಿತರ ಶಿಲ್ಪಗಳು ಸಾಕ್ಷಿಹೇಳುತ್ತವೆ. ಭಾಜಾ ಗವಿಯಲ್ಲಿ ಮಹಾಯಾನ-ಬೌದ್ಧಕಾಲೀನ ಉಬ್ಬುಚಿತ್ರ, ಮೂರ್ತಿಶಿಲ್ಪಗಳ ಮಾದರಿ ನೋಡಲು ಸಿಗುವದಾದರೆ, ಸಾಂಚಿಯಲ್ಲಿ ವಿವಿಧ ಶತಮಾನಗಳಲ್ಲಿ ನಿರ್ಮಿಸಲಾದ ಬೌದ್ಧ-ಶಿಲ್ಪ-ಕಲೆಯ ವೈಖರಿ ನೋಡಲು ಸಿಗುವಂತಿದೆ. ಪ್ರಥಮ ಸ್ತೂಪದ ನಾಲ್ಕೂ ದಿಕ್ಕಿನ ಕಂಬಗಳ ಮೇಲಿನ ಚಿತ್ರ,ಶಿಲ್ಪಗಳು ಇಂದೇ ಕೆತ್ತಿದಂತೆ ಇವೆ. ಉದಯಗಿರಿ ಗುಹಾಲಯಗಳಲ್ಲಿ ಐದನೇ ಶತಕದಿಂದ ಹತ್ತನೇ ಶತಕದ ವರೆಗಿನ, ವೈಷ್ಣವ-ಮತದ ಮತ್ತು ಪುರಾಣಗಳನ್ನು ಆಧರಿಸಿ ರಚಿಸಿದ ಮೂರ್ತಿಗಳನ್ನು ನೋಡಬಹುದಾಗಿದೆ. ಗೇರಾಸಪುರದ ಹಾಳುಬಿದ್ದ ಎಂಟು ಕಂಭದ ದೇವಾಲಯ, ಅರೆ ಮುಗಿಸಿದ ಭೋಜಪುರದ ಶಿವಾಲಯ, ಅರಂಗದ ಭಾಂಡದೇವಾಲಯ, ಉಜ್ಜಯನಿಯ ಮಹಾಕಾಲೇಶ್ವರದೇವಾಲಯಗಳಲ್ಲಿ ಮೂರ್ತಿಶಿಲ್ಪದ ಬೆಳವಣಿಗೆಯ ಪರಂಪರೆ ತಿಳಿದುಬರುತ್ತದೆ. ಇತ್ತೀಚಿಗಿನ ಶತಮಾನಗಳಲ್ಲಿ ಕಟ್ಟಲಾದ ಗ್ವಾಲೇರದ ಜಿಜಾಜಿ, ದೌಲತರಾವ, ಜನಕೋಜಿ ರಾವರು ಮಾಡಿಸಿದ ದೇವಾಲಯಗಳ ವಿಶಿಷ್ಟ ಶೈಲಿಯನ್ನು ಗಮನಿಸಬಹುದು. ಧಾರದಲ್ಲಿ ಇಂದಿಗೂ ಮೂರ್ತಿಶಿಲ್ಪ ಕಡೆದು ಉದರನಿರ್ವಹಣೆ ಮಾಡುವ ಜನರಿದ್ದಾರೆ. ಅಲ್ಲಿಯ ಫಡಕೆ ಸ್ಟುಡಿಯೋದಲ್ಲಿ ಅರಸುಮನೆತನದವರ, ದೇಶದ ನಾಯಕರೆಲ್ಲರ ಮೂರ್ತಿಗಳನ್ನು ಸಂಗ್ರಹಿಸಿ ಇಟ್ಟಿದ್ದಾರೆ. ಆದರೂ ಉಳಿದೆಲ್ಲ ಕಲೆಗಳಂತೆ ಮೂರ್ತಿಶಿಲ್ಪಕಲೆಗೂ ರಾಜಾಶ್ರಯ ತಪ್ಪಿದ್ದರಿಂದ, ಇಲ್ಲೊಬ್ಬರು ಅಲ್ಲೊಬ್ಬರು ಜೀವಹಿಡಿದು ಬದುಕುತ್ತಿದ್ದಾರೆ.

ಮೂರ್ತಿಕಾರರ ಕುಟುಂಬದಲ್ಲಿಯೇ ಜನ್ಮವೆತ್ತಿದ ನಾರದರು. ಈ

ವೃತ್ತಿಯಲ್ಲಿ ಭವಿಷ್ಯವಿಲ್ಲವೆಂದು ಮೊದಲೇ ಕಂಡುಕೊಂಡು ಮುಂಬಯಿಗೆ ಹೋಗಿ ಸಿನೇ-ಸ್ಟುಡಿಯೋ ಒಂದರಲ್ಲಿ ಕಲಾಸಹಾಯಕರಾಗಿ ಸೇರಿಕೊಂಡರು. ಆದರೆ ಮುಂಬಯಿಯ ಯಾಂತ್ರಿಕ ಜೀವನ ಇವರಿಗೆ ಸರಿಹೋಗದೇ ತಿರುಗಿ ಮಧ್ಯಪ್ರದೇಶಕ್ಕೆ ಬಂದು ಆದಿವಾಸಿ-ಸಂಶೋಧನಾ-ಕೇಂದ್ರದಲ್ಲಿ ಮೂರ್ತಿಕಾರ ರೆಂದು ಸೇರಿದರು. ಅಲ್ಲಿ ಆದಿವಾಸಿ ಜೀವನದ ವಿವಿಧ ಮುಖಗಳನ್ನು ಆಧರಿಸಿ ಮಾದರಿಗಳನ್ನು ಮಾಡುವದು ಅವರ ಕೆಲಸ. ಸಂತೆಗೆ ಹೊರಟ ಗೊಂಡ. ಪೇಟೆಗೆ ಹೊರಟ ಮಾರಿಯಾ ಮುಂತಾದವರ ಮೂರ್ತಿಗಳನ್ನು ಪ್ರಮಾಣ ಬದ್ಧವಾಗಿ ಮಾಡಿದ್ದಾರೆ. ಅದರಂತೆ ಆಭರಣಪ್ರಿಯ ಆದಿವಾಸಿ ಮಹಿಳೆಯರ ಮೂರ್ತಿಗಳಿಗೆ ಕಲ್ಪನೆಗೆ ನಿಲುಕಬಹುದಾದಂತಹ ಎಲ್ಲ ಆಭರಣಗಳನ್ನು ತೊಡಿಸಿದ್ದಾರೆ. ಚಿಕ್ಕ ಚಿಕ್ಕ ಮೂರ್ತಿಗಳನ್ನು ತಯಾರಿಸಿ ನೃತ್ಯ, ಬೇಟೆಯ ಸಂದರ್ಭಗಳನ್ನು ಕಲ್ಪಿಸುವದರಲ್ಲಿ ಅವರದು ಎತ್ತಿದ ಕೈ. ಮಾರಿಯಾರು ಕೋಡುಗಳನ್ನು ಕಟ್ಟಿಕೊಂಡು, ಮುಖವನ್ನು ಕವಡೆ-ಸರಗಳಿಂದ ಮುಚ್ಚಿ ಕೊಂಡು, ಢೋಲು ಬಾರಿಸುತ್ತ ನರ್ತಿಸುವಾಗ ಅವರ ಅರೆನಗ್ನ ಹೆಂಗಳೆಯರು ಗೆಜ್ಜೆಕಟ್ಟಿಕೊಂಡು, ಕೋಲು ಬಡಿಯುತ್ತ ತಾಳ ಹಾಕುವ ಮಾದರಿಗಳು ಜೀವಂತವಾಗಿವೆ. ಬೆನ್ನಿಗೆ ನವಿಲುಗರಿಗಳನ್ನು ಕಟ್ಟಿಕೊಂಡು ಢೋಲಕ್ ಬಡಿ ಯುವ ಗೊಂಡರ ನೃತ್ಯಗಳನ್ನು ರೂಪಿಸುವ ಮಾದರಿಗಳೂ ಆಕರ್ಷಕವಾಗಿವೆ. ಆದಿವಾಸಿಗಳ ಹಬ್ಬಗಳನ್ನು ಪ್ರತಿನಿಧೀಕರಿಸುವ ದೃಶ್ಯಗಳನ್ನು ರಚಿಸಿದ್ದಾರೆ. ಭಿಲ್ಲ, ಗೊಂಡ, ಕೊರ್ಕು ಹಳ್ಳಿಗಳ ವೈಶಿಷ್ಟ್ಯವನ್ನು ಎತ್ತಿತೋರಿಸುವ ದೃಶ್ಯ ಗಳನ್ನೂ ಕಟೆದಿದ್ದಾರೆ.

ನಾರದರು ಖಾಸಗಿಯಾಗಿಯೂ ಅನೇಕ ಸಂಸ್ಥೆಗಳಿಗೆ ಮೂರ್ತಿಗಳನ್ನು ತಯಾರಿಸಿಕೊಡುತ್ತಾರೆ. ಮನೆಯನ್ನೇ ಸಣ್ಣಮೂರ್ತಿ ಸಂಗ್ರಹಾಲಯವನ್ನಾಗಿ ಮಾಡಿದ್ದಾರೆ. ಮುಂಬಯಿಯಲ್ಲಿರುವಾಗ ಎಲಿಫಂಟಾ-ಗುಹಾಲಯದ ತ್ರಿಮೂರ್ತಿ ಗಳಂತಹ ಪ್ರತಿಮೆಗಳಿಗೆ ಹೆಚ್ಚಿನ ಬೇಡಿಕೆ ಇದ್ದುದರಿಂದ, ದೊಡ್ಡ ಪ್ರಮಾಣ ದಲ್ಲಿ ಅವನ್ನು ತಯಾರಿಸುತ್ತಿದ್ದರಂತೆ, ಭಯಭಕ್ತಿಗಳಿಂದ ದೇವರನ್ನು ನಮಿಸುವ ಕೈಗಳ ಉಬ್ಬುಚಿತ್ರ ಒಂದು ಗೋಡೆಯನ್ನಲಂಕರಿಸಿದರೆ, ಪ್ಲಾಸ್ಟರ್ ಆಫ್ ಪ್ಯಾರಿಸ್‌ದಲ್ಲಿ ತಯಾರಿಸಿದ ಹಲವಾರು ಕಲಾಕೃತಿಗಳು ಅವರ ಸಂಗ್ರಹ ದಲ್ಲಿವೆ. ಶಿವನು ಜಡೆಗಳನ್ನು ಹರಡಿಕೊಂಡು, ಡಮರು ಬಾರಿಸುತ್ತ ತಾಂಡವ

ನೃತ್ಯದಲ್ಲಿ ಮೈಮರೆತಿರುವ ವಿಗ್ರಹ, ಎಲ್ಲೋರದ ಕುಬೇರದಂಪತಿಗಳ ಪ್ರತಿಕೃತಿಗಳೊಂದಿಗೆ, ಅಂಗಡಿಕಾರರು ಕುಪ್ಪಸ ತೊಡಿಸಿ, ಸೀರೆ ಉಡಿಸಿ ಪ್ರದರ್ಶನಕ್ಕಾಗಿ ನಿಲ್ಲಿಸುವ ಸ್ತ್ರೀ-ವಿಗ್ರಹಗಳೂ ಇದ್ದವು. ಮಕ್ಕಳ ಉದ್ಯಾನಕ್ಕಾಗಿ ಆನೆ, ಹುಲಿ, ಸಿಂಹಗಳ ಸಿಮೆಂಟಿನ ಮಾದರಿಗಳನ್ನು ತಯಾರಿಸುವ ಗುತ್ತಿಗೆಯನ್ನು ತಾವು ತೆಗೆದುಕೊಳ್ಳುವದಾಗಿ ಅವರು ವಿವರಿಸಿದರು. ಅವರ ಕೃತಿಗಳ ವೈಶಿಷ್ಟ್ಯವೆಂದರೆ ಎಲ್ಲ ಮುಖಗಳು ಒಂದೇ ತೆರನಾಗಿರುವದು. ಅವರು ಅವುಗಳ ಮೇಲೆ ತಮ್ಮ ಹೆಸರು ಬರೆಯಬೇಕೆಂದಿಲ್ಲ. ಅವರ ಮಕ್ಕಳೂ ತಂದೆಯ ನಿರ್ದೇಶನದಲ್ಲಿ ಮೂರ್ತಿ-ಕಲೆ ಕಲಿಯುತ್ತಿದ್ದಾರೆ. ಆದರೆ ಈ ದಿನಗಳಲ್ಲಿ ಮೂರ್ತಿಕಾರರಿಗೆ ಏನೂ ಅವಕಾಶವಾಗಲಿ, ಭವಿಷ್ಯವಾಗಲಿ ಇಲ್ಲವೆಂದು ನಾರದರು ಖಚಿತವಾಗಿ ನಂಬಿದ್ದಾರೆ. ತಮ್ಮ ಮಟ್ಟಿಗೆ ಬೇಗನೇ ನಿವೃತ್ತರಾಗಿ ಮೂರ್ತಿಸಂಗ್ರಹಾಲಯವೊಂದನ್ನು ಮಾಡಬೇಕೆಂದು ಯೋಚಿಸುತ್ತಿದ್ದಾರೆ. ಮೂರ್ತಿ-ಕಲೆಯ ಮೇಲೆ ಪುಸ್ತಕವೊಂದನ್ನು ಬರೆಯಬೇಕೆಂದಿದ್ದಾರೆ.

ಭೋಪಾಲದ ಖುಶ್ವಾರು ಕೊರಡನ್ನು ಮಾಧ್ಯಮವನ್ನಾಗಿ ಮಾಡಿಕೊಂಡಿದ್ದಾರೆ. ಕಲಾಕಾರರೆಂದು ಅವರು ಬೆಳಕಿಗೆ ಬಂದ ರೀತಿ ವಿಚಿತ್ರವಾಗಿದೆ. ಮೊದಲಿಗೆ ಅವರು ಕಾರಖಾನೆಯಲ್ಲಿ ಔದ್ಯೋಗಿಕ ಸಲಕರಣೆಗಳನ್ನು ಮಾಡುತ್ತಿದ್ದರು. ಹತ್ಯಾರಗಳನ್ನು ಮಾಡುವದಕ್ಕಿಂತ ಕಟ್ಟಿಗೆಯ ಕೆಲಸದಲ್ಲಿ ಹೆಚ್ಚಿನ ಆಸಕ್ತಿ ತೋರಿಸಿದ್ದರಿಂದ, ಕಾರಖಾನೆಯ ಡಾಯರೆಕ್ಟರರು ಅವರ ಪ್ರತಿಭೆಯ ಉಪಯೋಗ ಬೇರೆಡೆ ಆಗಲೆಂದು ಆದಿವಾಸಿ ಸಂಸ್ಥೆಗೆ ಸೇರಲು ಅವಕಾಶ ಮಾಡಿಕೊಟ್ಟರು. ಈಗ ಅವರು ಕಾಷ್ಠಕಲಾಕಾರರೆಂದು ಭೋಪಾಲದಲ್ಲಿ ಕೆಲಸ ಮಾಡುತ್ತಿದ್ದಾರೆ. ದೊಡ್ಡ ಕೊರಡುಗಳಲ್ಲಿ ಉಬ್ಬುಚಿತ್ರ, ಮೂರ್ತಿಗಳನ್ನು ರಚಿಸುತ್ತಾರೆ. ಒಮ್ಮೆ ಖಜುರಾಹೋದ ಸುರಸುಂದರಿಯನ್ನು ಕಟ್ಟಿಗೆಯಲ್ಲಿ ಮೂಡಿಸಿದಾಗ ಅಲ್ಲಿಗೆ ಬಂದ ಸ್ವಿಸ್ ರಾಯಭಾರಿಗಳು ಅದಕ್ಕೆ ಮರುಳಾಗಿ ಹೇಳಿದ ಬೆಲೆಗೆ ಕೊಂಡುಕೊಂಡುಬಿಟ್ಟರಂತೆ. ಇದರಿಂದಾಗಿ ತಾವು ಸೂಚಿಸಿದ ಬೆಲೆ ತೀರ ಕಡಿಮೆಯಾಯಿತು ಎಂದು ನಂತರ ಪರಿತಪಿಸಿದರು ! ಇನ್ನೊಮ್ಮೆ ಕೆಂಬಣ್ಣದ ಹಲಿಗೆಯ ಮೇಲೆ ಹಸಿ ಬಿದಿರನ್ನು ಸೀಳಿ ಜೋಡಿಸಿ, ತಂತಿ-ಜೋಡಣೆಯ ಸಲಾಕೆಯಿಂದ ಬಿದಿರು ಸುಡುವಂತೆ ಮಾಡಿ ಕಪ್ಪು ನಕ್ಷೆಗಳನ್ನು ಬಿಡಿಸಿದ್ದರು. ಅದಕ್ಕೆ ಬಂದ ಖರ್ಚು ಕೇವಲ ಇಪ್ಪತ್ತೈದು ರೂಪಾಯಿಗಳು. ಯಾರಾದರೂ ನೂರು

ರೂಪಾಯಿ ಕೊಟ್ಟರೆ ಮಾರಿಬಿಡಬೇಕು ಎಂದುಕೊಂಡಿದ್ದರಂತೆ. ಅಮೇರಿಕನ್ ಪ್ರವಾಸಿ ಒಬ್ಬ ಬೆಲೆ ಕೇಳಿದಾಗ ಖುಶ್ವಾರು ಇನ್ನೂರು ರೂಪಾಯಿ ಎಂದರಂತೆ. ಆತ ಮುನ್ನೂರಕ್ಕೆ ಕೊಂಡುಕೊಂಡಾಗ ಅವ ಆಶ್ಚರ್ಯ ಅಷ್ಟಿಷ್ಟಲ್ಲವಂತೆ. ತೇಗಿನಲ್ಲಿ ಶ್ರಮಪಟ್ಟು ಕೊರೆದ ಬಾಗಿಲೊಂದಕ್ಕೆ ಜರ್ಮನ್ ಪ್ರವಾಸಿಯೊಬ್ಬನಿಂದ ಐದುಸಾವಿರ ರೂಪಾಯಿ ಪಡೆದರು. ಅವರು ಮರುಮಾತಿಲ್ಲದೇ ಕೊಂಡು ವಿಮಾನಮಾರ್ಗವಾಗಿ ಫ್ರಾಂಕಫರ್ಟಿಗೆ ಕಳಿಸಿಬಿಟ್ಟರಂತೆ. ಇದರಿಂದಾಗಿ ಪಾಶ್ಚಾತ್ಯ ದೇಶಗಳಲ್ಲಿ ಕಲೆಯ ವ್ಯಾಮೋಹ ತುಂಬ ಇದೆ, ಬೆಲೆಯೂ ಇದೆಯೆಂದು ನಂಬಿ ಬೇರೆ ಬೇರೆ ರಾಷ್ಟ್ರಗಳ ವಸ್ತುಸಂಗ್ರಹಾಲಯಗಳ ವಿಳಾಸ ಪಡೆದು ತಮ್ಮ ಹಲವಾರು ಕಲಾಕೃತಿಗಳನ್ನು ಕಳಿಸಿದರು. ಆಯಾ ದೇಶಗಳಿಂದ ಭಾರೀ ಆರ್ಡರನ್ನು ನಿರೀಕ್ಷಿಸಿದ ಖುಶ್ವಾರಿಗೆ, ಕೇವಲ ಕೃತಜ್ಞತೆಯ ಪತ್ರಗಳು ಬಂದಾಗ ಆದ ನಿರಾಶೆ ವಿಪರೀತ. ಆದಿವಾಸಿ-ಜೀವನವನ್ನು ಕಟ್ಟಿಗೆಯಲ್ಲಿ ಮೂಡಿಸಿದ್ದಕ್ಕಾಗಿ ಅವರಿಗೆ ಪ್ರಶಸ್ತಿಯೂ ದೊರಕಿದೆ.

ಪಶ್ಚಿಮಬಂಗಾಲದ ಗುಹಾರು ನಿರಾಶ್ರಿತರಿಗೆಂದು ಪ್ರಾರಂಭವಾದ ದಂಡಕಾರಣ್ಯ-ಯೋಜನೆಯಲ್ಲಿ ಡ್ರಾಫ್ಟ್ಸಮನ್ನರಾಗಿ ಬಂದಿದ್ದರು. ಮೊದಲಿನಿಂದಲೂ ಮೂರ್ತಿಕಲೆಯಲ್ಲಿ ಅಭಿರುಚಿ, ತರಬೇತಿಗಳೆರಡೂ ಇದ್ದದ್ದರಿಂದ ನಿವೃತ್ತರಾದ ಮೇಲೆ ಬಸ್ತರಜಿಲ್ಲೆಯ ಮುಖ್ಯ ಪಟ್ಟಣವಾದ ಜಗದಲಪುರದಲ್ಲಿ ಒಂದು ಕಲಾಕೇಂದ್ರವನ್ನು ತೆರೆದಿದ್ದಾರೆ. ಅವರನ್ನು ಕಾಣಹೋದಾಗ ಅವರು ಯಾವದೋ ಕೆಲಸದ ಮೇಲೆ ಮುಂಬಯಿಗೆ ಹೋಗಿದ್ದರಿಂದ ಶ್ರೀಮತಿ ಗುಹಾರೇ ಹಿಂದಿಯೂ ಅಲ್ಲ ಬಂಗಾಲಿಯೂ ಅಲ್ಲದ ವಿಚಿತ್ರ ಇಂಗ್ಲಿಷ್ ಮಿಶ್ರಿತ ಭಾಷೆಯಲ್ಲಿ ಪತಿಯ ಚಟುವಟಿಕೆಗಳ ಬಗ್ಗೆ ವಿವರಗಳನ್ನು ಪೂರೈಸಿದರು. ಆ ಕಟ್ಟಡದ ಒಂದು ಬದಿಯಲ್ಲಿ ನಾಲ್ಕೈದು ಕಲಾಕಾರರು ತೇಗಿನ ಹಲಗೆಯ ಮೇಲೆ ಕೊರೆಯಬೇಕಾದ ಚಿತ್ರಗಳನ್ನು ಗುರುತು ಹಾಕಿಕೊಂಡು ಚಾಣಗಳಿಂದ ಉಬ್ಬುಚಿತ್ರಗಳನ್ನು ರಚಿಸುತ್ತಿದ್ದರು. ಮುರಿಯಾರ ಘೋಟುಲ್ ಮತ್ತು ಪರಿಸರ, ಮಾರಿಯರ ನೃತ್ಯ, ಸಂತೆ, ಮುಂತಾದ ದೃಶ್ಯಗಳು, ಆದಿವಾಸಿ ಕೌಟುಂಬಿಕ ಚಿತ್ರಗಳು, ಕಲಾಶಾಲೆಯ ಗೋಡೆಗಳನ್ನು ಅಲಂಕರಿಸಿದ್ದವು. ಅಲ್ಲದೇ ಹಿತ್ತಾಳೆಯಲ್ಲಿ ಮಾಡಿದ ಚಿಕ್ಕ ದೊಡ್ಡ ನೂರಾರು ಪ್ರತಿಮೆಗಳಿದ್ದವು. ಅವುಗಳಲ್ಲಿ ಬಹುಸಂಖ್ಯಾತವು, ಆನೆ, ಕುದುರೆ, ಜಿಗರೆ, ಮೀನು, ಆದಿವಾಸಿಗಳ ದೇವತೆಗಳವೇ

ಇದ್ದವು. "ಈ ಕೃತಿಗೆ ಬಹುಮಾನ, ಈ ಕೃತಿಗೆ ರಾಷ್ಟ್ರಪ್ರಶಸ್ತಿ, ಇದಕ್ಕೆ ಭೋಪಾಲ ಪ್ರದರ್ಶನದಲ್ಲಿ ಪಾರಿತೋಷಕ ದೊರೆತಿದೆ" ಎಂದು ಶ್ರೀಮತಿ ಗುಹಾರು ಪತಿಯ ಸಾಧನೆಗಳನ್ನು ಬಣ್ಣಿಸುತ್ತ ಹಲವಾರು ಸರ್ಟಿಫಿಕೇಟು, ಪ್ರಶಸ್ತಿಪತ್ರಗಳನ್ನು ತೋರಿಸಿದರು. "ನಮ್ಮವರ ಕಲಾಕೃತಿಗಳು ಪ್ರಪಂಚದ ಮೂಲೆಮೂಲೆಗಳಲ್ಲಿವೆ. ಅವರಿಲ್ಲಿ ಇದ್ದಿದ್ದರೆ ನಿಮ್ಮನ್ನು ನೋಡಿ ಅದೆಷ್ಟೊ ಮಾಹಿತಿ ಒದಗಿಸುತ್ತಿದ್ದರು" ಎಂದು ಬಾಯಿತುಂಬ ಉಪಚರಿಸಿದರು. "ಗುಹಾರು ಮೂರ್ತಿಗಳನ್ನು ರಚಿಸುವದಲ್ಲದೇ ಅವುಗಳ ಹಿನ್ನೆಲೆಯನ್ನೂ ಆಳವಾಗಿ ಅಭ್ಯಸಿಸಿದ್ದಾರೆಂದು ಕೇಳಿದ್ದೆ" ಎಂದಾಗ ಅವರು ಖುಶಿಯಾಗಿ, "ಬೆಲೆಯುಳ್ಳ ಗ್ರಂಥರಾಶಿಯನ್ನೇ ಕಲೆಹಾಕಿದ್ದಾರೆ. ಈ ಇಳಿವಯಸ್ಸಿನಲ್ಲಿ ಬೆಳಗಿನ ಒಂದು, ಎರಡು ಗಂಟೆಯ ತನಕ ಎಡಬಿಡದೇ ಓದುತ್ತಾರೆ. ಅವರ ಶ್ರಮ, ಯೋಗ್ಯತೆಗಳಿಗೆ ತಕ್ಕ ಯಾವ ಪ್ರತಿಫಲವೂ ಸಿಗುತ್ತಿಲ್ಲ. ಅವಿಶ್ರಾಂತ ಪರಿಶ್ರಮದಿಂದ ಅವರ ಆರೋಗ್ಯ ಕೆಡಬಹುದೆಂದು ನನಗೆ ಯೋಚನೆ" ಎಂದು ಮಾತು ಮುಗಿಸಿದರು.

ನಂತರದ ದಿನಗಳಲ್ಲಿ ಗುಹಾರ ಕಲೆಯ ಬಗ್ಗೆ ಹೆಚ್ಚಿನ ಮಾಹಿತಿ ಕೂಡಿಹಾಕಿದಾಗ ಅವರ ಯಶಸ್ಸಿನ ಬಗ್ಗೆ ವಿವರಗಳು ದೊರೆತವು. ಗುಹಾರು ತಮ್ಮ ಕಲಾಭಿರುಚಿಯನ್ನು ವ್ಯಾವಹಾರಿಕವಾಗಿ ಬೆಳೆಸಿಕೊಂಡಿದ್ದಾರೆ. ದೇಶದ ಮತ್ತು ವಿದೇಶಗಳ ಸಿರಿವಂತರಿಗೆ ಕಲಾತ್ಮಕವಾದ ಕೃತಿಗಳನ್ನು ಮಾರಿ ತಾವು ಧನಿಕರಾಗುವ ದೃಷ್ಟಿಕೋನ ಅವರದು. ನಿರುದ್ಯೋಗಿಗಳಾದ ಕಲಾಕಾರರಿಗೆ ಅಲ್ಪ ಸಂಬಳದ ಮೇಲೆ ನೇಮಿಸಿಕೊಂಡು, ಪ್ರವಾಸಿಗರಿಗೆ ರುಚಿಸಬಹುದಾದ ಸಾಮಗ್ರಿಗಳನ್ನು ತಯಾರಿಸುತ್ತಾರೆ. ಬಂಗಾಲದಿಂದಲೂ ಕೆಲ ಕಲಾವಿದರನ್ನು ಕರೆಸಿಕೊಂಡು, ತಮ್ಮ ಕಲ್ಪನೆಗೆ ಅನುಗುಣವಾದ ಮೂರ್ತಿಗಳನ್ನು ತಯಾರಿಸಲು ಆದೇಶ ಕೊಡುತ್ತಾರೆ. ಅವರ ಈ ದೃಷ್ಟಿಕೋನದಿಂದಾಗಿ ಶತಮಾನಗಳಿಂದ ಬೆಳೆದು ಬಂದ ಕಲಾಸಂಪ್ರದಾಯವೇ ಬುಡಮೇಲಾಗುತ್ತಿದೆ. ಭೋಪಾಲ, ಮುಂಬಯಿ, ದಿಲ್ಲಿಗಳಲ್ಲಿ ಅನೇಕ ಅಧಿಕಾರಿಗಳ ಪರಿಚಯವಿರುವದರಿಂದ, ಹೊರನಾಡುಗಳಲ್ಲಿ ಇಂಥ ಸಾಮಾನುಗಳನ್ನು ಮಾರುವವರ ಸಂಪರ್ಕ ಇಟ್ಟುಕೊಂಡದ್ದರಿಂದ, ವಿವಿಧ ಪ್ರದೇಶಗಳಲ್ಲಿ ನಡೆಯುವ ಕಲಾಪ್ರದರ್ಶನಗಳಲ್ಲಿ ಭಾಗವಹಿಸುವದರಿಂದ, ಅವರ ವ್ಯಾಪಾರ ತುಂಬ ಚನ್ನಾಗಿ ನಡೆದಿದೆ. ಕಲಾಭಿಮಾನಿಗಳು

ಇಂಥ ವ್ಯಾಪಾರೀ ಮನೋವೃತ್ತಿಯು ಕಲಾಕಾರರನ್ನು ಬಹಿಷ್ಕರಿಸಬೇಕಾದದ್ದು ನ್ಯಾಯ.

ಆದಿವಾಸಿಗಳು ಶತಮಾನಗಳಿಂದ ತಮ್ಮದೇ ರೀತಿಯಲ್ಲಿ ಮೂರ್ತಿಕಲೆಯನ್ನು ಬೆಳೆಸಿಕೊಂಡು ಬಂದಿದ್ದಾರೆ. ಘರುವಾರು ಆದಿವಾಸಿಗಳಲ್ಲದಿದ್ದರೂ, ಆದಿವಾಸಿಗಳ ನಿಕಟ ಸಂಪರ್ಕದಿಂದ, ಮತ್ತು ಅವರಿಗೆ ಬೇಕಾದ ಕಲಾವಸ್ತುಗಳನ್ನು ಒದಗಿಸುವದರಿಂದ ಅವರ ಕಲೆಯನ್ನು ಆದಿವಾಸಿ ಗುಂಪಿನಲ್ಲಿ ಸೇರಿಸಬಹುದಾಗಿದೆ. ಇವರ ವಸತಿ ಬಸ್ತಾರ ಜಿಲ್ಲೆಗೇ ಸೀಮಿತವಾಗಿದೆ. ಇವರು ಮಣ್ಣಿನ ಅಚ್ಚುಗಳನ್ನು ತಯಾರಿಸಿ, ಅದರಲ್ಲಿ ಮೇಣವನ್ನು ತುಂಬುತ್ತಾರೆ. ಈ ಅಚ್ಚಿನ ಬುಡದಲ್ಲಿ ಚಿಕ್ಕ ಪಾತ್ರೆಯೊಂದರಲ್ಲಿ ಹಿತ್ತಾಳೆಯನ್ನು ಇಟ್ಟು ಕರುಗುವಷ್ಟು ಬೆಂಕಿಮಾಡುತ್ತಾರೆ. ಸಂಪೂರ್ಣ ಕರಗಿದ ನಂತರ ಬುಡಮೇಲು ಮಾಡಿ, ಮೇಣದ ಗೊಂಬೆ ಇಡುವಲ್ಲಿ ಹಿತ್ತಾಳೆ ಹರಿಯುವಂತೆ ಮಾಡಿ ಆರಿಸುತ್ತಾರೆ. ಆರಿದನಂತರ ಹೊರಗಿನ ಮಣ್ಣನ್ನು ಬಡೆದರೆ, ಒಳಗೆ ಹಿತ್ತಾಳೆಯ ಮೂರ್ತಿ ಸಿದ್ಧವಾಗಿರುತ್ತದೆ. ಘರುವಾರ ಮೂರ್ತಿಕಲೆಯ ವೈಶಿಷ್ಟ್ಯವೆಂದರೆ ಎಲ್ಲಾ ಕೃತಿಗಳೂ ಪೊಳ್ಳಾಗಿದ್ದು, ಅವುಗಳನ್ನು ಬಿಂದು, ವರ್ತುಲ, ಗೀರುಗಳಿಂದ ವಿವಿಧ ಪ್ರಕಾರಗಳಲ್ಲಿ ಅಲಂಕರಿಸುತ್ತಾರೆ. ಉಷ್ಣತೆಯನ್ನು ಆರಿಸುವ ಪ್ರಮಾಣದ ಮೇಲೆ ಮೂರ್ತಿಗಳ ವರ್ಣವೂ ಬೇರೆಬೇರೆಯಾಗಿರುತ್ತವೆ. ಕೆಲವು ಹಳದಿಯಾಗಿ ಚಿನ್ನದಂತೆ ಮಿನುಗುತ್ತಿದ್ದರೆ ಕೆಲವು ತಾಮ್ರದಂತೆ ಕೆಂಬಣ್ಣ ತಾಳಿರುತ್ತವೆ. ಇನ್ನೂ ಕೆಲವು ಕಂದು ಬಣ್ಣದವಾಗಿರುತ್ತವೆ. ಅವನ್ನು ಮಿರುಗುವಂತೆ ಪಾಲಿಶ್ ಮಾಡದೇ ಇರುವದರಿಂದ ಕೊಂಡವರೇ ಆ ಕೆಲಸ ಮಾಡಬೇಕಾಗುತ್ತದೆ. ಈ ಕೃತಿಗಳು ಹೆಚ್ಚಿನ ಬೆಲೆ ತಾರದೇ ಇರುವದಕ್ಕೆ ಇದೂ ಒಂದು ಕಾರಣವಿರಬೇಕು.

ಕೊರ್ಕು ಆದಿವಾಸಿಗಳ ಹಳ್ಳಿಗಳು ಇರುವಲ್ಲಿ ಕೆಲವು ಶಿಲಾಮೃತ್ಯುಸ್ತಂಭಗಳು ಕಂಡುಬರುತ್ತವೆ. ಇವು ಎಂಟು-ಹತ್ತು ಶತಮಾನಗಳ ಹಿಂದಿನವು ಇರಬೇಕು. ಇವುಗಳ ಮೇಲೆ ಕರ್ನಾಟಕದ ವೀರಗಲ್ಲುಗಳಂತೆ, ಮೃತನ ಸಾಹಸ, ಶೌರ್ಯಗಳನ್ನು ತೋರಿಸುವ ಚಿತ್ರಗಳಿರುತ್ತವೆ. ಇಂದಿನ ಕೊರ್ಕುಗಳು ಇಂಥ ಶಿಲಾಸ್ತಂಭಗಳ ಬದಲು ತೇಗಿನ ಕಂಬಗಳನ್ನು ನಿಲ್ಲಿಸುತ್ತಾರೆ. ಇವುಗಳ ಮೇಲೆ ಮೃತನು ಕುದುರೆಸವಾರಿಗೆ ಹೊರಟದ್ದು, ಅವನ ಪ್ರೀತಿಯ ಪ್ರಾಣಿಗಳು,

ಗಿಡಮರಗಳು ಮುಂತಾದವನ್ನು ಕೊರೆದಿರುತ್ತಾರೆ. ಭಿಲ್ಲರಲ್ಲಿ ಮೃತನ ನೆನಪಿಗೆ ಭವ್ಯವಾದ ಉಬ್ಬು ಚಿತ್ರಗಳನ್ನು ಮಾಡಿ ಊರಜನರ ಕಣ್ಣಿಗೆ ಕಾಣುವಂತೆ ಸ್ಥಾಪಿಸಿರುತ್ತಾರೆ. ಮಾಂಡುವಿನ ಹತ್ತಿರದ ಭಿಲ್ಲರ ಹಳ್ಳಿಯಲ್ಲಿ, ಕ್ರೂರಸರ್ಪ ವನ್ನು ಕೊಂದವನ, ಕಳ್ಳನನ್ನು ಹಿಡಿದವನ ನೆನಪಿಗೆ ವೀರಗಲ್ಲು ನಿಲ್ಲಿಸಿದ್ದಾರೆ. ಬಸ್ತರ ಜಿಲ್ಲೆಯಲ್ಲೂ ಕೊರಡಿನ ಸ್ತಂಭಗಳನ್ನು ನಿಲ್ಲಿಸುವ ಪರಿಪಾಠವಿದೆ. ಇವುಗಳ ನಾಲ್ಕೂ ಮೈಗಳ ಮೇಲೆ ಉಬ್ಬುಚಿತ್ರಗಳಿವೆ. ಹಿಂದೂಧರ್ಮದ ಹೆಚ್ಚಿನ ಪ್ರಭಾವವಿರುವ ಆದಿವಾಸಿಗಳಲ್ಲಿ ಗಣೇಶ, ಹನುಮಾನ, ಉಮಾಮಹೇಶ್ವರ ಮೊದಲಾದ ದೇವತೆಗಳ ವಿಗ್ರಹಗಳನ್ನು ತಮ್ಮದೇ ಕಲ್ಪನೆಯಿಂದ ಕೊರೆಯುವ ರೂಢಿ ಬೆಳೆಸಿಕೊಂಡಿದ್ದಾರೆ.

ಕುಂಬಾರರು, ಆದಿವಾಸಿಗಳ ಬಳಕೆಗಾಗಿ, ಅನೇಕ ತರದ ಮಣ್ಣಿನ ಮೂರ್ತಿಗಳನ್ನು ತಯಾರಿಸುತ್ತಾರೆ. ಅವುಗಳಲ್ಲಿ ಭಿಮುಲ್‌ದೇವ್, ಮಾಟೀರ್-ದೇವ್‌ಗಳಂತಹ ಪೂಜಾವಿಗ್ರಹಗಳು ಇರುವಂತೆ, ಕಾಡುಹಂದಿ, ಒಂಟೆ, ಎತ್ತು ಮೊದಲಾದ ಆಟಿಗೆಯ ಸಾಮಾನುಗಳೂ ಇರುತ್ತವೆ. ಇವುಗಳ ವೈವಿಧ್ಯ ನೋಡಲು, ಭೋಪಾಲ್, 'ಛಿಂದವಾಡಾಗಳಲ್ಲಿಯ ಆದಿವಾಸಿ ವಸ್ತುಸಂಗ್ರಹಾಲ ಯುಗಳಿಗೆ ಭೇಟ್ಟಿಕೊಡಬೇಕು. ಆದಿವಾಸಿಗಳಿಗೆ ಪ್ರೋತ್ಸಾಹ ನೀಡಲು ಅವರ ಕಲಾಕೃತಿಗಳನ್ನು ಮಾರಲೆಂದು, ರಾಜ್ಯಸರಕಾರ ಅನೇಕ ಸ್ಥಳಗಳಲ್ಲಿ ಕಲಾಕೇಂದ್ರ ಗಳನ್ನು ತೆರೆದಿದೆ. ಜಗದಲಪುರ, ನಾರಾಯಣಪುರಗಳಲ್ಲಿ ಇಂತಹ ಕೇಂದ್ರಗಳಿವೆ. ಇದಲ್ಲದೇ ಮಾನವಶಾಸ್ತ್ರಖಾತೆಯವರು ಆದಿವಾಸಿ ಕೃತಿಗಳನ್ನು ಸಂಗ್ರಹಾ ಲಯದಲ್ಲಿ ಇಟ್ಟಿದ್ದಾರೆ. ಇಂತಹದೊಂದು ಸಂಗ್ರಹಾಲಯು ಜಗದಲಪುರದಲ್ಲಿದೆ. ಅದರಲ್ಲಿಯ ಎಂಟು ಅಡಿ ಎತ್ತರದ ತೇಗಿನ ಮೃತ್ಯುಸ್ತಂಭ ಮತ್ತು ಅದರ ಮೇಲೆ ಇರುವ ಉಬ್ಬುಚಿತ್ರಗಳು ನೋಡುವಂತಹವು. ಕಾಷ್ಠಕೃತಿಗಳೆಲ್ಲ ಬೇಗನೇ ಕೀಟಗಳ ಪಾಲಾಗುವದರಿಂದ ಇಂತಹವು ಒಳ್ಳೆಸ್ಥಿತಿಯಲ್ಲಿ ದೊರ ಕುವದು, ಉಳಿಯುವದು ವಿರಳ.

ಕಿಶೋರ ಕೆಳೆಮರು 62 ೫।೨
ಹೊಗೆಬುಲ್ ॥ –

# ೨೦. ಚಮೋಲಿ

ನಮ್ಮಲ್ಲಿಯು ಊರುಗಳಿಗೆ ಮಲ್ಲಿಗೆ, ಜಾಜಿ, ಸುಶಿಗೆ, ಸೇವಂತಿಗೆಯೆಂದು ಆಕರ್ಷಕ ಹೆಸರುಗಳನ್ನು ಏಕೆ ಕೊಡುವದಿಲ್ಲವೋ ಏನೋ! ಆದಿವಾಸಿ ಮುರಿಯರು ತಮ್ಮ ಒಂದು ಹಳ್ಳಿಗೆ 'ಚಮೋಲಿ' ಎಂಬ ಹಗುರವಾದ ಹೂವಿನ ಹೆಸರು ಕೊಟ್ಟಿದ್ದಾರೆ. ಬಹುಶಃ ಹಿಂದೊಮ್ಮೆ ಊರ ರಸಿಕ ಮುಂದಾಳು ತನ್ನ ಪ್ರೇಯಸಿಗೆ ಪ್ರಿಯವಾದ ಹೂವಿನ ಹೆಸರನ್ನೆ ಊರಿಗಿಟ್ಟಿರಬೇಕು. ಇಂದಿಗೂ ಆ ರಸಿಕತೆ ಅರಳಿನಿಂತದ್ದು ಆ ಊರಿನಲ್ಲಿ ಕಾಣಬಹುದಾಗಿದೆ. ಲಕ್ಷ್ಮಣನ ರೇಖೆಗಳಂತಿದ್ದ ಗುಡ್ಡ, ಪರ್ವತ, ನದಿ, ಕೊಳ್ಳಗಳನ್ನು ದಾಟಿಯೇ ಚಮೋಲಿಗೆ ಹೋಗಬೇಕಾಗಿದ್ದರಿಂದ ಇದ್ದ ಜೋಡಿ ಕಾಲನ್ನು ನಂಬಿಯೇ ಹೊರಡಬೇಕು. ನಿರ್ಜನವಾದ ಶಾಂತವಾತಾವರಣ ಬಿಕೋ! ಎಂದು ನಿಂತ ಊರದೇವತೆಯ ದೇಗುಲ, ಹಳ್ಳಿಬಂದಿತೆಂದು ಸಾರಿ ಹೇಳಿತು. ಆವಾರದಲ್ಲಿ ತೇಗಿನಮರದಿಂದ ನಿರ್ಮಿತವಾದ ಜೋಕಾಲಿಯನ್ನು ಹೊತ್ತ ಜೋಡಿಕಂಬಗಳು ನಿಂತಿದ್ದವು. ಸುಖವಾಗಿ ಪವಡಿಸುವಲ್ಲಿ ಚೂಪಾದ ಮೊಳೆಗಳನ್ನು ಜೋಡಿಸಿದ ಉದ್ದೇಶವನ್ನು ವಿವರಿಸುತ್ತ ಮಾರ್ಗದರ್ಶಿಯಾಗಿ ಬಂದ ಸುಖದೇವನು, "ಹಬ್ಬ-ಹರಿದಿನ, ವಿಶೇಷ ಸಮಾರಾಧನೆಯ ದಿನಗಳಲ್ಲಿ ಊರಪುರೋಹಿತನಿಗೆ ಭಾರ ಬಂದಾಗ, ಕೈಯಲ್ಲಿ ಉರಿಯುವ ಕೆಂಡಗಳನ್ನು ಹಿಡಿದು, ಜೋಕಾಲಿಯ ಮೊನಚಾದ ಆಸನದ ಮೇಲೆ ಆರೂಢನಾಗಿ ಜನತೆಯ ಸಮಸ್ಯೆಗಳಿಗೆ, ತೊಂದರೆಗಳಿಗೆ ಪರಿಹಾರ ಸೂಚಿಸುತ್ತಾನೆ. ಬಾಬು, ಆ ಎಂಟು ಅಡಿಯ ಧ್ವಜಸ್ತಂಭ ಇಲ್ಲವೇ? ಅದನ್ನು ಅತಿ ಪೂಜ್ಯವೆಂದು ಭಾವಿಸಿ, ಅದಕ್ಕೆ ಬಿಳಿಬಟ್ಟೆಯ ಕವಚವನ್ನು ಹೊಲಿದು ಹಾಕುತ್ತಾರೆ. ಗೆದ್ದಲಿನ ಕಾಟದಿಂದಾಗಿ ವರ್ಷಕ್ಕೊಮ್ಮೆ ಧ್ವಜಸ್ತಂಭವನ್ನು ಮತ್ತು ಕವಚವನ್ನು ಬದಲಿಸಬೇಕಾಗುತ್ತದೆ ಎಂದು ವಿವರಿಸಿದ.

ಎತ್ತರವಾಗಿ ನಿಂತ ಭರಣಗಿ (ಸಲ್ಫಿ)ಮರಗಳು, ಜನರ ರಸಮಯ ಜೀವನದ ಸಂಕೇತವಾಗಿ ನಿಂತಿದ್ದವು. ಈ ಮರಗಳು ಮುರಿಯರಿಗೆ ಕಲ್ಪವೃಕ್ಷ ಇದ್ದಂತೆ. ಬೇಸಿಗೆಯಲ್ಲಿ ಅದರ ಪರ್ಣಗಳು ಬೀಸಣಿಕೆಯಂತೆ ಬೀಸಿ, ನೆರಳಿನ

ಜೊತೆಗೆ ತಂಪನ್ನು ಕೊಟ್ಟರೆ, ಚಳಿಗಾಲ, ಮಳೆಗಾಲದಲ್ಲಿ ಅದರ ಸೆರೆಯಾದ ಸಲ್ಫಿ, ಆದಿವಾಸಿಗಳನ್ನು ಬೆಚ್ಚಗೆ ಇಡುತ್ತದೆ. ಅಂತೆಯೇ ಎತ್ತರವಾದ ಮರಗಳನ್ನು ಏರುವವರ ಸಲುವಾಗಿ ತೊಗಟೆ ಕಡಿದು ಪಾವಟಿಗೆ ಮಾಡಿದ್ದಾರಲ್ಲದೇ ಕಡಿದ ಕೊನೆಯಿಂದ ಹರಿಯುವ ರಸವನ್ನು ಸಂಗ್ರಹಿಸಲು ಇಟ್ಟ ಮಡಿಕೆಯನ್ನು ಮೇಲಿಂದ ಮೇಲೆ ಬರಿದು ಮಾಡಲು ಬರುವಂತೆ, ಪಾವಟಿಗೆಯಿಂದ ಗೊನೆಯವರೆಗೆ ಸಣ್ಣ ಏಣಿಯನ್ನು ಜೋಡಿಸಲಾಗಿದೆ. ದಿನಕ್ಕೆರಡು ಬಾರಿ ಮರ ಹತ್ತಿ ಇಳಿಯಲು ಮಾಡಿಕೊಂಡ ಈ ಮುರಿಯರ ಸೌಲಭ್ಯಕ್ಕೆ ತಲೆದೂಗಿದೆ. ಮುದಿಯಾದ ಮರಗಳು ತಮ್ಮನ್ನು ಯಮಧರ್ಮರಾಯನು ಏಕೆ ಮರೆತಿರುವನೋ ಎಂದು ಅಸಹಾಯಕವಾಗಿ ನಿಂತಿವೆ. ಒಣಗಿದ ಮರ, ಎಲೆಗಳನ್ನು ಗುಡಿಸಲ ನಿರ್ಮಾಣದಲ್ಲಿ ಬಳಸಲಾಗುತ್ತದೆ.

ಭವ್ಯ ಮರಗಳ ಅಡಿಯಲ್ಲಿ ನಿಂತ ಗುಡಿಸಲುಗಳು ತೀರ ಚಿಕ್ಕವಾಗಿ ಭಾಸವಾಗುತ್ತವೆ. ಹಳ್ಳಿಯ ಘೋಟುಲ್ (ಆದಿವಾಸಿ ಜೀವನ ಶಿಕ್ಷಣ ಕೇಂದ್ರ) ಎಲ್ಲಿದೆ? ಎಂದು ವಿಚಾರಿಸಲು ಒಂದು ಗುಡಿಸಲ ಮುಂದೆ ನಿಂತಾಗ ಅಂಗಳದಲ್ಲಿ ಕಟ್ಟಿ ಹಾಕಿದ ಕೆಂಪು ಮೂತಿಯ ಕೋತಿಯೊಂದು ಹೊಸಬರನ್ನು ಕಂಡು ಬೆದರಿ ಉಚ್ಚೆ ಮಾಡಿಕೊಂಡು ಗೂಕ್ ಎನ್ನುತ್ತ ವರ್ತುಲಾಕಾರದಲ್ಲಿ ತಿರುಗಿ ಸುರಕ್ಷಿತತೆಗಾಗಿ ಕಂಬದ ತುತ್ತತುದಿಯೇರಿ ಕುಳಿತಿತು. ಈ ಮಂಗ್ಯಾತನದಿಂದಲೇ ಯಾರೋ ಬಂದಿರುವ ಸುಳಿವು ಹತ್ತಿ ಪುಟ್ಟ ಮಗುವಿನ ತಾಯಿಯೊಬ್ಬಳು ಹೊರಗೆ ಬಂದಳು. 'ನಿಮ್ಮೂರಿನ ಘೋಟುಲ ಎಲ್ಲಿದೆ? ಎಂದು ವಿಚಾರಿಸಿದಾಗ, ಅವಳ ಮುಖದಲ್ಲಿ ನಗೆ ಮಿಂಚಿತು. ಬಹುಶ: ತನ್ನ ಬಾಲ್ಯದ ಸುಖಿ ಜೀವನ ನೆನಪಾಗಿರಬೇಕು. ಹಳ್ಳಿಯ ಮಧ್ಯದಲ್ಲಿದೆ. ನೆಟ್ಟಗೆ ಹೋಗಿ, ಬಲಕ್ಕೆ ತಿರುಗಿ. ಯಾರಿಗಾದರೂ ವಿಚಾರಿಸಿದರೆ ಖಂಡಿತ ಹೇಳುತ್ತಾರೆ' ಎಂದು ಮನೆಯೊಳಗೆ ಹೋಗುವವರಲ್ಲಿ ಇದ್ದಳು. ಕುಡಿಯಲು ಸ್ವಲ್ಪ ನೀರು ಸಿಗಬಹುದೇ ಎಂದು ಸುಖದೇವನು ಕೇಳಿದಾಗ, ಸಿಗದೇ ಏನು? ಎಂದು ಬಾಗಿಲ ಮುಂದೆ ಹುಗಿದ ಕಂಬದ ಮೇಲೆ ಇರಿಸಿದ ಮಡಕೆಯಿಂದ ದೊನ್ನೆ ತುಂಬ ನೀರು ತೆಗೆದು ಅವನ ಕೈಗಿತ್ತಳು. ದನಕರು, ನಾಯಿ, ಕೋಳಿ, ಮಂಗಗಳಿಂದ ನೀರನ್ನು ದೂರ ಇಡಲು ಈ ಕ್ರಮವಿರಬಹುದೆಂದುಕೊಂಡೆ.

ದೂರದಿಂದಲೇ ಕಾಣುವ ಎತ್ತರದ ಧ್ವಜಸ್ತಂಭದಂತಿದ್ದ ಕಂಬವೊಂದು

ಘೋಟುಲದ ಇರುವನ್ನು ಸಾರಿಹೇಳಿತು. ಕಂಬದ ಸುತ್ತಲೂ ಉರವಲಿಗೆ ಬೇಕಾಗುವ ಕಟ್ಟಿಗೆಯನ್ನು ರಾಶಿ ಹಾಕಿದ್ದರು. "ದಿನಂಪ್ರತಿ ಚಿಕ್ಕಮಕ್ಕಳು ಘೋಟುಲಕ್ಕೆ ಬರುವಾಗ ಒಂದೆರಡಾದರೂ ಪುಟ್ಟಕೊರಡು, ತುಂಡುಗಳನ್ನು ತರಬೇಕೆಂಬ ಕಡ್ಡಾಯವಿದೆ" ಎಂದು ಸುಖದೇವ ವಿವರಿಸಿದ. ಎಂತಹ ಎತ್ತರ ಜಿಗಿತದ ಕ್ರೀಡಾಪಟುವಿಗೂ ಹಾರಲಾಗದ, ಎಂತಹ ಕಾಡುಹಂದಿಯಿಂದಲೂ ಮುರಿಯಲಾಗದಂತಹ ಬೇಲಿಯನ್ನು, ಬಿದಿರಿನಿಂದ ಹೆಣೆದು ನಿಲ್ಲಿಸಿದ್ದರು. ಒಳಹೊರಗೆ ಬಂದು ಹೋಗುವಂತೆ ಸದಾ ತೆರೆದಿರುವ ದಣಪೆ, ಇಲ್ಲಿ ಮಾನವ ರಿಗಷ್ಟೇ ಸ್ವಾಗತವಿದೆ ಎಂದು ಸಾರಿತು. ಘೋಟುಲದ ಆವಾರದಲ್ಲಿ ಕಾಲಿಡು ತ್ತಿದ್ದಂತೆ, ಅಲ್ಲಿಯ ಶುಚಿಯಾದ ವಾತಾವರಣ, ಪ್ರಸನ್ನತೆ ತಂದಿತು. ಅಂಗಳ ವನ್ನೆಲ್ಲ ಚೆನ್ನಾಗಿ ಗುಡಿಸಿ ಸಾರಿಸಿದ್ದರು. ಮೂಲೆಯಲ್ಲಿ ಉರಿದು ತಣ್ಣಗಾದ ಕಟ್ಟಿಗೆ ಚೂರು, ಬೂದಿರಾಶಿಗಳಿದ್ದವು, ಅಲ್ಲಿಯ ರಾತ್ರಿಜೀವನದ ಸಂಕೇತವಾಗಿ, ಉರಿಯುವ ಬೆಂಕಿಯ ಸುತ್ತಲೂ ಕೂಡ್ರಲು ಬಳಸಿದ ಮಣೆಗಳು ವರ್ತುಲಾಕಾರ ದಲ್ಲಿದ್ದವು. ತೀರ ಕಿರಿದಾಗಿ ಉದ್ದವಾಗಿದ್ದ ಮಣೆಗಳು ಚಿಕ್ಕವರಿಗೆ ಕುಂಡೆಯೂರಲು ಅಷ್ಟೇ ಅವಕಾಶ ಕೊಡುವಂತೆ ಇದ್ದವು.

ಬಲಗಡೆಯಲ್ಲಿ ಹುಲ್ಲಿನ ಮಾಡಿನ, ಕಿರಿದಾದರೂ ಉದ್ದವಾದ ಕಟ್ಟಡ, ಗೋಡೆಗಳನ್ನು ನಿಲ್ಲಿಸುವ ಬದಲಾಗಿ, ನೆಲಗಟ್ಟಿನ ಮೇಲೆ ನಾಟುಗಳ ಆಧಾರದ ಮೇಲೆಯೇ ಭವ್ಯವಾದ ಚಪ್ಪರ ಹಾಕಿದ್ದರು. ಈ ಕಟ್ಟಡ ಹೀಗೇಕೆ ಎಂದು ವಿಚಾರಿಸಿದಾಗ ಸುಖದೇವನು, "ಈ ಆದಿವಾಸಿಗಳು ತಮ್ಮ ಮಕ್ಕಳು ಆರೇಳು ವರ್ಷದವರಾದೊಡನೆ ಘೋಟುಲಕ್ಕೆ ಕಳಿಸಿಬಿಡುತ್ತಾರೆ. ಹಳ್ಳಿಗೆ ಸಾಮಾನ್ಯವಾಗಿ ಒಂದೇ ಘೋಟುಲ ಇರುತ್ತದೆ. ಅದನ್ನು ಸಂಪೂರ್ಣವಾಗಿ ಅದರ ಸದಸ್ಯರೇ ನಡೆಸುತ್ತಾರೆ. ಏನೂ ಹೊಳೆಯುವ ಸಂದರ್ಭಗಳಲ್ಲಿ, ಕಷ್ಟಕಾಲದಲ್ಲಿ ಊರ ಹಿರಿಯರು ಅವರ ನೆರವಿಗೆ ಧಾವಿಸುತ್ತಾರೆ. ಈ ಕಟ್ಟಡಗಳನ್ನು ಅವರೇ ರಚಿಸಿದರು. ಬೇಸಿಗೆಯಲ್ಲಿ ಗಾಳಿಗಾಗಿ ಈ ಗೋಡೆಗಳಿಲ್ಲದ ಛಾವಣಿಯ ಕೆಳಗೆ ಮಲಗುತ್ತಾರೆ. ಮಳೆಗಾಲ, ಚಳಿಗಾಲಕ್ಕಾಗಿ ಬೇರೊಂದು ಕಟ್ಟಡವಿರುತ್ತದೆ" ಎಂದು ವಿವರಿಸುತ್ತ ಹತ್ತಿರವಿದ್ದ ಇನ್ನೊಂದು ಕಟ್ಟಡಕ್ಕೆ ಕರೆದುಕೊಂಡು ಹೋದ. ಸೆಗಣಿಯಿಂದ ಸಾರಿಸಿದ ಗೋಡೆಗೆ ಹಳದಿ ಬಣ್ಣ ಲೇಪಿಸಿದ್ದರು. ಅದರ ಮೇಲೆ ಹಲವಾರು ಪ್ರಾಣಿಗಳ ಉಬ್ಬುಚಿತ್ರಗಳಿದ್ದವು. ಇನ್ನೊಂದೆಡೆ ಕಪ್ಪು ಬಿಳಿ

ಕಲ್ಲುಗಳನ್ನು ಗೋಡೆಗೆ ಅಂಟಿಸಿ ನಕ್ಷೆಗಳನ್ನು ರಚಿಸಿದ್ದರು. ಬೆಳೆಯನ್ನು ಬಿತ್ತುವ ಮೊದಲು ಯಶಕೋರಿ ಇಂತಹ ಚಿತ್ರಗಳನ್ನು ನಿರ್ಮಿಸುವದು ವಾಡಿಕೆಯಾಗಿದೆ.

ಇರುವ ಒಂದೇ ಬಾಗಿಲಿಗೆ ಅಡ್ಡವಾಗಿ ನಿಲ್ಲಿಸಿದ ಬಿದಿರ ಬಾಗಿಲನ್ನು ದೂಡಿ ಒಳಗೆ ಹೋದಾಗ ಕಿಡಕಿಗಳಿಲ್ಲದ ಕಟ್ಟಡದಲ್ಲಿ ಕತ್ತಲೆ ತಾಂಡವವಾಡುತ್ತಿತ್ತು. ಬಿಸಿಲಿನಿಂದ ಕತ್ತಲೆಗೆ ಬಂದಿದ್ದರಿಂದ ಕಣ್ಣಿಗೆ ಏನೂ ಕಾಣಿಸದಂತಾಯಿತು. ಕೆಲ ಸಮಯದ ನಂತರ ಗೋಡೆಗೋಚರಿಸಿತು. ನಂತರ ಅದರ ಮೇಲೆ ಬಿಡಿಸಿದ ಬಿಳಿಯ ಚಿತ್ರಗಳು ಪ್ರತ್ಯಕ್ಷವಾದವು. ಅವನ್ನು ಲಕ್ಷಪೂರ್ವಕ ನೋಡುತ್ತಿದ್ದಾಗ ಪಕ್ಕದಲ್ಲಿ ಇದ್ದಲಿಯಿಂದ ಬಿಡಿಸಿದ ಚಿತ್ರಗಳೂ ಗೋಚರಿಸಿದವು. ಈ ಚಿತ್ರಗಳೆಲ್ಲ ಕಾಣಲು ಸುಲಭವಾಗಿ ಕಂಡರೂ ಶಕ್ತಿಯುತವಾಗಿದ್ದವು. ಕಲಾಕಾರರು ತಮ್ಮ ಅನಿಸಿಕೆಗಳನ್ನು ಚಿತ್ರರೂಪದಲ್ಲಿ ಇಳಿಸುವದರಲ್ಲಿ ಯಶಸ್ವಿಯಾಗಿದ್ದರು. ಅವು ಗಳಲ್ಲಿ ಪಶುಪಕ್ಷಿಗಳ ಚಿತ್ರವಿದ್ದಂತೆ ಪ್ರೇಮಿಗಳ, ಕಾಮಪ್ರಚೋದಕ ಚಿತ್ರಗಳೂ ಇದ್ದವು. ಅವುಗಳನ್ನು ವಿವರಿಸುತ್ತ "ಬಿಳಿಬಣ್ಣದ ಚಿತ್ರಗಳು, ಗೋಡೆಯನ್ನು ಅಲಂಕರಿಸುವದಕ್ಕಾಗಿಯೇ ಅಕ್ಕಿಹಿಟ್ಟನ್ನು ನೀರಿನಲ್ಲಿ ಕದಡಿ, ಬೆರಳಿನಿಂದ ಇಲ್ಲವೇ ಬಟ್ಟೆತುಣುಕಿನ ಬ್ರಶ್ ಮಾಡಿ ಬಿಡಿಸಿದಂತಹವುಗಳು. ಆದರೆ ಆ ಚಿತ್ರ ಗಳೆಲ್ಲ ವಿದ್ಯಾರ್ಥಿಗಳಿಗೆ ಆವೇಶ ಬಂದಾಗ ಬಿಡಿಸಿದವುಗಳು ಎಂದು ಘೋಟುಲದ ಮುಖ್ಯಸ್ಥ ಹೇಳಿದ. ಬೆಳಕಿಲ್ಲದ, ಗಾಳಿಯಾಡದ ಸ್ಥಳದಲ್ಲಿ ಹೇಗೆ ಆವೇಶ ಬರುವದೋ ಎಂದು ನನ್ನಷ್ಟಕ್ಕೆ ಅಂದುಕೊಂಡಾಗ, ಸುಖದೇವನು ಮುಗುಳ್ನಗೆ ನಕ್ಕು, "ಬಾಬು, ನಿಮಗೆ ಘೋಟುಲ ಬಗ್ಗೆ ಹೆಚ್ಚು ತಿಳಿಯದೆಂದು ತೋರು ತ್ತದೆ. ಪಟ್ಟಣಗಳಲ್ಲಿ ಬೆಳೆದು ಶಾಲೆ-ಕಾಲೇಜುಗಳಿಗೆ ಹೋದವರಿಗೆ ಘೋಟುಲ ಜೀವನದ ಸ್ವಾರಸ್ಯ ಹೇಗೆ ತಿಳಿಯಬೇಕು? ಮುರಿಯರು ತಮ್ಮ ಇಕ್ಕಟ್ಟಾದ ಮನೆಗಳಲ್ಲಿ ಮಲಗಲು ಸ್ಥಳವಿಲ್ಲವೆಂದು ಮಕ್ಕಳನ್ನು ಘೋಟುಲಕ್ಕೆ ಕಳಿಸು ತ್ತಾರೆಯೇ ಹೊರತು ಅಕ್ಷರಾಭ್ಯಾಸ ಕಲಿಯಲಿಕ್ಕೆ ಅಲ್ಲ. ಗುರುಗಳಿಲ್ಲದ ಈ ಸಂಸ್ಥೆಯಲ್ಲಿ ಹಿರಿಯರೇ ಕಿರಿಯರ ಶಿಕ್ಷಕರಾಗುತ್ತಾರೆ. ಉಳಿದ ವಿದ್ಯಾಕೇಂದ್ರ ಗಳು ದಿನದಲ್ಲಿ ನಡೆದರೆ, ಇಲ್ಲಿಯದು ಕತ್ತಲಾದನಂತರ ಪ್ರಾರಂಭವಾಗುತ್ತದೆ. ದಿನವಿಡೀ ಅವರು ಕಾಡಿನಲ್ಲಿಯೋ ಹೊಲದಲ್ಲಿಯೋ ದುಡಿದು, ಇಲ್ಲವೇ ಪಾಲಕರಿಗೆ ಸಹಾಯಮಾಡಿ, ಸಂಜೆಯೂಟ ಮುಗಿಸಿ ಇಲ್ಲಿಗೆ ಬರುತ್ತಾರೆ" ಎಂದು ಮುಂದೆ ಏನೋ ಹೇಳಲು ಹವಣಿಸಿ ಸುಮ್ಮನಾದ.

"ಮನೆಯಲ್ಲಿ ಸ್ಥಳದ ಅಭಾವದಿಂದಾಗಿ ಇಲ್ಲಿ ಬಂದು ಮಲಗಿದರೆ ಇದೊಂದು ವಿದ್ಯಾಕೇಂದ್ರ ಹೇಗಾಗುತ್ತದೆ? ಎಂದು ಸಂಶಯ ವ್ಯಕ್ತಪಡಿಸಿದಾಗ, "ಘೋಟುಲವನ್ನು ಸರಿಯಾಗಿ ಅರಿತುಕೊಳ್ಳಬೇಕಾದರೆ ಸೂರ್ಯಾಸ್ತದ ನಂತರವೇ ಆಗಬೇಕು. ಹುಡುಗರಂತೆ, ಹುಡುಗಿಯರೂ ಇಲ್ಲಿಗೆ ಬರುತ್ತಾರೆ. ಅವರೆಲ್ಲ ಬರುವಾಗ ತಮ್ಮ ವಾದ್ಯಗಳೊಂದಿಗೆ ಬರುತ್ತಾರೆ. ಲಿಂಗಭೇದವಿಲ್ಲದೇ ಬೆಂಕಿಯ ಸುತ್ತಲೂ ಕುಳಿತು ಮಾತುಕತೆಯಾಡುತ್ತಾರೆ, ಕತೆ ಹೇಳುತ್ತಾರೆ. ಒಂದೇ ಬೆಂಕಿ ಸಾಲದಿದ್ದರೆ ಇನ್ನೊಂದನ್ನು ಒಟ್ಟುತ್ತಾರೆ. ಕೆಲವರು ಹಾಡಿದರೆ, ಕೆಲವರು ಕೊಳಲು ನುಡಿಸುತ್ತಾರೆ. ಚಿಕ್ಕಮಕ್ಕಳು ಕತೆ ಕೇಳುವದು, ಒಗಟ ಬಿಡಿಸುವದು ಮಾಡುತ್ತಾರೆ. ತುಸು ದೊಡ್ಡ ಹುಡುಗಿಯರು ತಂಡ ಕಟ್ಟಿಕೊಂಡು ನಗೆಚಾಟಿಕೆ ಮಾಡುತ್ತ, ಹಾಡುತ್ತ ಬಂದೊಡನೆ ಚಟುವಟಿಕೆಗಳು ಹೆಚ್ಚುತ್ತವೆ. ಕಿರಿಯರು, ಹಿರಿಯ ಹುಡುಗರಿಗೆ ಬೀಡಿ, ತಂಬಾಕು ಹಂಚುವದು, ಮಲಗುವ ಸ್ಥಳ ಗುಡಿಸುವದು ಮಾಡುತ್ತಾರೆ. ಕೆಲವರು ಕುಣಿಯಲೂಬಹುದು. ದಣಿದವರು ತಮ್ಮ ಗೆಳತಿಯಿಂದ ಬಾಚಿಸಿಕೊಳ್ಳುವದು, ಹೇನು ಹೆಕ್ಕಿಸಿಕೊಳ್ಳುವದು ಮಾಡುತ್ತಾರೆ. ಇಲ್ಲವೇ ಹುಡುಗರು, ಮೈಕೈಗೆ ಎಣ್ಣೆ ತಿಕ್ಕಿಸಿಕೊಳ್ಳುತ್ತಾರೆ. ಮಲಗುವ ಹೊತ್ತಿಗೆ ಕಿರಿಯರು ಹಿರಿಯರಿಗೆ ನಮಸ್ಕಾರ ಹೇಳುವದು. ನಂತರ ಜೊತೆ ಜೊತೆಯಾಗಿ ಒಂದೇ ಚಾಪೆಯ ಮೇಲೆ ಮಲಗುವದು ವಾಡಿಕೆ ಎಂದು ಮಾಡಿಗೆ ಸಾಲುಸಾಲಾಗಿ ಸಿಕ್ಕಿಸಿಟ್ಟ ಸುಮಾರು ಮೂವತ್ತು ಚಾಪೆಗಳನ್ನು ತೋರಿಸಿದ.

ಅವರ ಸಹಕಾರ, ಸಮಾನತೆ, ಸೌಹಾರ್ದತೆಗಳ ಸಾಂಘಿಕಜೀವನ ಪ್ರಶಂಸನೀಯವಾದದ್ದೇ. ಆದರೆ ಪ್ರಾಯಕ್ಕೆ ಬಂದವರು ಇಲ್ಲಿ ಮಲಗುವದು ಸುರಕ್ಷಿತತೆಯ ದೃಷ್ಟಿಯಿಂದ ಅಷ್ಟೊಂದು ಸರಿಯೆನಿಸುವದಿಲ್ಲ ಎಂಬ ಸಂಶಯ ವ್ಯಕ್ತಪಡಿಸಿದಾಗ, ಸುಖದೇವನು ಕಣ್ಣುಮಿಟುಕಿಸಿ, ಹುರುಪುಗೊಂಡು ಬಾಬು, ಈ ಘೋಟುಲಗಳ ನಿಜವಾದ ಅರ್ಥವೇ ತಮಗೆ ತಿಳಿದಿಲ್ಲ. ವಿವಾಹ ಜೀವನದ ಹೆಚ್ಚಿನ ತರಬೇತಿಯನ್ನು ಅವರು ಇಲ್ಲಿಯೇ ಪಡೆಯುತ್ತಾರೆ. ಘೋಟುಲದ ಅಧಿಕಾರಿಗಳೇ ಯಾವ ವಿದ್ಯಾರ್ಥಿನಿ ಯಾವ ವಿದ್ಯಾರ್ಥಿಗೆ ಆ ರಾತ್ರಿ ತಲೆಬಾಚಬೇಕು, ಎಣ್ಣೆ ಹಚ್ಚಬೇಕು ಎಂದು ನಿರ್ಧರಿಸುತ್ತಾರೆ. ಗಂಡು-ಹೆಣ್ಣು ಜೊತೆಯಾಗಿ ಒಂದೇ ಚಾಪೆಯ ಮೇಲೆ ವಿಶ್ರಾಂತಿಸಬೇಕೆಂಬ

ಕಡ್ಡಾಯವೂ ಇದೆ. ಜೋಡಿಗಳನ್ನು ಘೋಟುಲದ ಹಿರಿಯರೇ ಗೊತ್ತು ಪಡಿಸುವರು. ಸಂಗಾತಿಗಳನ್ನು ಅದಲು ಬದಲು ಮಾಡುತ್ತಿರುವದರಿಂದ ಯಾವ ಜೋಡಿಯೂ ಸ್ಥಾಯಿಯಾಗಿ ಇರುವಂತಿಲ್ಲ. ಬಾಯಲ್ಲಿದ್ದ ಕಡುಬು ನುಂಗದೇ ಇರಲು ಅಸಾಧ್ಯವಾದಂತೆ, ಜೊತೆಯಾಗಿ ಪವಡಿಸಿದವಳು ಪ್ರೀತಿಸದೇ ಇರಲು ಸಾಧ್ಯವೇ ಬಾಬು" ಎಂದು ಅವರ ಸಾಂಘಿಕ ಪ್ರೇಮಜೀವನದ ಕತೆ ಬಿತ್ತರಿಸಿದ.

ಅಮೇರಿಕನ್ನರನ್ನೂ ನಾಚಿಸುವಂತಹ ಈ ಸ್ತ್ರೀಪುರುಷರ ಸಮಾನತೆಯ ಜೀವನ ಕೇಳಿ ಮೈನವಿರೆದ್ದಿತು. ಅತಿ ಹಿಂದುಳಿದವರೆಂದು ಪರಿಗಣಿಸಲ್ಪಡುವ ಈ ಆದಿವಾಸಿಗಳು ಅನಾದಿಕಾಲದಿಂದಲೂ ಅತಿ ಮುಂದುವರಿದ ದೇಶಗಳಲ್ಲಿ ಮಾತ್ರ ಕಂಡುಬರುವ ಸಾಮಾಜಿಕ ಸಮಾನತೆ ಹೇಗೆ ಸಾಧಿಸಿದ್ದಾರೆ! ಇಂತಹ ಸಹಜೀವನ ಸಾಧ್ಯವಾದ ಅಮೇರಿಕೆಯಲ್ಲಿ ಹೆಚ್ಚಿನ ತಲೆನೋವು ಕೊಡುವ ಅವಿವಾಹಿತ ತಾಯಂದಿರು, ಅನಾಥ ಬಾಲಕರ ಸಮಸ್ಯೆಗಳು ನೆನಪಾದವು. ಆ ಬಗ್ಗೆ ಇವರಲ್ಲಿ ಇರುವ ಪದ್ಧತಿಯ ಬಗ್ಗೆ ವಿಚಾರಿಸಿದೆ. "ಘೋಟುಲದಲ್ಲಿ ೮ ವರ್ಷದಿಂದ ೧೮ ವರ್ಷಗಳ ವರೆಗಿನ ಎಲ್ಲ ಪ್ರಾಯದವರೂ ಇರುತ್ತಾರೆ. ಹರೆಯದವರೇ ಜೋಡಿಯಾಗಿರುವದು ವಿರಳ. ಅಲ್ಲದೇ ನಿರ್ದಿಷ್ಟ ದಿನಗಳಲ್ಲಿ ಮಾತ್ರ ಪ್ರೇಮದಾಟದಲ್ಲಿ ತೊಡಗಬಹುದು. ಉಳಿದ ದಿನಗಳಲ್ಲಿ ನಿಯಮ ಉಲ್ಲಂಘಿಸಿದವರಿಗೆ ಕಠಿಣ ಶಿಕ್ಷೆಯಿದೆ. ಗರ್ಭಧಾರಣೆ ಅಪರೂಪ. ಎಂದಾದರೊಮ್ಮೆ ಇಂಥ ಘಟನೆ ನಡೆದಾಗ, ಪ್ರೇಮಿಗಳೀರ್ವರ ವಿವಾಹವನ್ನು ನೆರವೇರಿಸುವದರಿಂದ ಸಮಸ್ಯೆ ಬಗೆಹರಿಯುತ್ತದೆ. ನಿಜವಾದ ತಂದೆ ಯಾರೆಂದು ನಿರ್ಧರಿಸುವದು ತೊಂದರೆಯದಾದಾಗ, ಕನ್ಯೆ ಹೆಸರಿಸಿದವರಿಗೆ, ಇಲ್ಲವೇ ಆಕೆ ಒಪ್ಪಿಕೊಂಡ ವರನೊಡನೆ ಮದುವೆ ಮಾಡಿಬಿಡುವದರಿಂದ ಬರಲಿರುವ ಮಗು ಅವನದಾಗುತ್ತದೆ. ಇಂತಹ ಸಮಸ್ಯೆಗಳಲ್ಲಿ ಘೋಟುಲ ಅಧಿಕಾರಿಗಳ ನಿರ್ಣಯವೇ ಅಂತಿಮವಾದದ್ದು. ಇಂಥದರಲ್ಲಿ ಹಳ್ಳಿಯ ಹಿರಿಯರು ಕೈ ಹಾಕುವದಿಲ್ಲ. ಅಲ್ಲದೇ ಘೋಟುಲದ ಸುದ್ದಿಯನ್ನು ಹೊರಗಡೆಗೆ ಸಾರಿದವರಿಗೆ ಹೆಚ್ಚಿನ ಶಿಕ್ಷೆಯಿದೆ. ಅಂಥವರು ಹಳ್ಳಿಗೆ ಭೋಜನಕೂಟವೇರ್ಪಡಿಸಬೇಕು ಇಲ್ಲವೇ ಸೆರೆ ಹಂಚಬೇಕು" ಎಂದು ಘೋಟುಲದ ಹಿರಿಯ ಸುಕುಪ್ ಹೇಳಿದ.

"ಘೋಟುಲದ ಸದಸ್ಯರು ಸಾಮಾಜಿಕ ಚಟುವಟಿಕೆಗಳಲ್ಲಿ ತೊಡಗಿರು

ತ್ತಾರೆ. ಗೃಹಕೃತ್ಯಗಳಲ್ಲಿ ತಂದೆ-ತಾಯಿಗಳಿಗೆ ನೆರವಾಗುತ್ತಾರೆ. ಬೆಳೆಕೊಯ್ಯು ವಾಗ ಸಾಮೂಹಿಕವಾಗಿ ಊರವರಿಗೆ ಸಹಾಯ ಮಾಡುತ್ತಾರೆ. ಮದುವೆ, ಸುಗ್ಗಿಗಳಲ್ಲಿ ಒಂದು ಹಳ್ಳಿಯಿಂದ ಇನ್ನೊಂದಕ್ಕೆ ಹೋಗಿ ವಾದ್ಯನುಡಿಸಿ, ಹಾಡಿ, ನರ್ತಿಸಿ ವಿನೋದಾವಳಿ ಏರ್ಪಡಿಸಿ, ಊರವರು ಪೂರೈಸಿದ ಊಟ-ಸೆರೆ ಯನ್ನು ಸ್ವೀಕರಿಸಿ ಹಿಂತಿರುಗುತ್ತಾರೆ. ಅವಿವಾಹಿತರಿಗೆ ಇಷ್ಟೊಂದು ಸ್ವಾತಂತ್ರ್ಯ ವಿದ್ದರೂ, ಒಮ್ಮೆ ಮದುವೆಯಾದನಂತರ, ಪತಿ-ಪತ್ನಿಯರು ಯಾವದೇ ವಿವಾಹಬಾಹ್ಯ ಸಂಬಂಧವನ್ನು ಇರಿಸಿಕೊಳ್ಳಕೂಡದು. ಘೋಟುಲದಲ್ಲಿ ರಾತ್ರಿ ಮಲಗಬಾರದು, ಎಂಬ ಕಡ್ಡಾಯವಿದೆ. ಇದನ್ನು ಮುರಿದವರಿಗೆ ಕಠಿಣ ಶಿಕ್ಷೆ ವಿಧಿಸಲಾಗುತ್ತದೆ." ಎಂದು ಸುಖದೇವನು ವಿವರಿಸಿದಾಗ ಎಂತಹ ಕಟ್ಟು ನಿಟ್ಟಿನ ಜನಾಂಗ ಎನಿಸಿತು.

ಒಳಗೆ ಬರುತ್ತಿದ್ದಾಗ ಕೇವಲ ಕಟ್ಟಡ ಎಂದು ಭಾವಿಸಿದ ಘೋಟುಲ್, ಅದನ್ನು ನೋಡಿ ಹಿಂತಿರುಗುತ್ತಿದ್ದಾಗ ಅದೊಂದು ಜೀವನದ ಗರಡಿಮನೆ ಅನಿಸಿತು ಬೆಂಕಿ ಹಿತವಾಗಿ ಉರಿಯುತ್ತಿದ್ದಾಗ, ಸುತ್ತಲೂ ಕಿರಿಯರು ನಗೆ ಮಾತಿನಲ್ಲಿ ತೇಲಿದಂತೆ, ನೃತ್ಯಮೇಳಗಳು ಅಂಗಳದಲ್ಲಿ ಕುಣಿಯುತ್ತಿದ್ದಂತೆ, ಪ್ರೇಮಿಗಳು ಎಣ್ಣೆ ತಿಕ್ಕಿಸಿಕೊಂಡು, ಪರಸ್ಪರ ಬಾಚಿದಂತೆ ಒಬ್ಬರನ್ನೊಬ್ಬರು ಕೀಟಲೆಮಾಡಿ ಕೊನೆಗೆ ಜೋಡಿಜೋಡಿಯಾಗಿ ಮಲಗಿ ಜಗತ್ತನ್ನು ಮರೆ ಯುವ ಕಾಲ್ಪನಿಕ ಚಿತ್ರ ತುಂಬ ಸುಂದರವಾಗಿ ಕಂಡಿತು. ಅವಿವಾಹಿತನಾಗಿದ್ದರೆ, ಚಿಕ್ಕವನಾಗಿದ್ದರೆ ಈ ಸುಖವಾದ ಚಟುವಟಿಕೆಗಳಲ್ಲಿ ಭಾಗವಹಿಸಬಹುದಾಗಿತ್ತಲ್ಲ! ಎಂದು ಮರುಗುತ್ತ ಹಿಂತಿರುಗಿದೆ-ಸುಖದೇವನೊಂದಿಗೆ.

ನಾಟುಗಳ ಬೇಲಿ - 61 ರ?9
ಬೀಡಿ ಹೆತ್ತಿ ಸಟುಕೆ... - 69.

# ೨೧. ವನಸಿರಿ

"ನಮಸ್ತೆ ಬಾಬೂಜಿ" ಎಂದು ಸರದಾರಜಿಯೊಬ್ಬನು ಜಿಪರಿಯಾದ ನಡುಬೀದಿಯಲ್ಲಿ ಮಾತನಾಡಿಸಿದಾಗ, ಮಳೆ ಬರುವಂತೆ ಇದ್ದುದರಿಂದ ವೇಗವಾಗಿ ಹೊಟೆಲಿನತ್ತ ಹೊರಟ ಕಾಲುಗಳಿಗೆ ಬ್ರೇಕ್ ಹಾಕಿ, ನಿಲ್ಲಲೇಬೇಕಾಯಿತು. ಕುಶಲ್ ಮಂಗಲ್(ಯೋಗಕ್ಷೇಮ)ವಿಚಾರಿಸಿ, ಊರಿಂದ ಯಾವಾಗ ಬರೋಣವಾಯಿತೆಂದು ಕೇಳಿದ. ನಂತರ, "ನಿನ್ನೆಯೇ ತಮ್ಮನ್ನು ಕಂಡರೂ ಮಾತನಾಡಿಸಲಾಗಲಿಲ್ಲ. ತಮ್ಮಲ್ಲಿ ವ್ಯಾಪಾರ ಹೇಗಿದೆ? ಸಾಲ, ಸಾಗವಾನಿಗಳ ಬೆಲೆ ಎಷ್ಟಾಗಿದೆ?" ಎಂದು ವಿಚಾರಿಸಿದ. "ಏನೊ ತಾವು ತಪ್ಪು ತಿಳಿದುಕೊಂಡಿರಬೇಕು ನನಗೆ ತಮ್ಮ ಪರಿಚಯವಿದ್ದಂತಿಲ್ಲ" ಎಂದು ಹೇಳಿದೆ. "ತಾವು ಭೋಪಾಲದ ಖ್ಯಾತ ಕಟ್ಟಿಗೆಯ ವ್ಯಾಪಾರಿಗಳಲ್ಲವೇ? ಡೊಂಗರಗಾಂವದಲ್ಲಿ ನಾಟುಗಳ ಲಿಲಾವಿನಲ್ಲಿ ನಾವೆಲ್ಲ ಭಾಗವಹಿಸಿರಲಿಲ್ಲವೇ?" ಎಂದು ತನ್ನ ಪರಿಚಯದ ಜ್ಞಾಪಕ ಮಾಡಿಕೊಡಲು ಯತ್ನಿಸಿದ. ಕಾಡಿನ ಬಗ್ಗೆ ನನಗೆ ವಿಶೇಷ ಪ್ರೀತಿಯಿದ್ದರೂ ಅದರ ವ್ಯಾಪಾರದಲ್ಲಿ ಆಸಕ್ತಿಯಿಲ್ಲವೆಂದು ಪರಿಪರಿಯಾಗಿ ಹೇಳಿದರೂ ಅವನಿಗೆ ವಿಶ್ವಾಸ ಮೂಡಿದಂತೆ ಅನಿಸಲಿಲ್ಲ. ನಾರಾಯಣಪುರದ ಮಾರಿಯರ ಮೇಲಾ ನೋಡಲು ಹೋದಾಗ ಕೂಡ ಇದೇ ಅನುಭವವಾಯಿತು. ಅದೇ ಸಮಯಕ್ಕೆ ಅಲ್ಲಿ ದೊಡ್ಡ ನಾಟುಗಳ ಲಿಲಾವು ಇತ್ತು. ಕೋಮಲ ವಿಲಾಸವ ಹೊಟೇಲ ಮಾಲಕನು, 'ಅಷ್ಟೊಂದು ದೂರದಿಂದ ಬಂದಿದ್ದೀರಿ. ಒಂದು ದಿನ ಹೆಚ್ಚು ನಿಂತು ಮೇಲಾ ನೋಡಿಕೊಂಡು ಹೋಗಿ ಎಂದಾಗ, "ನಾನು ಬಂದದ್ದೇ ಮೇಲಾ ನೋಡಲಿಕ್ಕೆ. ಕೊರಡುಗಳ ಲಿಲಾವಿಗೂ ನನಗೂ ಏನೂ ಸಂಬಂಧವಿಲ್ಲ" ಎಂದಾಗ ಕೇವಲ ಮೇಲಾ ನೋಡಲಿಕ್ಕೆ ಬಂದಿದ್ದು. ಅವನ ವ್ಯಾಪಾರಿ ಬುದ್ಧಿಗೆ ವಿಚಿತ್ರವೆನಿಸಿರಬೇಕು. "ಹೋಗಲಿ, ಮೇಲಾ ನೋಡಲು ಬಂದಿದ್ದೀರಿ, ಇಲ್ಲಿಯ ಲಿಲಾವು ಹೇಗಿರುತ್ತದೆಂದು ನೋಡಿ ಆನಂದ ಪಡಿರಿ" ಎಂದ. ನನಗೂ ಅವನ ಸೂಚನೆ ಸರಿ ಎನಿಸಿತು. ಮೊದಲೇ ಬಂದಿದ್ದರಿಂದ, ನಾರಾಯಣಪುರದ ಎರಡೇ ಜೋಲಿಗಳಿದ್ದ ಒಂದು ಲಾಜಿನಲ್ಲಿ ಮಲಗಲು

ಸ್ಥಳ ಸಿಗುವಂತಾಯಿತು. ಸಂಜೆಯಾದಂತೆ ಲಿಲಾವಿಗಾಗಿ ದೂರದೂರದ ಊರುಗಳಿಂದ, ನೆರೆರಾಜ್ಯಗಳಿಂದ ಕಲಕತ್ತೆಯಿಂದ ಕೂಡ ನಾಟಿನ ವ್ಯಾಪಾರಿಗಳು ಬಂದು ಸೇರಲಾರಂಭಿಸಿದ್ದರಿಂದ, ಎಲ್ಲಿ ಇಳಿದುಕೊಳ್ಳುವದೆಂದು ಬಂದವರಿಗೆಲ್ಲ ಸಮಸ್ಯೆಯಾಯಿತು. ಹಲವರು ಪರಿಚಯದವರಲ್ಲಿ, ಆಪ್ತರಲ್ಲಿ, ಕೆಲವರು ಅಧಿಕಾರಿಗಳಲ್ಲಿ ರಾತ್ರೆಯನ್ನು ಕಳೆಯುವದೆಂದು ನಿರ್ಧರಿಸಿದರು. ಇಡಿರಾತ್ರಿ ಕಾರುಗಳಲ್ಲಿ ಸಾಹುಕಾರರು ಬರುತ್ತಲೇ ಇದ್ದರು. ಮುಂಜಾನೆ ಎದ್ದಾಗ ಕಾಡಿನ ಆ ಚಿಕ್ಕ ಊರಿನಲ್ಲಿ ಲೆಕ್ಕವಿಲ್ಲದಷ್ಟು ಕಾರುಗಳನ್ನು ಕಂಡು ಕನಸಿನ ರಾಜ್ಯದಲ್ಲಿ ಇದ್ದೇನೆಯೋ ಎಂದು ಭ್ರಮೆಯಾಯಿತು. ಶೇಠಜಿಯವರೆಲ್ಲ ನಾಶ್ತಾಕ್ಕೆ ರಸಗುಲ್ಲಾ ಗುಲಾಬಜಾಮುನ್, ಇಡ್ಲಿ, ದೋಸಾಗಳನ್ನು ಹುಡುಕುತ್ತಿರುವದನ್ನು ನೋಡಿ ಮೋಜೆನಿಸಿತು. "ಈ ಸಾಹುಕಾರರನ್ನು ನಂಬಿ, ಮೊದಲೇ ತಿಂಡಿಗಳನ್ನು ಮಾಡಿಟ್ಟರೆ, ನೇಣು ಹಾಕಿಕೊಳ್ಳಬೇಕಾದೀತು" ಎಂದು ಅನುಭವಿ ವ್ಯಾಪಾರಿಯೊಬ್ಬ ಗೊಣಗಿದ.

ಮೇಲಾ ನಡೆಯುವ ಹತ್ತಿರದ ಭವ್ಯ ಮೈದಾನಕ್ಕೆ ಬೇಲಿಹಾಕಿ, ಸಾಗವಾನಿ, ಸಾಲ, ಇನ್ನಿತರ ಕಾಂಡಗಳ ವಿವಿಧ ಗುಂಪುಗಳನ್ನು ಮಾಡಿ ಇಟ್ಟಿದ್ದರು. ಇವೆಲ್ಲವುಗಳಿಂದ ಸರಕಾರದ ಬೊಕ್ಕಸಕ್ಕೆ ವರ್ಷಕ್ಕೆ ಲಕ್ಷಾವಧಿ ರೂಪಾಯಿ ಬರುವದಾದರೂ, ಇವುಗಳ ಉತ್ಪಾದನೆಗೆ ಭೂಮಾತೆ ನೂರುವರ್ಷ ಸತತವಾಗಿ ದುಡಿಯಬೇಕಾಯಿತಲ್ಲ ಅನಿಸಿತು. ಮರುಗಳಿಗೆಯಲ್ಲಿ ಇವೆಲ್ಲ ಅಕಸ್ಮಾತ್ ಅಗ್ನಿಗೆ ಆಹುತಿಯಾದರೆ, ಅರಣ್ಯಇಲಾಖೆಯವರ ಹತ್ತಿರ ಯಾವ ರಕ್ಷಣಾ ಸಲಕರಣೆಗಳೂ ಇಲ್ಲ, ಎಂದು ನೋವಾಯಿತು. ಇಂತಹ ಕೆಟ್ಟ ವಿಚಾರಗಳಿಗೆ ಆಸ್ಪದ ಕೊಡಬಾರದು ಎಂದು ಯತ್ನಿಸಿದಷ್ಟೂ ಆ ವಿಚಾರಗಳು ತಿರುತಿರುಗಿ ಪೀಡಿಸಿದವು. ಬಹುಶಃ ಭೀಮುಪೆಟಕಾದಲ್ಲಿ ನೋಡಿದ ಕಾಡ್ಗಿಚ್ಚು ಇದಕ್ಕೆ ಕಾರಣವಾಗಿರಬಹುದು.

ವ್ಯಾಪಾರಿಗಳೆಲ್ಲ ಯಾವ ಯಾವ ನಾಟುಗಳ ಲಿಲಾವು ಆಗಲಿದೆ, ತಾವು ಯಾವುದನ್ನು ಕೊಳ್ಳಬೇಕು, ಎಂದು ಕೈಪಿಡಿ ನೋಡಿ ನೋಡಿ ಅಭ್ಯಸಿಸ ತೊಡಗಿದರು. ಆಟದ ಬಯಲಿನಂತೆ ಎಲ್ಲ ಕಡೆಗೆ ಸುಣ್ಣದ ಗೀಟಗಳನ್ನು ಎಳೆದಿದ್ದರು. ನಾಟಿನ ಪ್ರತಿರಾಶಿಗೂ ನಂಬರನ್ನು ಕೊಡಲಾಗಿತ್ತು. ಬಿಸಿಲಿನ ತಾಪದಿಂದ, ಇಲ್ಲವೆ ನಾಟುಗಳ ಬೆಲೆ ಕೇಳಿ ಮೂರ್ಛೆ ಹೋದವರಿಗೆ ಉಪಯೋಗ

ಜೀಳಲಿಂದು ಮಡಕೆಗಳಲ್ಲಿ ಕುಡಿಯುವ ನೀರನ್ನು ಅಲ್ಲಲ್ಲಿ ಇಟ್ಟಿದ್ದರು. ಲಿಲಾವಿಗೆ ದೊಡ್ಡ ಸಾಹೇಬರು ಬಂದದ್ದರಿಂದ ಅರಣ್ಯದ ಅಧಿಕಾರಿಗಳೆಲ್ಲ ಹೆಚ್ಚಿನ ಚಟುವಟಿಕೆಯಿಂದ ಓಡಾಡುತ್ತಿದ್ದರು. ಪೇದೆಗಳಂತೂ ಕೆಂಪುಬಟ್ಟೆ ಧರಿಸಿ, ಕೆಂಪು ಪತಾಕೆ ಹಿಡಿದು ಲಗುಬಗೆಯಿಂದ ನಡೆಯುತ್ತಿದ್ದರು. ಗಡಸುಧ್ವನಿಯ ಪೇದೆಯೊಬ್ಬ ಲಿಲಾವು ಆಗಲಿರುವ ರಾಶಿಯ ನಂಬರನ್ನು ಗಟ್ಟಿಯಾಗಿ ಹೇಳಿದಾಗ ಕೊಳ್ಳುವವರೆಲ್ಲ ಅಲ್ಲಿ ಧಾವಿಸಿದರು. ಅಧಿಕಾರಿ ಸರಕಾರಿ ಬೆಲೆ ಹೇಳಿದ ನಂತರ ಸಾಹುಕಾರರು ತಮಗೆ ಸರಿತೋಚಿದ ಬೆಲೆ ಏರಿಸುತ್ತಿದ್ದರು. ಒಂದೊಂದು ನಾಟಿಗೆ ನಾಲ್ಕು-ಐದು ಸಾವಿರ ರೂಪಾಯಿಗಳ ಬೆಲೆ ಇರುವದರಿಂದ ನೂರು ಗಟ್ಟಲೆಗಳಲ್ಲೆ ಬೆಲೆ ಏರಿಸುತ್ತಿದ್ದರು. ಒಮ್ಮೊಮ್ಮೆ ತುರುಸಿನ ಸ್ಪರ್ಧೆಯಾಗಿ ಬೆಲೆ ವಿಪರೀತ ಏರಿಬಿಡುತ್ತಿತ್ತು. ಎರಡೇ ತೇಗಿನ ನಾಟುಗಳಿಗೆ ಹದಿಮೂರು ಸಾವಿರ ರೂಪಾಯಿ ಏರಿಸಿದ್ದೂ ಉಂಟು. ಲಿಲಾವು ಮಾಡುವವರಿಗಾಗಲೀ, ಕೊಳ್ಳುವವರಿಗಾಗಲಿ ಹಣಕ್ಕೆ ಮಹತ್ವವಿದ್ದಂತೆ ಕಾಣಲಿಲ್ಲ. ಹೀಗಾಗಿ ಬಲು ಬೇಗ ಒಂದು, ಎರಡು, ಮೂರು ಸವಾಲ ಎಂದುಬಿಡುತ್ತಿದ್ದರು. ನ್ಯಾಯಾಧೀಶನಂತೆ ಉಳಿಯನ್ನು ಸ್ಟೂಲಿಗೆ ಅಪ್ಪಳಿಸಿದಾಗ, ಆ ಲಿಲಾವು ಮುಗಿಯಿತು ಎಂದು ತಿಳಿಯಲಾಗುತ್ತದೆ. ಆ ಕೂಡಲೇ ಪೇದೆಗಳು, ನಾಟಿನ ಸಮೂಹಕ್ಕೆ ಕಾವಿ ಬಣ್ಣದ ಪಟ್ಟೆ ಎಳೆದು, ಅವು ಮಾರಾಟವಾಗಿ ಹೋಗಿವೆ ಎಂದು ತಿಳಿಯುವಂತೆ ಎಚ್ಚರಿಕೆ ವಹಿಸುವರು.

ತೇಗು, ನಂದಿ, ಸಾಲ ಮೊದಲಾದ ಇಮಾರತಿ ನಾಟುಗಳನ್ನು ಬೇರೆ ಬೇರೆಯಾಗಿ ಗುಂಪುಮಾಡಿನಂತೆ, ಹಳೆಯುವು, ಹಸಿಯುವು, ಬಿರುಕು ಬಿಟ್ಟವು, ಅಂಕುಡೊಂಕು ಇರುವವು, ಅತಿ ಸರಳ, ಅತಿ ದೊಡ್ಡ ಹೀಗೆ ವಿಂಗಡಿಸಲಾಗಿದ್ದರಿಂದ ಕೊಳ್ಳುವವರು ತಮಗೆ ಬೇಕಾದದ್ದನ್ನೇ ಆರಿಸಲು ಸುಲಭವಾಗಿತ್ತು. ಲಿಲಾವು ಮುಂಜಾನೆ ಎಂಟರಿಂದ ಸಂಜೆ ಆರರವರೆಗೆ ಎಂದು ಸಾರಿದರೂ ಇನ್ನೂ ಬಹಳಷ್ಟು ಹಾಗೇ ಉಳಿದವು. ತಮ್ಮಿಂದ ಜೀರ್ಣವಾಗುವಷ್ಟು ಕೊರಡುಗಳನ್ನು ಕೊಂಡವರು ಊರಿಗೆ ಹೊರಟೇಬಿಟ್ಟರು. ಪ್ರತಿಸ್ಪರ್ಧೆಯಿಲ್ಲದೇ ಕಡಿಮೆ ಬೆಲೆಯಲ್ಲಿ ಗಿಟ್ಟಿಸಬಹುದೆಂದು ಲೆಕ್ಕಾಚಾರ ಹಾಕಿದ ಮಾರವಾಡಿಗಳು, ಲಿಲಾವು ಮರುದಿನ ಮುಂದೂಡದೇ ಎಷ್ಟೇ ರಾತ್ರಿಯಾದರೂ ಮುಗಿಸಿಯೇ ಬಿಡುವಂತೆ ಅಧಿಕಾರಿಗಳ ಮನಸ್ಸು ಒಲಿಸಿದರು.

ಮಧ್ಯಪ್ರದೇಶದಲ್ಲಿ, ಇಂಥ ಲಿಲಾವುಗಳು ಒಂದಿಲ್ಲೊಂದು ಕಡೆ ಸದಾ ಕಾಲವೂ ನಡೆದಿರುತ್ತದೆ. ಹೊರರಾಜ್ಯದವರಿಗೇ ಇದರ ಲಾಭವಾಗುವದು ಹೆಚ್ಚು. ಅನಧಿಕೃತವಾಗಿ ಕಡಿದು ತಂದ ವಿಪುಲವಾದ ಕಟ್ಟಿಗೆ, ಪೇಟೆಯಲ್ಲಿ ಬರುವದರಿಂದ ಬೆಂಗಳೂರಿನಲ್ಲಿ ಎಂಬತ್ತು ರೂಪಾಯಿಗೆ ಮಾರಾಟವಾಗುವ ಉತ್ತಮ ಇಮಾರತಿ ಕಟ್ಟಿಗೆಯನ್ನು ಅಲ್ಲಿ ಸುಲಭವಾಗಿ ಇಪ್ಪತ್ತು ರೂಪಾಯಿಗೆ ಪಡೆಯಬಹುದು. ಅಂತೆಯೇ ಖುರ್ಚಿ, ಟೇಬಲ್, ಚಾಪಾಯಿಗಳನ್ನೆಲ್ಲ ತೇಗಿನಿಂದ ಮಾಡಿದರೂ, ದೇವದಾರುವಿನಿಂದ ಮಾಡಿದ ಬೆಲೆಗೆ ಮಾರುತ್ತಾರೆ! ವಾರದ ಸಂತೆಯಲ್ಲಿ ಮಾರಾಟವಾಗುವ ಕಡೆಗೋಲು, ಮಣೆ, ಪುಸ್ತಕದ ಶೆಲ್ಫುಗಳು, ಬಟ್ಟೆ ತೂಗು ಹಾಕುವ ಹ್ಯಾಂಗರಗಳು, ಅಟಿಗೆಯ ಸಾಮಾನು ಕೂಡ ಸಾಗವಾನಿ ಕಟ್ಟಿಗೆಯಿಂದಲೇ ಮಾಡುತ್ತಾರೆ. ತೀರ ಕಚ್ಚಾ ಮನೆ ಕಟ್ಟು ವವರೂ ಉತ್ತಮ ಇಮಾರತಿ ಕಟ್ಟಿಗೆಯನ್ನೇ ಬಳಸುತ್ತಾರೆ. ಎಳೆಯ ಮರ ಕಡಿಯುವದರಿಂದ, ಹಸಿ ಕಟ್ಟಿಗೆ ಬಳಸುವದರಿಂದ ಅದಕ್ಕೆ ಅವಳ ಹಿಡಿಯ ಬಹುದು, ಬಿರುಕು ಬಿಡಬಹುದು, ಬಾಗು ಬರಬಹುದು. ಆದರೆ ಉತ್ತಮ ಕಟ್ಟಿಗೆಯನ್ನು ಈ ರೀತಿಯಿಂದ ದುರುಪಯೋಗಿಸುವದರಿಂದ ರಾಜ್ಯಕ್ಕೆ, ದೇಶಕ್ಕೆ ಆಗುವ ಹಾನಿಯನ್ನು ಯಾರೂ ಗಣನೆಗೆ ತಂದುಕೊಂಡಂತೆ ಇಲ್ಲ. ಅಮೇರಿಕೆಯಂತಹ ಅರಣ್ಯಸಂಪತ್ತಿನಲ್ಲಿ ಸಮೃದ್ಧವಿದ್ದ ರಾಷ್ಟ್ರವೂ ಪ್ರತಿ ಯೊಂದು ಮರವನ್ನು ಪೂರ್ವಯೋಜನೆಯಂತೆ ಬಳಸುತ್ತಿರುವಾಗ, ಕಾಡಿನ ಅಭಾವ ತೀವ್ರವಾದ ನಮ್ಮ ದೇಶದಲ್ಲಿ ಮುಂದಿನ ಯಾವ ಯೋಜನೆಯೂ ಇಲ್ಲದೇ ಇಂದಿನದಕ್ಕಾಗಿ ಇದ್ದ ಕಾಡು ಕಡಿಯುವದು ಶೋಚನೀಯ. ಒಂದು ಒಳ್ಳೆಯ ತೇಗಿನ ಮರ ಚೆನ್ನಾಗಿ ಬೆಳೆದು ಕೈಗೆ ಹತ್ತಬೇಕಾದರೆ, ನೂರು ವರ್ಷ ಗಳು ಬೇಕು. ಹೀಗಾಗಿ ಶಾಸ್ತ್ರೀಯ ರೀತಿಯಿಂದ ಕಾಡು ಬೆಳೆಸಿ ಮಿತವಾಗಿ ಬಳಸಲು ತುಂಬ ಮುಂದಾಲೋಚನೆ ಬೇಕು.

ಛಿಂದವಾಡದಂತಹ ಚಿಕ್ಕ ಊರಿನಲ್ಲಿಯೂ ಎಂಟು ಹತ್ತು ವಿದ್ಯುತ್‌ಚಾಲಿತ ಕಟ್ಟಿಗೆ ಕೊರೆಯುವ ಕಾರಖಾನೆಗಳಿವೆಯೆಂದರೆ, ರಾಜ್ಯದಲ್ಲಿ ಪ್ರತಿನಿತ್ಯ ಬಳಸುವ, ಸುಡುವ ಕಟ್ಟಿಗೆಯ ಪ್ರಮಾಣದ ಕಲ್ಪನೆ ಬರುವಂತಿದೆ. ಒಳ್ಳೆಯ ನಾಟು ಗಳನ್ನು ಕೊಯ್ದು, ಇಮಾರತಿ ಕಟ್ಟಿಗೆಯನ್ನು ಬೇರ್ಪಡಿಸಿ, ಉಳಿದ ಪರಾಟೆ, ಚೂರು, ಹಲಿಗೆಗಳನ್ನು ತೀರ ಕಡಿಮೆ ಬೆಲೆಗೆ ಮಾರಿಬಿಡುತ್ತಾರೆ. ಇವುಗಳಿಂದ

ಬಡಿಗರು ಸಣ್ಣಪುಟ್ಟ ಸಾಮಾನುಗಳನ್ನು ಮಾಡಿ, ಉಳಿದವುಗಳನ್ನು ಉರುವಲಿಗೆ ಬಳಸುತ್ತಾರೆ. ಕಟ್ಟಿಗೆಕೊರೆದ ಪುಡಿಯೂ ನೂರಾರು ಮನೆಗಳಲ್ಲಿ ಉರುವಲಿಗೆ ಉಪಯೋಗವಾಗುತ್ತದೆ. ಪ್ರತಿದಿನವೂ ಹತ್ತಾರು ಲಾರಿ ತುಂಬ ಬೆಲೆಬಾಳುವ ನಾಟುಗಳು ಬರುತ್ತವೆ. ಒಂದೂರಿನ ಕಾಷ್ಠಧ್ವಂಸದ ಕತೆಯೇ ಹೀಗಿರುವಾಗ, ರಾಜ್ಯದ ಕಾಡಿನಲ್ಲಿ ಇದ್ದ ಮರಗಳು ಎಷ್ಟು ವರ್ಷಗಳವರೆಗೆ ತಾನೆ ಈ ಪ್ರಮಾಣ ದಲ್ಲಿ ಕಟ್ಟಿಗೆ ಪೂರೈಸಿಯಾವು? ಎಂದು ಯಾರೂ ತಲೆ ಕೆರೆದುಕೊಳ್ಳುವ ಗೋಜಿಗೆ ಹೋಗುವದಿಲ್ಲ. ಕೃಷಿಯಂತೆ ವನಸಿರಿಯನ್ನೂ ನಟ್ಟು ಬೆಳೆಸುವ ಮುಂದಾ-ಲೋಚನೆ ಮಾಡುವದಿಲ್ಲ.

ಗಿರಿಜನರ ದೈನಂದಿನ ಜೀವನ ಕಾಡಿನೊಂದಿಗೆ ಹಾಸುಹೊಕ್ಕಾಗಿದೆ. ಅವರು, ಅನ್ನ-ಆಶ್ರಯ-ಆಚ್ಛಾದನಗಳಿಗೆ ಅರಣ್ಯದ ಶರಣು ಹೋಗುವದು ಸ್ವಾಭಾವಿಕ. ವನಸಿರಿ ವಿಪುಲವಾಗಿರುವ ಕಾಲದಲ್ಲಿ ಆದಿವಾಸಿಗಳು ಬೆಳೆಸಿ ಕೊಂಡಿರುವ ದುರಭ್ಯಾಸಗಳು ಇಂದಿಗೂ ಉಳಿದುಕೊಂಡಿವೆ. 'ಟಾಂಗಿ' (ಹರಿತ ವಾದ ಕೈಕೊಡಲಿ)ಯನ್ನು ಹೆಗಲಿಗೇರಿಸಿ ಕಾಡನ್ನು ಹೊಕ್ಕರೆಂದರೆ ಆನೆ ನೀರಿ ಗಿಳಿದಂತೆ. ಅವರಿಗೆ ಏನು ಮಾಡಿಯಾರು, ಏನು ಇಲ್ಲವೆಂದು ಹೇಳುವದು ಕಷ್ಟ. ತಮ್ಮ ಬಳಕೆಗಾಗಿ ಬೇಕಾದಾಗ, ಬೇಕಾದಷ್ಟು ಮರ ಕಡಿಯುವದು ತಮ್ಮ ಜನ್ಮಸಿದ್ಧ ಹಕ್ಕು ಎಂದು ದೃಢವಾಗಿ ನಂಬಿದ್ದಾರೆ. ತಮಾಷೆಗೆಂದೇ ಸಿಕ್ಕ ಮರ ಕೊಚ್ಚಿಹಾಕುವದರಲ್ಲಿ ಹಿಂದೆ ಸರಿಯುವದಿಲ್ಲ. ಒಂದೆರಡು ಕೊಡಲಿಯೇಟು ತಿಂದು ನಿಂತ ಮರಗಳು ಕಾಲಕ್ರಮದಲ್ಲಿ ಕೀಟಬಾಧೆಗೆ ತುತ್ತಾಗುವವು. ಇಲ್ಲವೇ ಮಳೆ-ಗಾಳಿಯ ಹೊಡೆತಕ್ಕೆ ಉರುಳಿ ಬೀಳುವವು. ಭವ್ಯವಾದ ಇಮಾರತಿ ಕಟ್ಟಿಗೆಯ ಮರದ ಮೇಲೆ ಜೇನ್ನೊಣಗಳು ಗೂಡು ಕಟ್ಟುತ್ತವೆ. ಜೇನುತುಪ್ಪದ ಹೆಸರು ಕೇಳಿದರೇ ಬಾಯಿ ನೀರೂರುವ ಆದಿವಾಸಿಗಳು ಅದನ್ನು ಕಂಡರೆ ಹಾಗೇ ಬಿಡುವದುಂಟೇ? ಆದರೆ ಈ ಜೇನುಗೂಡು ಸುಲಭವಾಗಿ ಕೈಗೆ ಎಟುಕದಿರುವದ ರಿಂದ, ಸಾವಿರಾರು ರೂಪಾಯಿ ಬೆಲೆಬಾಳುವ ಮರವನ್ನು ಒಂದೆರಡು ರೂಪಾಯಿಯ ಜೇನುತುಪ್ಪಕ್ಕಾಗಿ ಕಡಿದು ಉರುಳಿಸಿದ್ದೂ ಉಂಟು !

ವನಸಿರಿ ವಿಪುಲವಾಗಿರುವ ಬಸ್ತರದ ಆದಿವಾಸಿಗಳ ಮನೆಯಲ್ಲಿ ಬೆಂಕಿ ಸದಾಕಾಲವೂ ನಂದಾದೀಪದಂತೆ ಉರಿಯುತ್ತಿರುವದು ವಾಡಿಕೆ. ಬೆಂಗಳೂರಿನ ಬೆಲೆಯಂತೆ ಅವರು ಕಟ್ಟಿಗೆ ಕೊಂಡು ಉರಿಸುವದಿದ್ದರೆ, ಪ್ರತಿ ತಿಂಗಳೂ ಒಂದು

ಮನೆಗೆ ಸಾವಿರ ರೂಪಾಯಿಯ ಕಟ್ಟಿಗೆ ಬೇಕಾಗುತ್ತದೋ ಏನೋ ! ಸಾಲ್, ತೇಗಿನಂಥ ಮರಗಳನ್ನೂ ಅವರು ಯಾವ ಅಳುಕಿಲ್ಲದೇ ಉರಿಸುವದನ್ನು ನೋಡಿದಾಗ, ಅಯ್ಯೋ ! ಅನಿಸದೇ ಇದ್ದೀತೇ? ಅರಣ್ಯಖಾತೆಯವರು ಸಾಗವಾನಿ ಮರಗಳನ್ನು ಬೆಳೆಸಿದ ತಾವಿನಿಂದ ಕೂಡ, ಸಂಜೆಗತ್ತಲಿನಲ್ಲಿ ಅಲ್ಲೊಂದು, ಇಲ್ಲೊಂದು ಮರ ಕಡಿಯುವದರಲ್ಲಿ ಅವರಿಗೆ ಅಳುಕಿಲ್ಲ. ತನ್ನ ದನಕರುಗಳ ಸಂರಕ್ಷಣೆಗೆ, ಕೈತೋಟಕ್ಕೆ, ಗುಡಿಸಲಿನ ರಕ್ಷಣೆಗೆ, ಬೇಲಿಗೆ, ಪಾಗಾರಕ್ಕೆ ಬೇಕಾದ ಕಟ್ಟಿಗೆ ತರಲು ಆತ ಧಾವಿಸುವದು ಕಾಡಿಗೇ. ದೊಡ್ಡ ಕಾಂಡಗಳನ್ನೇ ಹೊತ್ತು ತಂದು ಒಂದಕ್ಕೊಂದು ಅಂಟಿಕೊಂಡು ನಿಲ್ಲುವಂತೆ ಹುಗಿದರೆ ಅದೇ ಅವನ ಬೇಲಿಯಾಯಿತು. ಅತಿ ಸರಳವೆಂದು ಅವನಿಗನಿಸಿದರೂ ಬಳಸಿದ ಕಟ್ಟಿಗೆ ಸಾವಿರಾರು ರೂಪಾಯಿ ಬೆಲೆಯುಳ್ಳದ್ದು. ನಗರದಲ್ಲಿ ಎರಡು ಲಕ್ಷ ರೂಪಾಯಿ ಖರ್ಚು ಮಾಡಿ ಮನೆಕಟ್ಟಿದಾತ ಕೂಡ ಅಷ್ಟೊಂದು ಕಟ್ಟಿಗೆಯನ್ನು ಬಳಸುತ್ತಾನೋ ಇಲ್ಲವೋ !

ಆದಿವಾಸಿಗಳ ಗೃಹನಿರ್ಮಾಣ ಸಂಪೂರ್ಣವಾಗಿ ಕೊರಡುಗಳನ್ನೇ ಅವಲಂಬಿಸಿರುತ್ತದೆ. ಅವರು ಕಲ್ಲು-ಮಣ್ಣುಗಳನ್ನು ಹೆಚ್ಚು ಬಳಸುವ ಗೋಜಿಗೆ ಹೋಗದೇ ಹತ್ತಾರು ನಾಟುಗಳನ್ನು ನಿಲ್ಲಿಸಿ ಅವುಗಳ ಮೇಲೆ ಚಪ್ಪರ ನಿಲ್ಲಿಸಿ ಬಿಡುವರು. ಮಾಡಿಗೂ ವಿಪರೀತ ಕಟ್ಟಿಗೆ ಬಳಿಸಲಾಗುತ್ತಿದೆ. ಅಲ್ಲಲ್ಲಿ ಬಿರುಕು ಬಿಟ್ಟಲ್ಲಿ ಪರ್ಣಗಳನ್ನು ಹಾಸುತ್ತಾರೆ, ಅಥವಾ ಮಣ್ಣು ಮೆತ್ತಿಬಿಡುತ್ತಾರೆ. ಹಗ್ಗ ಮಾಡುವದಿರಲಿ, ಮಂಚಕ್ಕೆ ಹುರಿ ಹೆಣೆಯುವದಿರಲಿ, ಅವರು ಕೆಲವೊಂದು ಮರದ ತೊಗಟೆಯನ್ನು ಸೀಳಿ ಅದಕ್ಕೇ ಹುರಿಹಾಕುವರು. ಇದರಿಂದ ಆತನಿಗೆ ಆಗುವದು ನಾಲ್ಕು ಕಾಸಿನ ಉಳಿತಾಯ. ಆದರೆ ಬೆಳೆಯುಲಿರುವ ಮರಕ್ಕೆ ತೊಗಟೆ ಹೋಗುವದರಿಂದ ಆಗುವ ಅಪಾರ ಹಾನಿ, ಅವರ ಬುದ್ಧಿಗೆ ಎಟಕುವ ವಿಚಾರವಲ್ಲ. ಇಂಥ ಮರಗಳು ಕೀಟ, ಬೂರಸು, ಗೆದ್ದಲು, ಮಳೆ-ಗಾಳಿ, ಬೆಂಕಿಗೆ ಸುಲಭವಾಗಿ ತುತ್ತಾಗುವವು.

ಅರಣ್ಯವನ್ನೆ ಅವಲಂಬಿಸಿರುವ ಆದಿವಾಸಿಗಳಿಗೆ ಅರಣ್ಯದ ಸದುಪಯೋಗ ವನ್ನು ತಿಳಿಸಿಕೊಡುವ ಯಾವ ಪ್ರಯತ್ನವೂ ನಡೆದಂತೆ ತೋರುತ್ತಿಲ್ಲ. ಓದು ಬರಹ ಬಾರದ ಆದಿವಾಸಿ ಹಳ್ಳಿಗಳಲ್ಲಿ ವನವಿಭಾಗದವರು ನಿಲ್ಲಿಸಿದ ಬೋರ್ಡು ಗಳು ವಿರೋಧಾಭಾಸದ ಪ್ರತೀಕಗಳಾಗಿವೆ. ದಿನರಾತ್ರಿ ಗಿಡಮರಗಳು ನಾಶ

ವಾಗುವಲ್ಲಿ ಇಂಗ್ಲೀಷ್-ಹಿಂದಿಗಳಲ್ಲಿ –“ಕಾಡು, ರಾಷ್ಟ್ರೀಯ ಸಂಪತ್ತು; ಅದನ್ನು ಸರ್ವವಿಧದಲ್ಲಿ ಸಂರಕ್ಷಿಸಿರಿ” ಎಂಬ ಸಂದೇಶ ಹೊತ್ತ ಫಲಕಗಳಿವೆ. ಯಾವ ಅಗ್ನಿ ಶಾಮಕ ವಿಧಾನಗಳೂ ಲಭ್ಯವಿಲ್ಲದ ತೀರ ಒಳಕಾಡುಗಳಲ್ಲಿ “ಕಾಡ್ಗಿಚ್ಚು, ಕಾಡಿನ ವೈರಿ, ಅದರ ನಿರ್ಮೂಲನ ನಮ್ಮೆಲ್ಲರ ಕರ್ತವ್ಯ” ಎಂದೂ “ಹುಲಿ ಕರಡಿಗಳೆಲ್ಲ ನಮ್ಮ ಬಾಂಧವರು; ಅವರನ್ನು ಬಾಳಿಸಿರಿ”, ಎಂದು ಅರಣ್ಯದ ಅಧಿಕಾರಿಗಳು ಶಿಕಾರಿಗೆ ಹೋಗುವಲ್ಲಿ ಸೂಚನೆಗಳನ್ನು ಹೊತ್ತ ಬೋರ್ಡುಗಳು ನಿಂತಿವೆ.

ಹಿಂದೊಮ್ಮೆ ಹೆಚ್ಚಿನ ಆದಿವಾಸಿಗಳು ಕಾಡನ್ನು ಕಡಿದು, ಸುಟ್ಟು, ಊಳದೇ ಬೀಜ ಬಿತ್ತಿ ಒಂದೆರಡು ಬೆಳೆ ತೆಗೆದು ಭೂಮಿ ನಿಸ್ಸತ್ವವಾದೊಡನೆ ಬೇರೊಂದೆಡೆಯಲ್ಲಿ ಇದೇ ಕ್ರಮ ಕೈಕೊಳ್ಳುತ್ತಿದ್ದರು. (Shift Cultivation) ಹೀಗೆ ಮಾಡುವದರಿಂದ ಅವರು ಕಾಡು ಕಡಿದ ಭೂಮಿಯೆಲ್ಲ ಹಾಳು ಬೀಳುವ ದಲ್ಲದೇ ವಿಪರೀತ ಕಟ್ಟಿಗೆ ಬಳಸಿ ನಿಲ್ಲಿಸಿದ ಮನೆ ಮತ್ತು ಘೋಟುಲಗಳು ಹುಳ-ಹುಪ್ಪಡಿಗಳ ಪಾಲಾಗುತ್ತಿದ್ದವು. ಆದರೆ ಇಂದು ಈ ಕೃಷಿಪದ್ಧತಿ ನಿಂತಂತೆಯೇ ಆಗಿದೆ. ಅವರೆಲ್ಲ ಸ್ಥಾಯಿಯಾಗಿ ಕೃಷಿ ಮಾಡುತ್ತಿದ್ದಾರೆ. ಆದರೆ ಬೇರೊಂದು ಸಮಸ್ಯೆ ತಲೆಯೆತ್ತಿದೆ. ಆದಿವಾಸಿಗಳು ವಾಸಿಸುವ ಸುತ್ತಮುತ್ತಲ ಕಾಡು ಅವರಿಗೇ ಸೇರಿದ್ದು ಎಂದು ಸರಕಾರ ಒಪ್ಪಿಕೊಂಡಿದೆ. ಹೀಗಾಗಿ ಅಲ್ಲಿಯ ಬೆಲೆಬಾಳುವ ಮರಗಳೆಲ್ಲ ಅವರ ಸೊತ್ತಾಗಿವೆ. ಅವರಿಗಾದರೋ ಮರಗಳನ್ನು ಬಳಸಿ ಗೊತ್ತಿದೆಯೇ ಹೊರತು ಬೆಳೆಸಿಯೂ ಗೊತ್ತಿಲ್ಲ, ಮಾರಿಯೂ ಅನುಭವ ವಿಲ್ಲ. ಅಂತೆಯೇ ಎರಡುಸಾವಿರ ರೂಪಾಯಿ ಬೆಲೆಬಾಳುವ ಮರವನ್ನು ಕೇವಲ ಇಪ್ಪತ್ತು ರೂಪಾಯಿಗೆ ಮಾರಿದ ಭೂಪರಿದ್ದಾರೆ ! ಅವರಿಗೆ ಹಣದಾಸೆ ತೋರಿ ಉತ್ತಮ ಮರಗಳನ್ನು ಅವನ ಭೂಮಿಯಿಂದ ದೋಚಿಕೊಂಡು ಹೋಗಲು ನಾಗರಿಕರು ಹಿಂದೆ-ಮುಂದೆ ನೋಡುವದಿಲ್ಲ.

ಕಾಡು ಕಡಿದು ಹೊಲಗಳನ್ನಾಗಿ ಪರಿವರ್ತಿಸುವ ಹೊಸ ರೋಗ ಆದಿವಾಸಿಗಳಲ್ಲಿ ಬಲು ಬೇಗ ಹಬ್ಬುತ್ತಿದೆ. ಒಂದೇ ಎಕರೆಯಲ್ಲಿ ಮೂವತ್ತು ನಾಲವತ್ತು ಮರಗಳನ್ನು ಕಡಿದು ಹಾಕಿದ್ದನ್ನು ನೋಡಿದಾಗ ಯಾವ ಅರಣ್ಯದ ಅಭಿಮಾನಿಗೆ ತಾನೇ ದುಃಖವಾಗದೇ ಇದ್ದೀತು? ಕಾಡು ಇರುವ ನೆಲದಲ್ಲಿ ಶತಕಗಳಿಂದ ಫಲವತ್ತಾದ ಸೂಸುಮಣ್ಣು ಸಿದ್ಧವಾಗುತ್ತದೆ. ಒಮ್ಮೆ ಕಾಡು ಕಡಿದರೆಂದರೆ ಆ ಮಣ್ಣು ಮಳೆನೀರಿನೊಂದಿಗೆ ಕೊಚ್ಚಿಕೊಂಡು ಹೋಗಿ ನೆಲ

ಬಂಜೆಯಾಗುತ್ತದೆ. ಆದಿವಾಸಿಗಳ ಜನಾಂಗ ಮತ್ತು ಅರಣ್ಯದ ಅಭಿವೃದ್ಧಿ ಒಂದನ್ನೊಂದು ಅವಲಂಬಿಸಿದ್ದರಿಂದ ಸರಕಾರ, ಸಾಹುಕಾರರು, ಸಮಾಜ ಸೇವಕರು ಕೂಡಿಯೇ ವನವಿಜ್ಞಾನದ ರೀತಿ-ನೀತಿಗಳನ್ನು ಗಿರಿಜನರಿಗೆ ತಿಳಿಹೇಳುವಂತಾದರೆ ಮಾತ್ರ ಆದಿವಾಸಿಗಳೊಂದಿಗೆ ವನಸಿರಿಯ ಉತ್ಕರ್ಷವೂ ಆಗಿ ದೇಶದ ಉತ್ಪನ್ನ ಹೆಚ್ಚಾದೀತು.

## ೨೨. ಧಾರ್ಮಿಕರು

ಕಾಲುಶತಮಾನದ ಹಿಂದೆ, ವೆಂಕಟೇಶ ಮಹಾತ್ಮೆ ತೆರೆಗೆ ಬಂದಾಗ, ಭಾವುಕ-ಧಾರ್ಮಿಕ ಹಳ್ಳಿಗರು ನಟರೇ ದೇವರೆಂದು ಭಾವಿಸಿ, ಪೂಜೆ, ಪುನಸ್ಕಾರ ನೈವೇದ್ಯಗಳನ್ನು ಮಾಡಿದಾಗ ಎಂತಹ ಬೆಪ್ಪರು! ಅನಿಸಿತ್ತು. ಮಧ್ಯಪ್ರದೇಶದಲ್ಲಿ ಇಂದಿಗೂ ಹೆಚ್ಚು-ಕಡಿಮೆ ಇಂಥ ಮನೋಭಾವನೆಯುಳ್ಳ ಜನ ಸಾಕಷ್ಟು ಇದ್ದಾರೆ. "ಜೈ ಸಂತೋಷಿಮಾ" ಚಲಚ್ಚಿತ್ರ ಬಿಡುಗಡೆಯಾದನಂತರ ಇದೇ ಕಲ್ಕಿಯ ಅವತಾರವೆಂಬಂತೆ ಸಂತೋಷಿಮಾ ಎಲ್ಲರ ಆರಾಧ್ಯ ದೇವತೆಯಾಗಿ ಬಿಟ್ಟಳು. ಸಂತೋಷಿಮಾ ನಟ ನಟಿಯರ ಫೋಟೋಗಳಿಗೆ ಮನೆಯ ಪೂಜಾ ಸ್ಥಾನದಲ್ಲಿ ಸ್ಥಳ ಸಿಕ್ಕಿತು. ಶುಕ್ರವಾರದ ಉಪವಾಸಗಳು ಭರದಿಂದ ಪ್ರಾರಂಭವಾದವು. ಜಪತಪಗಳು ಶುರುವಾದವು. ಆರಾಧನಾ ಹಾಡುಗಳ ಭಜನೆ ಎಲ್ಲೆಡೆ ಕೇಳಿಬರಲಾರಂಭಿಸಿದವು. ಮಕ್ಕಳು ಆ ಹಾಡುಗಳನ್ನು ಹಾಡುತ್ತ ನರ್ತಿಸಲಾರಂಭಿಸಿದರು. ಸುಪ್ರಭಾತದಿಂದ ಪ್ರಾರಂಭವಾದ ಸಂತೋಷಿಮಾತೆಯ ಗೀತಗಳು ಮಧ್ಯರಾತ್ರಿಯವರೆಗೆ ಜನರ ಕಿವಿಗೆ ಬಿದ್ದು ಅವರನ್ನು ಪುನೀತ ಮಾಡುವ ವ್ಯವಸ್ಥೆಯಾಯಿತು. ಹಬ್ಬ-ಹರಿದಿನಗಳಲ್ಲಿ ಈ ಹಾಡುಗಳ ಧ್ವನಿಮುದ್ರಿಕೆಗಳು ಹಲವಾರು ಸ್ಥಳಗಳಲ್ಲಿ ಕೇಳಲಾರಂಭಿಸಿದವು. ದೇವನಾಮಸ್ಮರಣೆಗೆ ದೇವಾಲಯಗಳಿಗೆ ಹೋಗಬೇಕೆಂದಿಲ್ಲ. ರಾತ್ರಿಗಳಲ್ಲಿ ಕೀರ್ತನೆ, ಭಜನೆ, ರಾಮಕಥೆಗಳು ಒಂದಿಲ್ಲೊಂದು ಕಡೆ ನಡೆದೇ ಇರುತ್ತವೆ. ಕೃಷ್ಣಾಷ್ಟಮಿ, ಶಿವರಾತ್ರಿ, ರಾಮನವಮಿಗಳಂತಹ ವಿಶೇಷ ಹಾಡುಗಾರಿಕೆ ನಡೆಯುತ್ತದೆ. ಈ ದಿನಗಳಲ್ಲಿ

ಬಂತೂ ಯಾವ ಭಜನೆ ಕೇಳಬೇಕು ಎಂದು ಗೊಂದಲವಾಗುವಷ್ಟು ಹಾಡುಗಾರಿಕೆ ನಡೆಯುತ್ತದೆ. ಈ ಹಾಡುಗಾರಿಕೆಯ ರೂಢಿಯಿಲ್ಲದ ಹೊಸಬರು ಇಡೀ ರಾತ್ರಿ ನಿದ್ರೆಯಿಲ್ಲದೆ ಮುಂಜಾವಿನಲ್ಲಿ ತೂಕಡಿಸಬೇಕಾಗುತ್ತದೆ.

ಗಣೇಶ ಚತುರ್ಥಿಯನ್ನು ಮನೆಗಳಲ್ಲೂ, ಸಾರ್ವತ್ರಿಕವಾಗಿಯೂ ಆಚರಿಸುವ ರೂಢಿಯಿದೆ. ಪ್ರತಿಯೊಂದು ವಿಗ್ರಹವನ್ನು ಕಲಾತ್ಮಕವಾಗಿ ಕೈಯಿಂದ ಮಾಡುವದಕ್ಕಿಂತ, ಅಚ್ಚಿನಲ್ಲಿ ಮಣ್ಣು ಮೆತ್ತಿಕೊಂಡು ಒಂದೇ ರೂಪ. ಆಕಾರ ತಾಳಿಬರುವ ಗಣಪರೇ ಹೆಚ್ಚು! ಆದ್ದರಿಂದ ಹೆಚ್ಚಿನ ಮಡಿವಂತಿಕೆ ಇಲ್ಲದೇ, ಆಟಿಗೆಯಂತೆ ಗಣೇಶನನ್ನು ಖರೀದಿಸಿ ಮನೆಗೆ ಒಯ್ಯುವವರೇ ಹೆಚ್ಚು. ಇಲ್ಲಿ ಗಣಪನ ಹುಟ್ಟೂರಾದ ಮಹಾದೇವ ಪರ್ವತಾವಳಿಗಳು ಸಮೀಪದಲ್ಲೇ ಇದ್ದುದರಿಂದಲೋ ಏನೋ, ಮಣ್ಣಿನ ಗಣಪನಿಗೆ ಒಂದು ರೂಪಾಯಿ ಕೊಟ್ಟು ಸುಲಭದಲ್ಲಿ ವಿಘ್ನಗಳನ್ನು ವಿನಾಶ ಮಾಡಿಕೊಂಡುಬಿಡಬಹುದು. ಚಂದಾ ಎತ್ತಿ ಕೂಡ್ರಿಸಿದ ಗಣಪತಿಯ ಭಕ್ತವೃಂದ ದೊಡ್ಡದು. ಅಂತೆಯೇ ಆಯಕಟ್ಟಿನ ಸ್ಥಳದಲ್ಲಿ ಚಪ್ಪರ ಹಾಕಿ, ಅಲಂಕಾರ ಮಾಡಿ, ಧ್ವನಿಮುದ್ರಿಕೆಗಳನ್ನು ಬಾಡಿಗೆಗೆ ತಂದು ಗಣೇಶೋತ್ಸವ ಆಚರಿಸುವರು. ದಿನಕ್ಕೊಂದು ಅಲಂಕಾರವಿದ್ದರೂ, ಮಹಾರಾಷ್ಟ್ರ, ಉತ್ತರಕರ್ನಾಟಕಗಳಂತೆ ಸಾಂಸ್ಕೃತಿಕ ಚಟುವಟಿಕೆಗಳ ಸಡಗರ ವಿಲ್ಲ. ಪೂಜೆಪುರಸ್ಕಾರಗಳ ಬಗ್ಗೆಯೂ ಯಾವದೇ ನಿಯಮವಿಲ್ಲ. ಎಂಟು ಹತ್ತು ವಿನಾಯಕರು ಸದ್ದಿಲ್ಲದೇ ಊರಿನಲ್ಲಿ ಬೀಡುಬಿಟ್ಟಿರುತ್ತಾರೆ. ವಿಸರ್ಜನೆಯ ದಿನ ಊರಿನಲ್ಲಿ ಸಂಭ್ರಮ. ಅಂದು ವ್ಯಾಪಾರಿಗಳೆಲ್ಲ ರಾತ್ರೆಯಿಡೀ ಅಂಗಡಿಗಳನ್ನು ತೆರೆದಿಡುತ್ತಾರೆ. ಕತ್ತಲಾಯಿತೆಂದರೆ, ಜಾತ್ರೆಯಂತೆ ಮಿಠಾಯಿ, ಫುಗ್ಗೆ ಮಾರುವವರು, ಹಚ್ಚೆ ಹಾಕುವವರು ಊರ ಕೆರೆಯ ಸುತ್ತ ತಮ್ಮ ಅಂಗಡಿಗಳನ್ನು ಪ್ರಾರಂಭಿಸುವರು. ತಲೆಯ ಮೇಲೆ ಹೊತ್ತು, ಕೈಗಾಡಿಯಲ್ಲಿ, ರಿಕ್ಷಾದಲ್ಲಿ ಸಿದ್ಧಿವಿನಾಯಕನನ್ನು ತಂದು ಪೂಜೆಮಾಡಿ ವಿಸರ್ಜಿಸುವರು.

ನೂಲಹುಣ್ಣಿಮೆಗೆ ಜನಿವಾರ ಧರಿಸುವದು, ರಕ್ಷಾಬಂಧನ ಮಾಡುವದು ಸಾಮಾನ್ಯ. ಆದಿವಾಸಿಗಳು ಬಳೆ ತೊಡುವಂತೆ, ರಬ್ಬಾದ ರಕ್ಷಾ ಬಂಧನಗಳನ್ನು ಕೈಗೆ ಕಟ್ಟಿಕೊಂಡು ಓಡಾಡುವ ಪುರುಷರನ್ನು ನೋಡಿದಾಗ ತಮಾಷೆಯೆನಿಸುತ್ತದೆ. ಮಹಿಳೆಯರು, ಜೈಲಿನಲ್ಲಿ ಇರುವ ಅಣ್ಣನಿಗೆ ರಾಖೀ ಕಟ್ಟುವ ಸಲುವಾಗಿ ಎಷ್ಟೇ ಕಾಯಲು ಸಿದ್ಧ, ಕಷ್ಟಗಳನ್ನು ಸಹಿಸಲು ಸಿದ್ಧ. ರಕ್ಷಾಬಂಧನ, ರಾಖೀ

ಕಟ್ಟಿಸಿಕೊಂಡವರಷ್ಟೇ ಕಟ್ಟುವವರಿಗೂ ಮಹತ್ವವಿದೆ. ಗೋಕುಲಾಷ್ಟಮಿಗೆ ಉಪವಾಸ ಮಾಡಿ ರಾತ್ರಿಯಲ್ಲಿ ಢೋಲಕ್ ಬಾರಿಸಿ ಭಜನೆ ಮಾಡುವದು ಮುಖ್ಯ ಕಾರ್ಯಕ್ರಮ. ದಸರಾ, ರಾಮಲೀಲೆಯ ಹಬ್ಬ, ದೀಪಾವಳಿ, ಉಳಿದೆಲ್ಲ ಕಡೆಯಂತೆ ದೀಪ ಉರಿಸಿ, ಪಟಾಕ್ಷಿ ಹಾರಿಸಿ ಸಿಹಿತಿಂಡಿ ಹಂಚಿ ಆಚರಿಸುವರು.

ಜಂಬೂಸವಾರಿಯ ಮೈಸೂರ ದಸರಾ, ಹಿಂದೆ ಖ್ಯಾತಿಪಡೆದಂತೆ ಜಗದಲಪುರದ ಬಸ್ತರ ದಸರಾ ಹೆಸರುವಾಸಿಯಾಗಿದೆ. ಬಸ್ತರಜಿಲ್ಲೆಯ ಹಲವೆಡೆ ಕನ್ನಡ ಶಿಲಾಶಾಸನಗಳು ಕಂಡುಬರುವದರಿಂದ ದಸರಾ ಹಬ್ಬದ ಸಂಪ್ರದಾಯ ವಿಜಯನಗರದಿಂದ ದಕ್ಷಿಣಕ್ಕೆ ಹೋದಂತೆ ಉತ್ತರಕ್ಕೂ ಬಸ್ತರಕ್ಕೆ ಹೋಗಿರ ಬಹುದೇ ಎಂಬ ಊಹೆಗೆ ಆಸ್ಪದವಿದೆ. ಎರಡುವಾರಗಳ ಈ ಹಬ್ಬಕ್ಕೆ ದೂರ ದೂರದಿಂದ ಭಕ್ತರು ಬಂದು ಠಾಣ್ಯ ಹಾಕುತ್ತಾರೆ. ಇವರಲ್ಲಿ ಬಹುಸಂಖ್ಯಾಕರು ಆದಿವಾಸಿಗಳೇ ಇರುವದು ವೈಶಿಷ್ಟ್ಯ. ಬಸ್ತರದ ರಾಜ ಪ್ರವೀರಚಂದ್ರ ಭಾಂಜದೇವರಿದ್ದಾಗ * ಬಹು ವಿಜೃಂಭಣೆಯಿಂದ ಆಚರಿಸಲಾಗುತ್ತಿತ್ತು. ಅದನ್ನು ಇಂದಿಗೂ ಜನ ನೆನೆಸಿಕೊಳುತ್ತಾರೆ. ಈಗ ಭಾರೀ ಪೋಲಿಸಪಡೆಯನ್ನು ಇಟ್ಟು ಸರಕಾರವೇ ಈ ಹಬ್ಬ ನಡೆಸುತ್ತದೆ. ದಂತೇಶ್ವರಿ ದೇವಿಯ ವಿಗ್ರಹವನ್ನು ದಂತೇವಾಡಾದಿಂದ ಹೊತ್ತು ಜಗದಲಪುರಕ್ಕೆ ತಂದು ಹಬ್ಬದಾಚರಣೆ ಪ್ರಾರಂಭ ವಾಗುತ್ತದೆ. ಆದಿವಾಸಿಗಳು ರಚಿಸಿದ ತೇರು ಎಳೆಯುವದು, ನಾಟಕ, ನೃತ್ಯ. ಪೂಜೆ, ಪುರಸ್ಕಾರಗಳು ಈ ದಸರಾದ ವಿಶೇಷ ಆಕರ್ಷಣೆ. ಈ ದಿನಗಳಲ್ಲಿ ಅರಮನೆಯನ್ನು ಸಾರ್ವಜನಿಕರಿಗಾಗಿ ತೆರೆದಿಟ್ಟು, ಪ್ರಜೆಗಳು ಭಯಭಕ್ತಿಯಿಂದ ಭಾಂಜದೇವರ ವಂಶಜರಿಗೆ ಕಾಣಿಕೆ ಒಪ್ಪಿಸುತ್ತಾರೆ.

ಸಂಕ್ರಾಂತಿ ಮತ್ತು ಶಿವರಾತ್ರಿಗೆ ಚಕ್ಕಡಿ ಕಟ್ಟಿಕೊಂಡು ಹೋಗಿ ಹತ್ತಿರದ ನದಿ, ಕೆರೆಗಳಿಗೆ ಹೋಗಿ ಸ್ನಾನ ಮಾಡುವರು. ಅಂಥಲ್ಲಿ ದೊಡ್ಡ ಜಾತ್ರೆ ಸೇರುವದು. ಪಚಮಡಿಯ ಮಹಾದೇವ ಪರ್ವತಾವಳಿಯಲ್ಲಿ, ಶಿವರಾತ್ರಿಯ ಮಹಾಜಾತ್ರೆಗೆ, ಮಹಾರಾಷ್ಟ್ರದ ಭಕ್ತರು ಭಾರವಾದ ತ್ರಿಶೂಲಗಳನ್ನು

* ಪ್ರವೀರಚಂದ್ರರು ಅಂದಿನ ರಾಜ್ಯ-ಕೇಂದ್ರ ಸರಕಾರಗಳಿಗೆ ಸೊಪ್ಪು ಹಾಕದ್ದರಿಂದ ತರುಣವಯಸ್ಸಿನ ತಮ್ಮ ರಾಜನನ್ನು ಗುಂಡುಹಾಕಿ ಕೊಂದರೆಂದು ಅವರ ಪ್ರಜೆಗಳು ಇಂದಿಗೂ ದೃಢವಾಗಿ ನಂಬುತ್ತಾರೆ.

ಹೊತ್ತು ಬರುತ್ತಾರೆ. ಕ್ಷಿಪ್ರಾ ನದಿಯ ದಡದಲ್ಲಿ ನಡೆಯುವ ಶಿವರಾತ್ರಿಯ ಜಾತ್ರೆಗೆ ಭಾರತದ ವಿವಿಧ ಭಾಗಗಳಿಂದ ಸಾಧುಸಂತರು ಆಗಮಿಸುತ್ತಾರೆ. ಬೆಳಗಿನ ಮೂರು ಗಂಟೆಗೇ ಸ್ಮಶಾನದ ಬಿಸಿ ಬೂದಿಯನ್ನು ಶಿವನಿಗೆ ಬಳಿದು, ಪೂಜೆಗೆ ಪ್ರಾರಂಭಿಸುತ್ತಾರೆ. ಕೊಂಡಾಗಾಂವ(ಬಸ್ತರ)ದ ಹತ್ತಿರವಿರುವ ಕೇಸ ಕಾಲ ಪರ್ವತಾವಳಿಗಳಲ್ಲಿ ದೊಡ್ಡ ಜಾತ್ರೆ ಸೇರುತ್ತದೆ. ಹೋಳಿಹಬ್ಬಕ್ಕೆ ಸ್ತ್ರೀ ಪುರುಷರು ಸೇರಿಯೇ ಎರಡು ದಿನ ಬಣ್ಣವಾಡುತ್ತಾರೆ. ಹತ್ತಿರದ ರಾಜ್ಯದಲ್ಲಿ ಬೆಳೆದು, ಗೋಪಿಕಾಸ್ತ್ರೀಯರೊಡನೆ ಬಣ್ಣವಾಡಿದ ಶ್ರೀಕೃಷ್ಣನ ನೆನಪಿಗೆ ಇರಬೇಕು ! ಬಟ್ಟೆಯನ್ನು ಬಣ್ಣದಿಂದ ಕೆಡಿಸಿದವರಿಗೆ ತಿಂಡಿ-ತೀರ್ಥ ಕೊಟ್ಟು ಆದರಿಸುವದು ಇವರ ವೈಶಿಷ್ಟ್ಯ.

ಭಿಲ್ಲ ಮತ್ತು ಭಿಲಾಲಾ ಆದಿವಾಸಿಗಳು, ಹೋಳಿಯನ್ನು 'ಭಾಗೋರಿಯ' ಎಂಬ ಹೆಸರಿನಿಂದ ವಿಶೇಷವಾಗಿ ಆಚರಿಸುತ್ತಾರೆ. ಹಬ್ಬಕ್ಕೆ ಏಳು ದಿನಗಳಿರು ವಾಗಲೇ ಹತ್ತಿರದಲ್ಲೇ ನಡೆಯುವ ಜಾತ್ರೆಯ ಸೂಚನೆಯಾಗಿ ಯುವಕ-ಯುವತಿ ಯರು ಸೇರಿ ಢೋಲಕ್ ಬಾರಿಸುತ್ತ, ಹಾಡುತ್ತ ನರ್ತಿಸುತ್ತ ಕಾಲಕಳೆಯುವರು. ಈ ಸಂದರ್ಭದಲ್ಲೆ ತಮ್ಮ ಜೀವನ ಸಂಗಾತಿಗಳನ್ನು ಆರಿಸಿಕೊಳ್ಳುವರು. ತನಗೆ ಒಪ್ಪಿದ ಕನ್ಯೆಗೆ ಅವನು ಗುಲಾಲು ಹಚ್ಚುವನು. ಅವನ ಇಂಗಿತ ಅರಿತುಕೊಂಡು ತನಗೆ ಆಕ್ಷೇಪಣೆ ಇಲ್ಲದಿದ್ದರೆ ವಧು-ವರನ ಹಣೆಗೆ ಗುಲಾಲ ಸವರುವಳು. ಇದರಿಂದ ಉತ್ತೇಜನಗೊಂಡ ಯುವಕನು ತನ್ನವಳಿಗೆ ತಿನ್ನಲು' ಮಾಜೂಮ' (ಬೆಲ್ಲ-ಭಂಗಿಗಳನ್ನು ಸೇರಿಸಿ ತಯಾರಿಸಿದ ಮಾದಕ ತಿಂಡಿ) ಕೊಡುವನು. ಅದನ್ನು ಸ್ವೀಕರಿಸಿದಳೆಂದರೆ ಅವಳು ಕೈವಶವಾದಂತೆಯೇ. ತನ್ನೊಂದಿಗೆ ಅವಳನ್ನು ಮನೆಗೆ ಕರೆತಂದು, ತಾಯಿಗೆ ಸೊಸೆಯೊಬ್ಬಳನ್ನು ತಂದಿದ್ದೇನೆಂದು ಅವನು ಸಾರುತ್ತಾನೆ. ವಧುವಿನ ಕಡೆಯವರು, ಕನ್ಯೆಯನ್ನು ಅಪಹರಿಸಿಕೊಂಡು ಹೋಗುವ ಯತ್ನಮಾಡುವಂತೆ ಇದ್ದುದರಿಂದ ಭದ್ರಕಾವಲು ಇಟ್ಟಿರುತ್ತಾರೆ. ಮದುವೆಗೆ ಅವಳ ತಂದೆ-ತಾಯಿಗಳು ಸುಲಭವಾಗಿ ಒಪ್ಪಿದರೇ ಚೆನ್ನಾಯಿತು. ಇಲ್ಲವಾದರೆ ಕಾದಾಟ, ಹೊಡೆದಾಟಗಳಿಂದ ಅವರನ್ನು ಒಪ್ಪಿಸಲಾಗುತ್ತದೆ. ಭಾಗೋರಿಯಾ ನೃತ್ಯಮೇಳದವರು ಆ ವಾರದಲ್ಲಿ ನಡೆಯುವ ಎಲ್ಲ ಕಡೆಯ ಸಂತೆಗಳಿಗೆ ಹೋಗುವರು. ಕುಡಿತದ ಅಮಲಿನಲ್ಲಿ ಅವರು ತಮ್ಮ ವೈರಿಯ ಮೇಲಿನ ಸೇಡು ತೀರಿಸಿಕೊಳ್ಳುವ ಪರಿಪಾಠ ಹಿಂದೊಮ್ಮೆ ಇತ್ತಂತೆ. ಆದರೆ

ಈಗಿನ ದಿನಗಳಲ್ಲಿ ಹೀಗಾಗದಂತೆ ಪೋಲಿಸ-ಪಡೆಯುವರು ಮುಂಜಾಗ್ರತೆ ವಹಿಸಿ ಯುವಕರು ಜೊತೆಯಲ್ಲಿ ತಂದ ಆಯುಧಗಳನ್ನೆಲ್ಲ ತೆಗೆದಿಟ್ಟು ಕೊಳ್ಳುವರು.

ಹೋಳಿಯ ನಂತರ ಗೊಂಡರು ಮೇಘನಾಥನ ಹಬ್ಬವನ್ನು ಆಚರಿಸಲು ಪ್ರಾರಂಭಿಸುವರು. ಇದಕ್ಕೊಂದು ನಿರ್ದಿಷ್ಟ ದಿನವಿಲ್ಲದ್ದರಿಂದ ಬೇರೆ ಬೇರೆ ಹಳ್ಳಿಗಳಲ್ಲಿ ತಮಗೆ ಅನುಕೂಲವಾದಾಗ ಈ ಹಬ್ಬ ಆಚರಿಸುವದು ವಾಡಿಕೆ. ಸುಮಾರು ನಲವತ್ತೈದು ಅಡಿಯ ಖಂಬ (ಖಾಂಡೇಕಾ) ನಿಲ್ಲಿಸಿ, ಅದರ ಸುತ್ತ ಕಾಟಕೋನಾಕಾರದ ಮಂಚಲು ಕಟ್ಟುತ್ತಾರೆ. ಸಾಮರ್ಥ್ಯದ ಪ್ರತೀಕವಾದ ಮೇಘನಾಥ ದೇವರ ವಿಗ್ರಹ ಪ್ರತಿಷ್ಠಾಪಿಸುತ್ತಾರೆ. ಕಂಬಕ್ಕೆ ಅಡ್ಡ ಕಂಬ ಕಟ್ಟಿ ಅದನ್ನು ತಿರುಗಿಸಲು ಬರುವಂತೆ ಉದ್ದದ ಹಗ್ಗವನ್ನು ಇಳಿಬಿಡುತ್ತಾರೆ. ಮೇಲೆ ಹತ್ತಲು ಪಾವಟಿಗೆಗಳನ್ನು ಮಾಡಿರುತ್ತಾರೆ. ತಮ್ಮ ಪೀಡೆಗಳ ಪರಿಹಾರಕ್ಕೆ ಈ ದೇವರಿಗೆ ಹರಕೆ ಹೊತ್ತಿರುತ್ತಾರೆ. ಇವರಲ್ಲಿ ಹೆಂಗಳೆಯರ ಸಂಖ್ಯೆಯೆ ಹೆಚ್ಚು. ಅವಿವಾಹಿತ ತರುಣಿ ಹಿತ್ತಾಳೆಯ ಬಟ್ಟಲಲ್ಲಿ ನೀರು, ವೀಳ್ಯದೆಲೆ ಮತ್ತಿತರ ಪೂಜಾಸಾಮುಗ್ರಿಗಳೊಂದಿಗೆ ಬರುತ್ತಾಳೆ. ತೆಂಗಿನಕಾಯಿ, ಲಿಂಬೆಹಣ್ಣು ಅರಿಶಿನಗಳ ಜೊತೆಗೆ, ಕೋಳಿ-ಆಡುಗಳನ್ನು ದೇವರಿಗೆ ಬಲಿಯಾಗಿ ಅರ್ಪಿಸ ಲಾಗುತ್ತದೆ. ಹೆಚ್ಚಿನ ಭಕ್ತರಿಗೆ ನಾಲ್ಕು ಐದು ಪಾವಟಿಗೆಗಿಂತ ಹೆಚ್ಚಿಗೆ ಏರಲು ಬಿಡುವದಿಲ್ಲ. ಹರಕೆ ಹೊತ್ತ "ಬೀರ"ರಿಗೆ ಆವೇಶ ಬಂದು, ಮೇಲೇರಿ ದೇವ ದರ್ಶನ ಪಡೆದು ಅಡ್ಡ ಕಂಬಕ್ಕೆ ಜೋತು ಬಿದ್ದಾಗ, ಕೆಳಗಿನವರು ಹಗ್ಗ ಎಳೆದು ಅವರು ತಿರುಗುವಂತೆ ಮಾಡುತ್ತಾರೆ. ಮನೆಯುವರೆಲ್ಲ ಪ್ರಸಾದ ಪಡೆದು ಹಿಂತಿರುಗುತ್ತಾರೆ.

ಗೊಂಡರು ಬೀಜ ಬಿತ್ತುವ ಪೂರ್ವದಲ್ಲಿ ಬಿದ್ರಿ ಹಬ್ಬ ಆಚರಿಸುವರು. ಊರ ಹಿರಿಯರು ಸೇರಿ ಹಬ್ಬದ ದಿನ ನಿರ್ಧರಿಸಿ, "ಭೂಮಕಾ"(ಮಧ್ಯಸ್ಥ)ನನ್ನು ಹಬ್ಬಕ್ಕಾಗಿ ಧನ-ಧಾನ್ಯ ಸಂಗ್ರಹಿಸಲು ಹೇಳುವರು. ಅವನು ತನ್ನ 'ಧೂರಾ' (ತುತ್ತೂರಿ) ಬಾರಿಸುತ್ತ ಓಣಿಯಲ್ಲಿ ತಿರುಗುತ್ತ ಹಿರಿಯರ ನಿರ್ಧಾರವನ್ನು ಊರವರಿಗೆ ಸಾರುವನು. ಹಬ್ಬದ ದಿನ ತಮ್ಮ ಸ್ನಾನಗೃಹದ ಪೂಜೆ ಮಾಡುವರು. ನಂತರ ಊರಿನ "ಭೀಮಸೇನ" ಮಂದಿರದಲ್ಲಿ ಎಲ್ಲರೂ ಸೇರುವರು. ಮಕ್ಕಳು, ಭೂತ-ಪಿಶಾಚಿ ರಾಕ್ಷಸರ ಚಿತ್ರಗಳನ್ನು ತಯಾರಿಸಿ

ಸುಡುವರು. ಊರವರಿಂದ ಒಟ್ಟು ಮಾಡಿದ ಕಾಳು-ಕಡಿಯಿಂದ ಅಡಿಗೆ ಮಾಡಿ, ಎಲ್ಲರೂ ಸಾಮೂಹಿಕವಾಗಿ ಉಣ್ಣುವರು. ಅನಂತರ ಹತ್ತಿರದ ಭೂಮಿ ಅಗೆದು, ಸುಟ್ಟು ಅಲ್ಲಿ ಬೀಜಗಳನ್ನು ನೆಡುತ್ತಾರೆ. ಮಣ್ಣನ್ನು ಸುಡುವದರಿಂದ ಅದರಲ್ಲಿ ವಿರಮಿಸುವ ಬಾಧೆಯ ಕ್ರಿಮಿ-ಕೀಟಗಳು ನಾಶಹೊಂದುತ್ತವೆ ಎಂಬುದನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಉಳಿದ ಧಾನ್ಯವನ್ನು ಹಳ್ಳಿಗರಿಗೆ ಹಂಚುತ್ತಾರೆ. ಅವುಗಳನ್ನು ಅವರು ಪ್ರಸಾದವೆಂದು ಗ್ರಹಿಸಿ, ತಮ್ಮ ಇತರ ಬೀಜಗಳೊಂದಿಗೆ ಸೇರಿಸಿಬಿಡುತ್ತಾರೆ.

ಗೊಂಡ, ಜರಾಜ, ಮುರ್ಝಾವಾರ ಆದಿವಾಸಿಗಳು 'ಕರ್ಮ' ಹಬ್ಬ ಆಚರಿಸುವರು. ಆಗಸ್ಟ ತಿಂಗಳಿನಲ್ಲಿ ಕಾಡಿನಿಂದ ಕಲ್ಮಿ ಇಲ್ಲವೇ ಗಲ್ಡು ಮರದ ಟೊಂಗೆಯನ್ನು ತಂದು ಅದು ಬಾಡದಂತೆ ಒದ್ದೆ ಬಟ್ಟೆಯಲ್ಲಿ ಸುತ್ತಿಡುವರು. ಗೊಂಡ ಹುಡುಗಿಯರು ತೂತು ಮಾಡಿದ ಮಡಕೆಗಳಲ್ಲಿ ಶಾಂತಿಯ ಪ್ರತೀಕವಾದ ಪಾರಿವಾಳದ ಮೂರ್ತಿ ಮತ್ತು ಉರಿಯುವ ಹಣತೆ ಇಟ್ಟುಕೊಂಡು, ಮನೆ ಮನೆಗೆ ತಿರುಗಿ ಜನರಿಂದ ಚಂದಾ ಹಣವನ್ನು ಕೂಡಿಸುವರು. ರಸಿಕ ಶಿಖಾಮಣಿ ಗಳು ಚಳಿಗಾಲದಲ್ಲಿ ಹಾಡುತ್ತ, ಕುಣಿಯುತ್ತ 'ಕರ್ಮ' ಹಬ್ಬ ಮಾಡುವರು. ಹಬ್ಬದ ದಿನ ಬಂದ ವರ್ಗಣಿಯಿಂದ ದೊಡ್ಡ ಭೋಜನಕೂಟ ಏರ್ಪಡಿಸಿ ಆನಂದಿಸುವರು.

ಛತ್ತೀಸಗಡದ ಗೊಂಡ ಮತ್ತು ಅಹೀರರಲ್ಲಿ 'ಸ್ತ್ರೀರಾಜ್ಯ' ಎಂಬ ಹೆಂಗಳೆಯರ ಹಬ್ಬ ಆಚರಿಸುವ ಪರಿಪಾಠ ಬೆಳೆದುಬಂದಿದೆ. ಸ್ತ್ರೀಯರು ಸೈನಿಕರಂತೆ ನಟಿಸಿ, ಕೈಗೆ ಸಿಕ್ಕ ಕುಡಗೋಲು, ಬಾಣ-ಬಿಲ್ಲು ಮೊದಲಾದ ಆಯುಧಗಳನ್ನು ವಶಪಡಿಸಿಕೊಳ್ಳುತ್ತ ಹಳ್ಳಿಯಿಂದ ಹಳ್ಳಿಗೆ ತಿರುಗುವರು. ಒಂದು ಹಳ್ಳಿಯ ಕುರಿಯ ಶಿರವನ್ನು ಇನ್ನೊಂದು ಹಳ್ಳಿಯವರಿಗೆ ಕೊಟ್ಟಾಗ ಅಲ್ಲಿಯವರು 'ಸ್ತ್ರೀರಾಜ್ಯ'ದಲ್ಲಿ ಸೇರ್ಪಡೆಯಾಗುವರು. ಕೆಲ ಹೆಂಗಸರು ಆವೇಶ ಬಂದು ಕೂದಲುಗಳನ್ನು ಹರಡಿಕೊಂಡು, ನಿಜಕ್ಕೂ ಸ್ತ್ರೀರಾಜ್ಯ ಸ್ಥಾಪಿಸುವ ಭ್ರಮೆಯಲ್ಲಿ ಇರುತ್ತಾರೆ. ಈ ಸ್ತ್ರೀ'ಚಳುವಳಿ' ಒಂದೆರಡು ತಿಂಗಳವರೆಗೂ ನಡೆಯುವದುಂಟು. ಸುದೈವದಿಂದ ಇದು ಪ್ರತಿ ವರ್ಷಕ್ಕೆ ಬರುವ ಹಬ್ಬ ವಾಗದೇ ಜಟ್ಟಿಗಳಂತೆ ಎಂಟೋ ಹತ್ತೊ ವರ್ಷಕ್ಕೊಮ್ಮೆ ಬರುವ ಪಿಡುಗಾಗಿದೆ!

ಹಿಂದೊಮ್ಮೆ ಆದಿವಾಸಿಗಳಲ್ಲಿ ಪಣಗೆದ್ದು ಮದುವೆಯಾಗುವ ಪದ್ಧತಿ

ಇತ್ತು. ಈಗ ಅದರ ಬದಲಾಗಿ ಜೇರಿ ಹಬ್ಬ ಆಚರಿಸುತ್ತಾರೆ. ಇಂದು ಪಣ ಗೆದ್ದವರಿಗೆ ಪೆಣ್ಣಿನ ಬದಲಾಗಿ ಹಣ ಮತ್ತು ತಿಂಡಿಗಳನ್ನು ಕೊಡುತ್ತಾರೆ. ಬೈಗಾ ಪಂಗಡದ ಹಬ್ಬದಲ್ಲಿ ಚಿಕ್ಕಮಕ್ಕಳು ವಿವಿಧ ತರದ ಮುಖವಾಡಗಳನ್ನು ತಯಾರಿಸಿ ಧರಿಸಿ, ಹಳ್ಳಿ-ಹಳ್ಳಿಗೆ ಹೋಗಿ ಧನ-ಧಾನ್ಯ ಸಂಗ್ರಹಿಸಿ, ಹಬ್ಬವನ್ನು ಆಚರಿಸುವರು. ಮುರಿಯ ಮತ್ತು ಮಾರಿಯರು, ಬೇಟೆಗೆ ಹೊರಡುವ ಮೊದಲು "ಪಾರ್ವಾ" ಹಬ್ಬ ಆಚರಿಸುವರು. ಇದರಲ್ಲಿ ಅವಿವಾಹಿತ ಯುವಕನಿಗೆ ಮೈ ಭಾರ ಬಂದು, ಈ ವರ್ಷದ ಬೇಟೆತಂಡದ ನಾಯಕತ್ವವನ್ನು ಯಾರು ಸ್ವೀಕರಿಸಬೇಕು, ಯಾವ ಯಾವ ಬೇಟೆ ಸಿಗಲಿದೆ ಮುಂತಾದ ವಿವರಗಳನ್ನು ಹೇಳುತ್ತಾನೆ. ಹಬ್ಬದಡಿಗೆ ಉಂಡು ಎಲ್ಲರೂ ಆಯುಧಗಳೊಂದಿಗೆ ಕಾಡಿಗೆ ಹೋಗುತ್ತಾರೆ. ಹೀಗೆ ಒಮ್ಮೆ ಹೊರಟವರು, ಹತ್ತು ಹದಿನೈದು ದಿನ, ಒಂದೆರಡು ತಿಂಗಳು ಕೂಡ ಕಾಡಿನಲ್ಲಿಯೇ ಇದ್ದು, ಸಿಕ್ಕ ಪಶುಪಕ್ಷಿಗಳ ಬೇಟೆಯ ಅಡಿಗೆ ಮಾಡಿ ಉಣ್ಣುವರು. ಗೀದವ್‌ದ ಮಾರಿಯರು ಮೂರು ಮೂರು ತಿಂಗಳು ಇಂತಹ ಬೇಟೆಯಲ್ಲಿ ತೊಡಗಿ ಸಾವಿರಾರು ಕಾಡುಪ್ರಾಣಿಗಳನ್ನು ಸಹಜವಾಗಿ ಧ್ವಂಸ ಮಾಡುತ್ತಾರೆ.

ಹಬ್ಬಗಳಲ್ಲದೇ ಆದಿವಾಸಿಗಳಲ್ಲಿ ಅನೇಕ ದೇವ ದೇವತೆಗಳ ಪೂಜೆಯಿದೆ. ರಾಮನವಮಿಯಂದು ಮಾಯಿಯ ಪೂಜೆ. ಇದರಂತೆ ಗಾಂಗೋಮಾಯಿಯ ಪೂಜೆ. ಬೈರಿಮಾಯಿ ಪೂಜೆ ಸಲ್ಲಿಸುತ್ತಾರೆ. ಆದಿವಾಸಿಗಳು ಪೂಜಿಸುವ ದೇವರಿಗೆ ಕೊನೆ ಮೊದಲಿಲ್ಲ. ಗೊಂಡರಷ್ಟೆ ಭೂತುವಾ, ಘೂಟ, ಕುಡೋಪಿನ, ತೋಡಾದಿವಾ, ವಾಗಾದಿವಾ ಸಾವುಜದಿವಾಗಳಂತಹ ಅನೇಕ ದೇವರನ್ನು ಪೂಜಿಸುವಾಗ, ಉಳಿದ ಆದಿವಾಸಿ ಪಂಗಡಗಳ ದೇವರ ಕಲ್ಪನೆ ಬರುವಂತಿದೆ. ಇಂದಿನ ದಿನಗಳಲ್ಲಿ ಅವರು ಹಿಂದೂದೇವತೆಗಳನ್ನೂ ಪೂಜಿಸಲು ಪ್ರಾರಂಭಿಸಿದ್ದಾರೆ.

1 ಪಾಂಡ್ರಿ - ಆದಿವಾಸಿ ಡೋಲು
ಸಂದೇಶ ವಾಹಕ 519

2 ಮಹುವೇಲನ ಹುತ್ತಿ -
Good bye to author - Sillhouette

3

## ೨೩. ಆದಿವಾಸಿಗಳ ಆಥಿತ್ಯ

ಆದಿವಾಸಿಗಳ ಅಂತರಾಳವನ್ನು ಅರಿಯುವ ಸಾಹಸ, ಚಕ್ರವ್ಯೂಹ ಭೇದಿಸಲು ಹೊರಟ ಅಭಿಮನ್ಯುವಿನ ಶ್ರಮದಂತೆ ಎಂಬುದು ಯತ್ನಿಸಿದಾಗಲೇ ತಿಳಿಯಬೇಕು. ಗೊತ್ತಿಲ್ಲದ ಹಳ್ಳಿಗೆ ಹೋಗಿ, ಏನೋ ತಿಳಿದುಕೊಳ್ಳದೇ ತಿರುಗಿ ಬರುವದಕ್ಕಿಂತ, ಸ್ವಲ್ಪವಾದರೂ ಸಹಕಾರ ಸಿಕ್ಕೀತು, ಎಂಬ ಭರವಸೆಯ ಸ್ಥಳಗಳನ್ನೆ ಸುಖದೇವನ ಸಹಕಾರದಿಂದ ಆರಿಸಿಕೊಳ್ಳಲಾಯಿತು. ಅವನು ತನಗೆ ಪರಿಚಯವಿದ್ದ ಕುಟುಂಬಗಳಲ್ಲಿ ಕರೆದೊಯ್ಯುತ್ತಿದ್ದ. ಹೊಸಬನ ಬಗ್ಗೆ ಆದಿವಾಸಿಗಳಿಗೆ ಸಂದೇಹ ಮೂಡಬಹುದೆಂದು, “ಈ ಬಾಬು ತುಂಬ ದೂರ ದಿಂದ ನಿಮ್ಮ ಭೇಟಿಗೆ ಬಂದಿದ್ದಾರೆ. ನಿಮ್ಮ ಆಚಾರ ವಿಚಾರಗಳು ಭಾಷೆ, ಹಬ್ಬ ಹುಣ್ಣಿವೆಗಳ ಬಗ್ಗೆ ತಿಳಿದುಕೊಳ್ಳಲು ಬಂದಿದ್ದಾರೆ. ಆದ್ದರಿಂದ ಅವರೂ ನಿಮ್ಮವ ರೆಂದು ಭಾವಿಸಿ ನಡೆದುಕೊಳ್ಳಿ” ಎಂದು ಮೊದಲಿಗೇ ಸುಖದೇವ್ ಅವರ ಮಾತಿನಲ್ಲಿ ಹೇಳಿಬಿಡುತ್ತಿದ್ದ. ಹಳ್ಳಿಯ ಮುಖಂಡರು ಭಯಭಕ್ತಿಯಿಂದ ನಮಸ್ಕರಿಸಿ, “ಈ ಬಾಬು ಎಲ್ಲಿ ಇಳಿದು ಕೊಂಡಿದ್ದಾರೆ?” ಎಂದು ಆಗಂತುಕನ ಸ್ಥಿತಿಗತಿಗಳನ್ನು ಪರೋಕ್ಷವಾಗಿ ತಿಳಿದುಕೊಳ್ಳಲು ಯತ್ನಿಸುವರು. ಅವರ ಇಂಗಿತ ತಿಳಿದ ಸುಖದೇವ. “ಇವರು ತಮ್ಮ ಮನೆಯವರನ್ನು ಊರಲ್ಲಿ ಬಿಟ್ಟು ಬಹಳ ದೂರ ಬಂದಿದ್ದಾರೆ. ಈ ಬಾಬು ಹಣದೋಚಿಕೊಳ್ಳುವ ಸರಕಾರಿ ಅಧಿಕಾರಿಯಲ್ಲ. ಬದಲಾಗಿ ನಿಮಗಾಗುವ ತೊಂದರೆಗಳನ್ನು ತಿಳಿದುಕೊಂಡು ವೃತ್ತಪತ್ರಿಕೆಯಲ್ಲಿ ಬರೆಯುತ್ತಾರೆ. ಇವೆಲ್ಲ ಸರಕಾರಕ್ಕೆ ತಿಳಿದರೆ ನಿಮಗೆ ಸಹಾಯವಾಗುತ್ತದೆ. ವಾಸಕ್ಕೆ ಎಲ್ಲೂ ಸ್ಥಳ ಸಿಗದ್ದರಿಂದ ಪ್ರವಾಸಿ ಬಂಗ್ಲೆಯಲ್ಲಿ ಇಳಿದುಕೊಂಡಿದ್ದಾರೆ”. ಎಂದು ವಿವರಿಸುವನು.

ಆದಿವಾಸಿಗಳು ಒಂದಿಲ್ಲೊಂದು ಸಂದರ್ಭದಲ್ಲಿ ನಾಗರಿಕರ ‘ಸಭ್ಯತೆ’ (ಹಿಂದಿಯಲ್ಲಿ ‘ಸಭ್ಯತಾ’-ಸಂಸ್ಕೃತಿ)ಯ ಅನುಭವ ಪಡೆದಿರುತ್ತಾರೆ. ಬಹು ಸಂಖ್ಯಾತ ಹೊರಗಿನವರು, ತಮ್ಮ ಛಾಯಾಚಿತ್ರಗಳನ್ನು ತೆಗೆದು ಮುದ್ರಿಸಿ ಹೇರಳ ಹಣಗಳಿಸುತ್ತಾರೆ ಎಂದು ಅವರು ದೃಢವಾಗಿ ನಂಬಿದ್ದರಿಂದ,

“ಅದರಿಂದ ನಮಗೇನು ಲಾಭ? ನಿಮಗೆ ಸಿಗುವ ಹಣದಲ್ಲಿ ಕೊಂಚಪಾಲು ನಮಗೂ ಸಿಗುವಂತಾದರೆ ಆ ಮಾತು ಬೇರೆ.” ಎಂದು ವಾದಿಸಿ, ಪ್ರತಿಚಿತ್ರದ ಪೋಸಿಗೂ ಐದರಿಂದ ಹತ್ತು ರೂಪಾಯಿ ಕೇಳುವರು. ಬಸ್ತರದ ಅರಸು ಪ್ರವೀರಚಂದ್ರ ಭಾಂಜದೇವರ ಅಕಾಲಮೃತ್ಯುವಿನಿಂದಾಗಿ, ಮತ್ತು ಆದಿವಾಸಿಗಳ ಪ್ರತಿಭಟನೆಯಿಂದಾಗಿ, ದೇಶದ, ಇತರ ದೇಶಗಳ ಲಕ್ಷ್ಯವೆಲ್ಲ ಅವರತ್ತ ಸೆಳೆಯಿತು. ನೂರಾರು ಪತ್ರಿಕೆಗಾರರು, ಛಾಯಾಚಿತ್ರಕಾರರು, ಹಳ್ಳಿ, ಸಂತೆ, ಜಾತ್ರೆಗಳಲ್ಲಿ ಆದಿವಾಸಿಗಳ ಛಾಯಾಚಿತ್ರಗಳನ್ನು ತೆಗೆದರು. ಇಂಥವರ ದುರ್ನಡತೆಯನ್ನು ಆದಿವಾಸಿಗಳ ಬಾಯಿಂದಲೇ ಕೇಳಬೇಕು. ನಗರದಲ್ಲಿ. ಸರ್ವವಿಧದಲ್ಲೂ ಸಹಕರಿಸಿ ಚಿತ್ರತೆಗೆಯಲು ಕೊಡುವ ಮಾಡೆಲ್ಲುಗಳ ಪರಿಚಯವಷ್ಟೆ ಇದ್ದಾತ, ಹಿಂದೆಮುಂದೆ ನೋಡದೆ, ತರುಣಿಯ ಕಿರಿಸೆರಗನ್ನು ಎತ್ತಿ ಇಳಿಬಿಟ್ಟನಂತೆ. ಕಲಕತ್ತೆಯ ಛಾಯಾಚಿತ್ರಗಾರರೊಬ್ಬರು ಅವರನ್ನು ಖರೀದಿಗೆ ಕೊಂಡವರಂತೆ ನಗ್ನರಾಗಿ ಬರಲು ಅಪ್ಪಣೆಕೊಟ್ಟರಂತೆ. ಸರಿಯಾಗಿ ಅವರನ್ನು ನಿಲ್ಲಿಸುವ ನೆವದಲ್ಲಿ ಕಾರಣವಿಲ್ಲದೇ ಅವರನ್ನು ಸ್ಪರ್ಶಿಸುವವರೇ ಹೆಚ್ಚಂತೆ. ನಾವೆಂದರೆ ಜಂಗ್ಲೀ ಪ್ರಾಣಿಗಳೆಂದು ಈ ಶಹರದವರು ತಿಳಿದುಕೊಂಡಿದ್ದಾರೆಯೋ? ಎಂದು ಕಟುವಾಗಿ ಕೊತವಾಲನೊಬ್ಬ ಹೇಳಿದ.

ಧನೋರಾ ಹಳ್ಳಿಯ ಮಾರಿಯನೊಬ್ಬನ ಮನೆಗೆ ಹೋದಾಗ ಕುಳಿತುಕೊಳ್ಳಲು ಕಿರಿಚಾಪೆಯನ್ನು ಹಾಸಿ ಯಜಮಾನ ಉಪಚರಿಸಿದ. ಎಲೆ ತುಂಡಿಗೆ ತಂಬಾಕು ಸೇರಿಸಿ, ಬೀಡಿ ತಯಾರಿಸಿ ಸೇದುವಿರಾ? ಎಂದು ವಿಚಾರಿಸಿ, ತಾನು ಸೇದುತ್ತ, “ಗೃಹಿಣಿ ಕಾಡಿಗೆ ಹೋಗಿದ್ದಾಳೆ. ಇಲ್ಲವಾದರೆ ನಿಮ್ಮನ್ನು ನೋಡಿ ಎಷ್ಟು ಆನಂದಿಸುತ್ತಿದ್ದಳೋ” ಎಂದ. ಆ ಮಾತು ಈ ಮಾತು ಆಡುತ್ತ ‘ಜೈತಕ ಸಾರ’ದ ಮಾಡಿಗೆ ಕಟ್ಟಿಟ್ಟ ಹಸಿರು ಪೊಟ್ಟಣದ ಕಡೆಗೆ ಗಮನ ಹೋಯಿತು. ಅದೇನು? ಎಂದು ಸಹಜವಾಗಿ ವಿಚಾರಿಸಿದಾಗ, ಆ ಪ್ರಶ್ನೆ ಕೇಳಬಾರದಿತ್ತು ಎಂಬಂತೆ ಸುಖದೇವ, ಮುಖವನ್ನು ಕಹಿಮಾಡಿದ. ಮಾರಿಯಾನೂ ಆ ಪ್ರಶ್ನೆಗೆ ಉತ್ತರ ಕೊಡದೇ ಮಾತು ಬದಲಿಸಿದ. ಸಾಕಷ್ಟು ನಡೆದುಬಂದು ಬಾಯಾರಿಕೆಯಾದ್ದರಿಂದ, ಅಲ್ಲಿ ನೀರು ಕುಡಿವಾಗಲೂ ಸುಖದೇವ ಮುಖ ಕಹಿ ಮಾಡಿದ. ತಾನು ಕುಡಿಯಲಿಲ್ಲ. ತಿರುಗಿ ಅಲ್ಲಿಂದ ಬೇರೊಂದು ಹಳ್ಳಿಗೆ ಹೊರಟಾಗ, ಸುಖದೇವನು, “ಇವರೆಲ್ಲ ಶೂರ್ಪನಖಿಯ ವಂಶದವರು, ಬಾಬು. ಆದ್ದರಿಂದ

ಇಲಿಯಿಂದ, ಹುಲಿಯವರೆಗೆ ಎಲ್ಲ ಪ್ರಾಣಿಗಳ ಮಾಂಸ ತಿನ್ನುತ್ತಾರೆ. ಕುದುರೆ, ಎಮ್ಮೆಯ ಮಾಂಸವನ್ನೂ ಬಿಡುವದಿಲ್ಲ. ಗಿಳಿ, ಹಕ್ಕಿ, ಹೆಗ್ಗಣಗಳನ್ನೂ ಬಿಡುವದಿಲ್ಲ. ನೀವು ನೋಡಿದ ಹಸಿರು ಪೊಟ್ಟಣದಲ್ಲಿ ಯಾರೋ ಹಂಚಿದ ಮಾಂಸವಿತ್ತು. ನಾನು ಸಾಯಲು ಬಿದ್ದರೂ ಅಂಥವರ ಕೈಯ ನೀರು ಕುಡಿಯಲಿಕ್ಕಿಲ್ಲ" ಎಂದು ತನ್ನ ಮೇಲ್ಮೆಯನ್ನು ಸಾರಿಕೊಂಡನು. ಜೊತೆಯಾಗಿ ವಾಸಿಸುವ ಆದಿವಾಸಿಗಳ ಬಗ್ಗೆಯೂ ಆತನಿಗಿರುವ ನಂಜು, ತಪ್ಪುಕಲ್ಪನೆಗಳನ್ನು ಅರಿಯುವಂತಾಯಿತು.

ತಿಳಿಹೃದಯದ ಭಿಕಾರು ಪಾಡುನ ಮನೆಗೆ ಹೋದಾಗ ಹೆಚ್ಚಿನ ಆದರದ ಸ್ವಾಗತ ಸಿಕ್ಕಿತು. ತೊಗಟೆಯ ನಾರು ಸುತ್ತಿದ ಮಂಚ ಕುಳಿತುಕೊಳ್ಳಲು ಬಂದಿತು. ಎದಿರಿನ ತೊಟ್ಟಿಲಲ್ಲಿ ಮಗುವನ್ನು ತೂಗುತ್ತ ನಗುಮುಖದ ಗೃಹಿಣಿ ನಮ್ಮ ಸಂಭಾಷಣೆಯಲ್ಲಿ ಆಸಕ್ತಿವಹಿಸಿದಳು. ಭಿಕಾರುವಿನ ತಮ್ಮ ಬಿಲ್ಲುಬಾಣಗಳೊಂದಿಗೆ ಕಾಡಿನಿಂದ ಹಿಂದಿರುಗಿದ. ಅವನ ಬೇಟೆಯ ವಿಧಾನದಲ್ಲಿ ಆಸಕ್ತಿ ತೋರಿಸಿದಾಗ, ಕಾಡಿನ ವಿವಿಧ ಪ್ರಾಣಿಗಳ ಬೇಟೆಯ ವಿಧಾನವನ್ನು ಪ್ರಾಯೋಗಿಕವಾಗಿ ಮಾಡಿತೋರಿಸಿದ. ಹಕ್ಕಿಗಳಿಗೆ ಹೆಚ್ಚಿನ ಗಾಯವಾಗದೇ ಕೆಡಹುವ ಬಾಣ ಬೇರೆ. ಕಾಡುಹಂದಿಯನ್ನು ಆಳವಾಗಿ ಇರಿಯುವದಕ್ಕೆ ಬಳಸುವ ಹರಿತ ಬಾಣ ಬೇರೆ ಎಂದೆಲ್ಲ ಪ್ರಕಾರಗಳನ್ನು ವಿವರಿಸಿದ. "ಇಂದಿನ ದಿನಗಳಲ್ಲಿ ಸುಲಭವಾಗಿ ಬೇಟೆಯಾಡುವಂತೆ ಇಲ್ಲ, ಅಲ್ಲವೇ?" ಎಂದಾಗ ಬೇಟೆಯ ಪಾಲನ್ನು ಅರಣ್ಯದ ಅಧಿಕಾರಿಗಳಿಗೂ ಕಳಿಸಿದರೆ ಯಾವ ಅಡಚಣೆಯೂ ಆಗುವದಿಲ್ಲವೆಂದ. ಅಷ್ಟರಲ್ಲಿ ಹೊಲದಲ್ಲಿ ಮರಿ ಹಾಕಿದ ಆಡು, ಮರಿಗಳನ್ನು ಹೊತ್ತು ಭಿಕಾರುವಿನ ಮಗ ಬಂದ. ಅಂದು ಅವರ ಹಜಾಮತಿಯ ದಿನವಿರಬೇಕು. ಅಂತೆಯೇ ಸ್ಥಾನೀಯ ಕಮ್ಮಾರನು ಮಾಡಿಕೊಟ್ಟ ಕೂಪನ್ನು ಮಾಡಿನಿಂದ ತೆಗೆದು, ಮಸೆದು, ವರ್ತುಲಾಕಾರದಲ್ಲಿ ಉದ್ದ ಕೂದಲು ಬಿಟ್ಟು, ಸಂಗಡಿಗನಿಂದ ಉಳಿದದ್ದನ್ನು ಕೆತ್ತಿಸಿಕೊಂಡ. ಕುಟುಂಬದವರೆಲ್ಲ ಒಬ್ಬರು ಇನ್ನೊಬ್ಬರ ಹಜಾಮತಿ ಮಾಡುತ್ತ, ಸ್ವಾವಲಂಬನ ಸಾಧಿಸಿದ್ದು ನೋಡಿ, ಅಮೇರಿಕೆಯ ಕುಟುಂಬದ ಮಾದರಿಯನ್ನು ನೆನೆಸಿಕೊಂಡು ಆಶ್ಚರ್ಯಪಡುವಂತಾಯಿತು. ಸೊಂಪಾದ ಹರಟೆ ಹೊಡೆಯುತ್ತಿದ್ದಂತೆ, "ಬಾಬು, ನಮ್ಮಲ್ಲಿ ಸ್ವಲ್ಪ ಚಹಾ ಸೇವಿಸುವಿರಾ? ನಮ್ಮೂರಿನದು ಹಾಲಿಲ್ಲದ, ಬೆಲ್ಲದ

ಚಹಾ" ಎಂದು ಭಿಕಾರು ನಮ್ರವಾಗಿ ಹೇಳಿದ. ಆತನ ಆತಿಥ್ಯ ಸ್ವೀಕರಿಸಲು ಉತ್ಸುಕತೆ ತೋರಿದ್ದರಿಂದ, ಸುಖದೇವನಿಗೆ ಕೇಳುವ ಗೋಜಿಗೆ ಹೋಗದೇ ಕಾರ್ಯೋನ್ಮುಖಿಯಾದನು.

ಆತನ ಪತ್ನಿ, ಬಿದಿರಿನ ಬುಟ್ಟಿ ಎಳೆದುಕೊಂಡು, ಕಾಡಿನಿಂದ ಕೊಯ್ದು ತಂದ ಸಾಲ್‌ದ ಎಲೆಗಳನ್ನು ಜೋಡಿಸಿ ದೊನ್ನೆಗಳನ್ನು ಮಾಡತೊಡಗಿದಳು. ಭಿಕಾರು ಬೆಂಕಿ ಮುಂದೆಮಾಡಿ ಎಲುಮಿನಿಯಂ ಪಾತ್ರೆಗೆ ನೀರು ಸೇರಿಸಿ ಒಲೆಗೇರಿಸಿದ. ಮಾಡಿನಿಂದ ಹಕ್ಕಿಯ ಗೂಡಿನಂತೆ ತೂಗುತ್ತಿದ್ದ, ಒಣಗಿದೆಲೆಗಳಿಂದ ರಚಿತವಾದ 'ಚಿಪಟಾ'ದಿಂದ ಬೆಲ್ಲದ ತುಂಡೊಂದನ್ನು ತೆಗೆದು ನೀರಿಗೆ ಸೇರಿಸಿದನು. ಗೃಹಿಣಿ ಕತ್ತಲೆಕೋಣೆಯನ್ನು ಶೋಧಿಸಿ, ಸಾಲ್ಯಾಣೆಯ ಚಾ ಪುಡಿಯ ಪೆಕೆಟ್ ಹೊರಗೆ ತಂದು ಒಡೆದು, ಕುದಿಯುವ ನೀರಿಗೆ ಸೇರಿಸಿದಳು. ಸೊಪ್ಪು ತಳಕ್ಕೆ ಕುಳಿತ ನಂತರ ತಾನು ಮಾಡಿಟ್ಟ ದೊನ್ನೆಗಳಿಗೆ ಇಷ್ಟಿಷ್ಟು ಚಹಾ ಹಾಕಿ ಕೊಟ್ಟಳು. ಅದರ ಬಣ್ಣ ಅಮೇರಿಕೆಯ ಕಪ್ಪು ಕಾಫಿಯನ್ನು ನೆನಪಿಗೆ ತಂದರೂ ಎರಡೂ ಕೈಗಳಿಂದ ದೊನ್ನೆ ಹಿಡಿದು ಹೀರಿದಾಗ, ದೇವಲೋಕದ ಸುಧೆ ಸವಿದ ಅನುಭವವಾಯಿತು. ಬಹುಶಃ ಏನೂ ದೊರೆಯದ ಕಾಡಿನಲ್ಲಿ, ಹಸಿದ ಹೊಟ್ಟೆಗೆ ಅದೇ ಹಿತವೆನಿಸಿರಬೇಕು. ಅಲ್ಲಿಂದ ಹೊರಟಾಗ ಸುಖದೇವನಿಗೆ, "ಶೂರ್ಪನಖಿಯ ವಂಶಜರಲ್ಲಿ ಚಹ ಕುಡಿದಿಯಲ್ಲ?" ಎಂದಾಗ "ಇವರು ದಂಡಾಮಿ ಮಾರಿಯರು. ಕೋಳಿತ ಮಾಂಸ ತಿನ್ನುವವರಲ್ಲ. ಅಲ್ಲದೇ ಚಹದ ನೀರನ್ನು ಕುದಿಸುವದರಿಂದ ಅದು ಕಲ್ಮಶವಾಗುವದಿಲ್ಲ" ಎಂದು ಉದ್ದ ವಿವರಣೆಯನ್ನು ಕೊಟ್ಟನು.

ಮೊಡಮ್‌ನಾಥದ ಕೊತವಾಲನನ್ನು ಹುಡುಕಿಕೊಂಡು ಹೋದಾಗ, ಅವನು ಯಾವದೋ ಪಂಚರ ಸಭೆಗೆ ಹೋಗಿದ್ದಾನೆಂದು ಗೃಹಿಣಿ ಹೇಳಿದಳು. "ಅವರು ಇದೀಗ ಬಂದುಬಿಡುತ್ತಾರೆ. ಅಲ್ಲಿಯವರೆಗೆ ಕುಳಿತು ವಿಶ್ರಾಂತಿಸಿ, ನಮ್ಮಿಂದ ಸಾಧ್ಯವಿದ್ದ ಆತಿಥ್ಯ ಸ್ವೀಕರಿಸಿ" ಎಂದು ಪರಿಪರಿಯಾಗಿ ವಿನಂತಿಸಿಕೊಂಡಳು. ಆದರೆ ಸಮಯದ ಸದುಪಯೋಗ ಮಾಡಿಕೊಳ್ಳುವದಕ್ಕೆ ಹಳ್ಳಿ ಸುತ್ತಾಡಿಬರಲೆಂದು ಹೊರಟೆವು. ಒಂದು ತಾಸಿನಲ್ಲಿ ತಿರುಗಿ ಬಂದಾಗ, ಕೊತವಾಲನೂ ಹಿಂತಿರುಗಿ ಬರುವದು ಕಾಣಿಸಿತು. ಪತಿಯ ಜೊತೆಯಲ್ಲಿ ಬಂದ ಅತಿಥಿಗಳನ್ನು ನೋಡಿ ಗೃಹಿಣಿ, "ಇವರಿಗೆ ಇಲ್ಲಿಯೇ ಇದ್ದು ಆತಿಥ್ಯ

ಸ್ವೀಕರಿಸಲು ಎಷ್ಟು ಹೇಳಿದರೂ ಹೋಗಿದ್ದರು," ಎಂದು ಗಂಡನಿಗೆ ದೂರು ಹೇಳಿದಳು. ಕೊತವಾಲನ ಪ್ರತಿಷ್ಠೆಗೆ ಅನುಗುಣವಾಗಿ ಸುಮಾರು ನೂರು ಜನ ಒಟ್ಟಿಗೆ ಕುಳಿತು ಭೋಜನ ಮಾಡುವಷ್ಟು ದೊಡ್ಡ ಬೈಠಕ್‌ಸಾರ್ ಕಟ್ಟಲಾಗಿತ್ತು. ಕೇವಲ ಕಂಬಗಳ ಮೇಲೆ ನಿಂತ ಮಾಡಿನಿಂದ ಕೇಸರಿವರ್ಣದ ಗೋವಿನ ಜೋಳದ ತೆನೆಗಳನ್ನು ತೂಗುಹಾಕಿದ್ದರು. ಗಣೇಶನ ಹಬ್ಬದ ಚಪ್ಪರ ಮತ್ತು ಫಳಾವಳಿಗಳನ್ನು ಆ ಬೈಠಕ್‌ಸಾರ್(ಸಭಾಂಗಣ)ನೆನಪಿಗೆ ತರುತ್ತಿತ್ತು. ಜೊತೆಗೆ ಪ್ರತಿಕಂಬಕ್ಕೂ ಒಂದೊಂದು ವಾದ್ಯ ತೂಗಹಾಕಿದ್ದರಿಂದ ರಂಗಮಂಟಪದಂತೆ ಅನಿಸಿತು. ಆನೆಹೊಟ್ಟೆಯಂತಹ ದೊಡ್ಡವು, ಹಂದಿಹೊಟ್ಟೆಯಂತೆ ಉಬ್ಬಿದ ಢೋಲುಗಳು ಇದ್ದವು. ದಶಾವತಾರದ ಭಾಗವತರು ನುಡಿಸುವಂತಹ ಮೃದಂಗವಿದ್ದಂತೆ ಅದಕ್ಕೂ ಉದ್ದವಿದ್ದ 'ಮಾಂದ್ರಿ' ವಾದ್ಯವೂ ಇತ್ತು. ದನ ಕರುಗಳ ಕೊರಳಿಗೆ ಕಟ್ಟುವ ಚಪ್ಪಟೆಯಾಕಾರದ ಗಂಟೆಯಂತಹ ಕೊರಡಿನಲ್ಲಿ ಕೊರೆದ ದೊಡ್ಡ 'ಘುಡಕಾ' ಬಾರಿಸಲು ಸನಿಹದಲ್ಲಿ ಜೋಡಿಕೋಲುಗಳನ್ನು ಇಟ್ಟಿದ್ದರು. ಆ ವಾದ್ಯಗಳ ಮೇಲೆಲ್ಲ ಕೈಯಾಡಿಸಿದಾಗ ಅವುಗಳಿಂದ ಹೊರಟ ನಾದ, ಅಪ್ಸರೆಯರೆಲ್ಲ ನರ್ತಿಸಬಹುದಾಗಿದ್ದ ಇಂದ್ರನ ನಾಟ್ಯರಂಗವನ್ನು ಕಲ್ಪನೆಯಲ್ಲಿ ಮೂಡಿಸಿತು. "ಬಾಬುಗೆ ವಾದ್ಯಗಳೆಂದರೆ ಬಹಳ ಇಷ್ಟವೆಂದು ತೋರುತ್ತದೆ." ಎಂದು ಕೊತವಾಲನು ಮೆಚ್ಚಿಗೆ ಸೂಚಿಸಿದಾಗ, ವಸ್ತುಸ್ಥಿತಿ ಅರಿವಿಗೆ ಬಂದು ಸಂಕೋಚವಾಯಿತು.

ಕಂಬಳಿ ಹಾಸಿ ಕುಳಿತುಕೊಳ್ಳಲು ಹೇಳಿದರು. ಎದುರಿಗೆ ಎಲುಮಿನಿಯಂ ಪಾತ್ರೆ ತುಂಬ ಲಾಂದಾ(ಗಂಜಿಯ ಸೆರೆ)ಬಂದಿತು. ಕೊತವಾಲನು ತನ್ನೊಂದಿಗೆ ಬಂದವರನ್ನು, ನಮ್ಮ ಜೊತೆಗೆ ಪಾನಕ್ಕೆ ಆಮಂತ್ರಿಸಿದ. ಕೂಗುಹಾಕಿ, ಕೊಂಚ ದೂರವಿದ್ದ ಆತ್ಮೀಯರನ್ನೂ ಆಮಂತ್ರಿಸಿದ. ಗೃಹಿಣಿ ಎಲ್ಲರ ಕೈಯಲ್ಲಿ ಒಂದೊಂದು ದೊನ್ನೆ ಕೊಟ್ಟು, ಒಂದೊಂದು 'ಓರಕಾ' (ಕಿರಿ ಕುಂಬಳಕಾಯಿ ಪೊಳ್ಳು ಮಾಡಿ, ತಯಾರಿಸಿದ ಸೌಟು,) ತುಂಬ ಲಾಂದಾ ಸುರಿದಳು. ಒಂದೇ ಗುಟುಕಿಗೆ ಅದನ್ನು ಖಾಲಿಮಾಡಿ ತಿರುಗಿ ದೊನ್ನೆ ತುಂಬಿಸಿಕೊಂಡರು. ಮೂರು ದೊನ್ನೆ ಮುಗಿಸುವ ಹೊತ್ತಿಗೆ ಕೊತವಾಲನ ರಸಿಕತೆ ಜಾಗೃತವಾಗಿರಬೇಕು. ಅಂತೆಯೇ, "ಬಾಬು, ನನ್ನ ಪತ್ನಿ ಮುದುಕಿಯಾಗಿಬಿಟ್ಟಿದ್ದಾಳೆ. ಆದ್ದರಿಂದ ನಿಮ್ಮ ಪರಿಚಯದ ಒಳ್ಳೇ ಹುಡುಗಿ ಇದ್ದರೆ ಹೇಳಿ, ಮದುವೆಯಾಗುತ್ತೇನೆ"

ಎಂದು ಪತ್ನಿಯನ್ನು ರೇಗಿಸಲು ಯತ್ನಿಸಿದ. ಅವಳೂ ಹಿಂದೆಬೀಳದೇ, "ಇವನೆಂತಹ ತರುಣ ! ಇದಾಗಲೇ ಅಜ್ಜನಾದರೂ ಹೆಣ್ಣಿನ ಹುಚ್ಚು ಹೋಗದು. ಅವನಿಗೆ ವಧು ಹುಡುಕುವಾಗ ನನಗೊಬ್ಬ ವರನನ್ನೂ ಹುಡುಕಿಬಿಡಿ" ಎಂದಾಗ ಎಲ್ಲರೂ ನಕ್ಕರು. ಬಿದ್ದು ಬಿದ್ದು ನಕ್ಕರು. ಅಮಲು ಸ್ವಲ್ಪ ಇಳಿದಾಗ, "ಬಾಬು ನೀವು ನಮ್ಮ ಲಾಂದಾ ಸೇವಿಸಲೇ ಇಲ್ಲವಲ್ಲ" ಎಂದು ಮರುಗಿ ಹತ್ತಿರದ ಯುವಕನೊಬ್ಬನ ಕಿವಿಯಲ್ಲಿ ಏನೋ ಪಿಸುಗುಟ್ಟಿದನು. ಹದಿನೈದು ನಿಮಿಷಗಳ ನಂತರ ಆ ಯುವಕ ಒಂದು ಘಟ್ಟ 'ತುಂಬಾ' ತುಂಬ ಘಮ ಘಮಿಸುವ 'ಸಲ್ಫಿ' (ಭರಣಗಿ ಸರಾಯಿ) ಯೊಂದಿಗೆ ಹಿಂದಿರುಗಿದ. ಎಲ್ಲರ ಬಾಯಲ್ಲಿ ನೀರೂರಿತು. ಅತಿಥಿ ಬೇಡವೆಂದಾಗ ಆತನ ಗೌರವಾರ್ಥ, ಎಲ್ಲರೂ ಚಪ್ಪರಿಸಿ ಸೇವಿಸಿದರು. ಇಂಥ ಸದವಕಾಶ ಹುಸಿಹೋಗಗೊಡದೇ ಸುಖದೇವನೂ ಚೆನ್ನಾಗಿ ಸೇವಿಸಿದ. ಇದೇ ಸಮಯವೆಂದು ಯಾರಿಗೋ ಗಾಂಜಾದ ನೆನಪಾಯಿತು. ಕೊತವಾಲ ಅದನ್ನೂ ಎಲ್ಲಿಂದಲೋ ತರಿಸಿದ. ಚಿಲುಮೆಗೆ ಸೇರಿಸಿ, ಒಬ್ಬೊಬ್ಬರಾಗಿ ಸೇದಿದಾಗ, ಹನ್ನೆರಡು ವರ್ಷದ ಹುಡುಗನಿಗೂ ಹುರುಪು ಬಂದಿತು ! ಆದರೆ ಅಭ್ಯಾಸವಿಲ್ಲದ್ದರಿಂದ, ಒಂದೆರಡು ದಮ್ಮು ಎಳೆದು, ಕೆಮ್ಮುತ್ತ ತಲೆ ಸುತ್ತುತ್ತದೆಂದು ಮಲಗಿಬಿಟ್ಟ.

ಲಾಂದಾ, ಸಲ್ಫಿ, ಗಾಂಜಾಗಳ ಮತ್ತಿನಿಂದ ಆದಿವಾಸಿಗಳು ಮುಕ್ತ ಮನಸ್ಸಿನಿಂದ ಮಾತನಾಡಲಾರಂಭಿಸಿದರು. ಎಲ್ಲಿಂದಲೋ ಮೃದಂಗನಾದ ಗಾಳಿಯಲ್ಲಿ ತೇಲಿಬಂದಿತು. ಕೊತವಾಲನು ಎದ್ದು ತೂರಾಡುತ್ತ, ಒಂದೆರಡು ನಿಮಿಷಗಳ ವರೆಗೆ ಅಲ್ಲಿದ್ದ ಮೃದಂಗದ ಮೇಲೆ ಕೈಯಾಡಿಸಿ ಉತ್ತರಕೊಟ್ಟ. "ಬಾಬು, ಮೃದಂಗ ಏಕೆ ನುಡಿಸಿದೆ ಎಂದು ಅರ್ಥವಾಯಿತೇ? ಅಲ್ಲಿಯ ನಮ್ಮ ಸ್ನೇಹಿತ, ನೀವೆಲ್ಲ ಎಲ್ಲಿ ಇದ್ದೀರಿ?" ಎಂದು ವಾದ್ಯಬಾರಿಸಿ ವಿಚಾರಿಸಿದ. ಅದಕ್ಕೆ ನಾನು ನಾವೆಲ್ಲ ಇಲ್ಲಿ ಇದ್ದೇವೆ, ಅತಿಥಿಗಳು ಬಂದಿದ್ದಾರೆ. ನೀನೂ ಬಂದು ಸೇರಿಕೋ 'ಎಂದು ಪ್ರತ್ಯುತ್ತರ ಕೊಟ್ಟಿದ್ದೇನೆ' ಎಂದು ವಿವರಿಸಿದ. ಟೆಲಿಗ್ರಾಂ ಟೆಲಿಫೋನ, ವಾಯರಲೆಸ್‌ಗಳಿಲ್ಲದಿದ್ದ ಆದಿವಾಸಿಗಳು ತಮ್ಮಲ್ಲಿ ಇಟ್ಟು ಕೊಳ್ಳುವ ಸಂಪರ್ಕಪದ್ಧತಿ ನೋಡಿ ವಿಸ್ಮಯವಾಯಿತು. ಕಾಡುಕಿಚ್ಚು ಹಬ್ಬಿದಾಗ, ಹತ್ತಿಪ್ಪತ್ತು ಮೈಲು ದೂರದ ಹಳ್ಳಿಗಳಿಗೆ ಕೂಡ ಡೋಲು ಬಾರಿಸಿಯೇ ಸಂದೇಶ ತಲುಪಿಸುತ್ತಾರೆಂದು ಸುಖದೇವ ಹೇಳಿದ. ಅಷ್ಟರಲ್ಲಿ

ಡೋಲಿನ ಆಮಂತ್ರಣ ಪಡೆದವರು ಬಂದು ಸುರಾಪಾನ ಮಾಡಿ ಹರಟೆಯಲ್ಲಿ ಸೇರಿಕೊಂಡರು. ಒಬ್ಬೊಬ್ಬರು ಒಂದೊಂದು ವಾದ್ಯ ಎತ್ತಿಕೊಂಡು ಅತಿಥಿಯ ಗೌರವಾರ್ಥ ನರ್ತಿಸಲಾರಂಭಿಸಿದರು. ಎಲ್ಲರೂ ಕಂಠಪೂರ್ತಿ ಕುಡಿದದ್ದರಿಂದ, ಅವರ ತತ್ತರವೆತ್ತರ ಹೆಜ್ಜೆ ಹಾಕಿದ ನರ್ತನ ನೆನೆಸಿಕೊಂಡರೇ ನಗುಬರುವಂತೆ ಇತ್ತು. ಗೃಹಿಣಿಯೂ ನೃತ್ಯದಲ್ಲಿ ಸೇರ್ಪಡೆಯಾದಳು! ಆಗಂತುಕರನ್ನೂ ಸೇರುವಂತೆ ಒತ್ತಾಯಿಸಿದಳು. ಹಿಂದೆ ಮುಂದೆ ಸರಿಯುವಾಗ ಒಬ್ಬಿಬ್ಬರು ಬಿದ್ದುದರಿಂದ ನೃತ್ಯ ಅಲ್ಲಿಗೇ ನಿಂತಿತು. ಹೊರಟುನಿಂತಾಗ ತಮ್ಮ ಯಾವ ಆತಿಥ್ಯವನ್ನೂ ಸ್ವೀಕರಿಸಲಿಲ್ಲವೆಂದು ಕೊತವಾಲ ನೊಂದುಕೊಂಡ. "ನಿಮ್ಮ ಈ ಆದರಕ್ಕಿಂತ ಹೆಚ್ಚಿನ ಆತಿಥ್ಯ ಬೇರಿಲ್ಲ"ವೆಂದು ಸಮಾಧಾನ ಹೇಳಬೇಕಾಯಿತು.

ಸೋನಾರು, ಪಾಲಸಿಹಳ್ಳಿಯ ಪಟೇಲ. ಊರಿಗೆ ಬಂದು ಪಟೇಲನನ್ನು ಕಾಣದೇ ಹೋಗುವದು, ಹಳ್ಳಿಗೆ ಅವಮಾನ ಮಾಡಿದಂತೆ, ಎಂದು ಭಾವಿಸಲಾಗುವದರಿಂದ ಅವನಲ್ಲಿ ಹೋದೆವು. ಬೈಠಕಸಾರ್ ಶುಚಿಯಾಗಿದ್ದರೂ ಇನ್ನೊಮ್ಮೆ ಗುಡಿಸಿ, ಕಂಬಳಿ ಹಾಸಿ ಕೂಡ್ರಲು ಪಟೇಲ ವಿನಂತಿಸಿಕೊಂಡ. ಬಡವನ ಮನೆ ನೋಡಿ ಬಾಬು'ಎಷ್ಟು ನಗುವರೋ ಎಂದು ರಾಗವೆಳೆದ. ನಮ್ಮ ನಗರದ ನೂಕುನುಗ್ಗಲಾಟವಿಲ್ಲದ ಪ್ರಶಾಂತ ವಾತಾವರಣದಲ್ಲಿ ನಡೆಸುವ ನಿಮ್ಮ ಜೀವನ ನೋಡಿ ಮಾರುಹೋಗಿದ್ದೇನೆ. ಕುಟುಂಬದವರು ಒಪ್ಪಿದರೆ ಇಲ್ಲಿಯೇ ನೆಲೆಸಬೇಕೆಂದಿದ್ದೇನೆ ಎಂದಾಗ ಅದನ್ನು ನಂಬದೇ ಪಟೇಲ, ಗಹಗಹಿಸಿ ನಕ್ಕ. 'ರಂಗುರಂಗಿನ ಜೀವನ ಬಿಟ್ಟು ಈ ಕಾಡು-ಕೊಂಪೆಗೆ ನೀವು ಏಕೆ ಬಂದೀರಿ', ಎಂದು ಮರುಸವಾಲು ಹಾಕಿದ. ನಗರದವರಿಗೆ ಅರಣ್ಯವಾಸ ಎಷ್ಟು ಆಕರ್ಷಕವಾಗಿ ಕಾಣಿಸುತ್ತದೆ ಎಂದು ವಿವರಿಸುವದು ವ್ಯರ್ಥದ ಸಾಹಸವೆಂದು ಅದಕ್ಕೆ ಕೈಹಾಕಲಿಲ್ಲ.

ಒಂದು ನಿಮಿಷವೂ ವ್ಯರ್ಥಮಾಡದೇ ದುಡಿಯುವ ಪಟೇಲನ ಪತ್ನಿ ಅಪೂರ್ವ ಸುಂದರಿ. ಕಾಡಿಗೆಯಂತಹ ಕೇಶರಾಶಿಯನ್ನು ಶಿರದ ಬಲಭಾಗಕ್ಕೆ ಬರುವಂತೆ ಮುಡಿಕಟ್ಟಿದ್ದಳು. ಕೊರಳಿಗೆ ಬೆಳ್ಳಿಯ ಗೋಪಿನ ಸಂಗಡ ಮಣಿಸರಗಳನ್ನು ಹಾಕಿಕೊಂಡಿದ್ದಳು. ತೋಳುಗಳಿಗೆ ಆಕರ್ಷಕವಾದ ಹಚ್ಚೆಯಿತ್ತು. ಮುಂಗೈಯಲ್ಲಿ ಬೆಳ್ಳಿಯ ಮತ್ತು ಕಾಜಿನ ಬಳೆಗಳಿದ್ದವು. ಉಟ್ಟಿದ್ದು ತುಂಡು ಸೀರೆಯಾದರೂ ಬೆಡಗಿನಲ್ಲಿ ಎಂಥ ನಗರದ ರಮಣಿಯನ್ನೂ ನಾಚಿಸುವಂತಿದ್ದಳು.

ಪತಿದೇವನು ಮಾತಿನಲ್ಲಿ ಮೈಮರೆತಾಗ, ಆಕೆ ಹತ್ತಿರದ ಕೆರೆಗೆ ಹೋಗಿ 'ತಂಬಾ'ದಲ್ಲಿ ನೀರು ತಂದಳು. ಕಾಳುಕಡಿಗಳನ್ನು ಬಿಸಿಲಿಗೆ ಹರವಿದಳು. ಎಲೆಗಳಿಂದ ದೊನ್ನೆಗಳನ್ನು ತಯಾರಿಸಿದಳು. ಮಲಗಿ ಎದ್ದ ಮಗುವಿಗೆ ಹಾಲುಣಿಸಿದಳು. ಟಾಂಗಿಯಿಂದ ಕಟ್ಟಿಗೆಯನ್ನು ಉರುವಲಿಗಾಗಿ ಸೀಳಿದಳು.

ತಮ್ಮ ಹಳ್ಳಿಗೆ ಬಂದು ಹಸಿದ ಹೊಟ್ಟೆಯಲ್ಲಿ ಹಿಂದಿರುಗುವಂತೆ ಇಲ್ಲವೆಂದು ಅವರು ಪಟ್ಟುಹಿಡಿದರು. ಅವರ ಅಡಿಗೆಯ ರುಚಿಯನ್ನು ನೋಡುವ ಅಪೂರ್ವ ಸಂಧಿಯೂ ದೊರೆತದ್ದರಿಂದ ಒಪ್ಪಿಕೊಂಡೆ. ಆದರೆ ಸುಖದೇವ ಅವರ ಕೈಯ್ಯದನ್ನು ಉಣ್ಣಲು ಒಪ್ಪಲಿಲ್ಲ. ತಾನೇ ಅಡಿಗೆ ಮಾಡಲು ಮುಂದಾದ. ಇದರಿಂದ ನಿರಾಸೆಯಾಯಿತು. ಅಡಿಗೆಗೆಂದು ಗೃಹಿಣಿ ಸ್ವಚ್ಛವಾಗಿದ್ದ ನೆಲವನ್ನು ಇನ್ನೊಮ್ಮೆ ಸಾರಿಸಿಕೊಟ್ಟಳು. ಎಲ್ಲಿಂದಲೋ ಮೂರು ಕಲ್ಲು ತಂದು ಜೋಡಿಸಿ ತಾತ್ಕಾಲಿಕ ಒಲೆ ಮಾಡಿದಳು. ಯುವಕನೊಬ್ಬ ಚೆನ್ನಾಗಿ ಒಣಗಿದ ಕಟ್ಟಿಗೆ ಸೀಳುಗಳನ್ನು ಸೌದೆಗೆ ತಂದುಕೊಟ್ಟ. ಸೋನಾರು, ಅಕ್ಕಿ, ಉಪ್ಪು, ಅರಿಸಿಣ, ಮೆಣಸು, ಸಾಸಿವೆಎಣ್ಣೆಗಳನ್ನು ವಿವಿಧ ದೊನ್ನೆಗಳಲ್ಲಿ ತಂದಿಟ್ಟ. ಮನೆಯುವಳು ಕೈದೋಟದಿಂದ ಒಂದಿಷ್ಟು ಅವರೇಕಾಯಿ ತಂದುಕೊಟ್ಟಳು. ಅವರು ಕೊಟ್ಟ ಎಲುಮಿನಿಯಂ ಪಾತ್ರೆಗಳನ್ನು ಶುಚಿಗೊಳಿಸಿ ಸಂಗಡಿಗನು, ಅಡಿಗೆಯನ್ನು ಪ್ರಾರಂಭಿಸಿದ. ಒಂದು ತಾಸಿನಲ್ಲಿ ಅನ್ನ, ಪಲ್ಯವಾಗಲು ಕುರಿಕೋಣ ಬಿದ್ದು ಹೋದವು. ಬೆಳಿಗಿನಿಂದ ಬರಿಹೊಟ್ಟೆಯಲ್ಲಿ ೨೬ ಕಿ.ಮಿ. ನಡೆದು, ಹೊಟ್ಟೆ ಒಂದೇ ಸವನೆ ತಾಳಹಾಕುತ್ತಿತ್ತು. ಅಡಿಗೆಯ ಸುವಾಸನೆ, ಬಾಯಿ ನೀರೂರುವಂತೆ ಮಾಡಿತು. ಒಂದು ದೊನ್ನೆ ಅನ್ನ ಮತ್ತು ಪಲ್ಯ ಬಹಳ ರುಚಿಯೆನಿಸಿದವು. ಮಾಡಿದ ಅಡಿಗೆಯ ಮುಕ್ಕಾಲು ಪಾಲನ್ನು ಸುಖದೇವನೇ ಊಟಮಾಡಿದ. ನಂತರ ಹೊಳೆಗೆ ಹೋಗಿ ಬರುವಂತಾದ್ದರಿಂದ ಅವನಿಗೆ ಅಷ್ಟೊಂದು ಕೊಡಬಾರದಾಗಿತ್ತು ಅನಿಸಿತು.

ಆತಿಥ್ಯದ ಸವಿನೆನಪಿಗಾಗಿ ಪಟೇಲನ ಛಾಯಾಚಿತ್ರ ತೆಗೆಯುತ್ತೇನೆಂದಾಗ, ಅವನು ಪತ್ನಿಯನ್ನೂ ಕರೆದನು. ಅವಳು ಅಂಜುತ್ತ, ನಾಚುತ್ತ ದೂರ ನಿಂತಾಗ, ಸೋನಾರು ಅವಳನ್ನು ಎಳೆದು ತಂದು ಪಕ್ಕಕ್ಕೆ ನಿಲ್ಲಿಸಿಕೊಂಡ. ಈಗ ಆಕೆ ಮೈಚಳಿ ಬಿಟ್ಟು ಮಗುವನ್ನೂ ಕರೆತಂದಳು. ಪಟೇಲ ನೃತ್ಯದ ವೇಷ ಧರಿಸಿ ಇನ್ನೊಂದನ್ನು ತೆಗೆಸಿಕೊಂಡ. ತಮ್ಮೆಲ್ಲರ ಚಿತ್ರಗಳನ್ನು ಮರೆಯದೇ ಕಳಿಸಬೇಕೆಂದು ಕೇಳಿ

ಕೊಂಡ. ಹೊರಟುನಿಂತಾಗ ಕೃತಜ್ಞತೆಯಿಂದ ಐದು ರೂಪಾಯಿ ಕೊಟ್ಟಾಗ ಆತನಿಗೆ ಬಹಳೇ ಸಂತೋಷವಾಗಿತ್ತು. ಕಾಲುದಾರಿ ಮುಗಿಯುವತನಕ ಬಂದು ಬೀಳ್ಕೊಟ್ಟ. ನಂತರದ ದಿನಗಳಲ್ಲಿ ಕಳಿಸಿದ ಅವರ ಭಾವ ಚಿತ್ರಗಳು ತಲುಪಿದವೇ ಇಲ್ಲವೆಂಬುದು ಇಂದಿಗೂ ತಿಳಿಯದು. ಆದರೆ ಅವರ ಆತಿಥ್ಯದ ನೆನಹಿಗಾಗಿ ಕರ್ತವ್ಯದೃಷ್ಟಿಯಿಂದ ಅವನ್ನು ಅಂಚೆಗೆ ಸೇರಿಸಿದ್ದೆ.



# ಮನೋಹರ ಗ್ರಂಥಮಾಲೆ, ಧಾರವಾಡ.

## ಚಂದಾ ಪರಿಚಯ

* ೧೫-೮-೧೯೩೩ರಂದು ಈ ಗ್ರಂಥಮಾಲೆ ಪ್ರಾರಂಭವಾಗಿದೆ.
* ಕನ್ನಡ ಸ್ವತಂತ್ರ-ಕೃತಿ-ಪ್ರಕಟನೆಗೇ ಮೀಸಲಾಗಿದೆ.
* ಈ ವರೆಗೆ–ಐವತ್ತು ವರ್ಷಗಳ ವರೆಗೆ – ಅವಿಚ್ಛಿನ್ನವಾಗಿ ಈ ಪ್ರಕಟನೆಯ ಕೆಲಸ ಮಾಡುತ್ತ ಬಂದಿದೆ.
* ಕಾದಂಬರಿ, ಸಣ್ಣಕತೆ, ಏಕಾಂಕ, ನಾಟಕ, ಹರಟೆ, ಪ್ರವಾಸಕಥನ, ದಿನಚರಿ, ಪತ್ರಸಾಹಿತ್ಯ, ಜೀವನಚರಿತ್ರೆ, ಆತ್ಮಚರಿತ್ರೆ ಮೊದಲಾದ ಅನೇಕ ಸಾಹಿತ್ಯ ಪ್ರಕಾರಗಳಲ್ಲಿಯೂ ಗ್ರಾಹಕರಾದವರಿಗೆ ಗ್ರಂಥಗಳನ್ನು ಒದಗಿಸಿಕೊಟ್ಟಿದೆ.
* ೨೫ವರ್ಷಗಳ ಸವಿನೆನಪಿಗೆಂದು "ನಡೆದು ಬಂದ ದಾರಿ" ಎಂಬ ಮೂರು ಸಂಪುಟಗಳ (ಒಟ್ಟು ೨೫೦೦ ಪುಟ) ಹೊತ್ತಿಗೆಯನ್ನು ಹೊರತಂದು ಕನ್ನಡ ಸಾಹಿತ್ಯೇತಿಹಾಸಕ್ಕೆ ನೆರವಾಗಿದೆ.
* ೫೦ ವರ್ಷಗಳ ಸವಿನೆನಪಿಗೆಂದು "ಪುಟ ಬಂಗಾರ" ಎಂಬ ವಿಶೇಷ ಸಂಚಿಕೆಯನ್ನು ಹೊರತರಲಿದೆ.
* ಚಂದಾದಾರರಾದವರಿಗೆ ಒಂದು ವರ್ಷದಲ್ಲಿ ಸುಮಾರು ೬೫೦ ಪುಟಗಳನ್ನು ಗ್ರಂಥರೂಪದಲ್ಲಿ ಮಾಲೆಯು ಸಲ್ಲಿಸುತ್ತದೆ.

---

* ವಾರ್ಷಿಕ ಚಂದಾ (ಅಂಚೆವೆಚ್ಚ ಪ್ರತ್ಯೇಕ)
  ಸಾದಾ ಪ್ರತಿಗಳಿಗೆ ಮೂವತ್ತೈದು ರೂ. (೩೫/–)
  ಕ್ಯಾಲಿಕೊ ಪ್ರತಿಗಳಿಗೆ ಐವತ್ತು ರೂ. (೫೦/–)

---

* ಚಂದಾಹಣವನ್ನು ಮನಿಯಾರ್ಡರ್ ಮೂಲಕವಾಗಲಿ, ಬ್ಯಾಂಕ್ ಚೆಕ್ ಮೂಲಕವಾಗಿಯಾಗಲಿ ಸಲ್ಲಿಸಬಹುದು. ವ್ಹಿ. ಪಿ. ಕಳಿಸಲಾಗುವದಿಲ್ಲ.
* ಚೆಕ್ಕುಗಳನ್ನು ಕಳಿಸುವಾಗ ದಯವಿಟ್ಟು 'ಬ್ಯಾಂಕ್ ಕಮಿಶನ್' ೩/–ರೂ ಸೇರಿಸಿ ಕಳುಹಿಸಬೇಕು.